# ಹಿಂದಿ ಹಾಗೂ ಕನ್ನಡ ರಾಮಾಯಣಗಳಲ್ಲಿ ನಿರ್ಲಕ್ಷಿತ ಸ್ತ್ರೀ ಪಾತ್ರಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಹಿಳಾ ಅಧ್ಯಯನ ವಿಭಾಗಕ್ಕೆ
ಸಲ್ಲಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ)


ಸಂಶೋಧಕರು

ಈ. ನಾಗರತ್ನ

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಮುಖ್ಯಸ್ಥರು, ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬




# ಹಿಂದಿ ಹಾಗೂ ಕನ್ನಡ ರಾಮಾಯಣಗಳಲ್ಲಿ ನಿರ್ಲಕ್ಷಿತ ಸ್ತ್ರೀ ಪಾತ್ರಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಹಿಳಾ ಅಧ್ಯಯನ ವಿಭಾಗಕ್ಕೆ
ಸಲ್ಲಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ)



ಸಂಶೋಧಕರು

ಈ. ನಾಗರತ್ನ

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ
ಮುಖ್ಯಸ್ಥರು, ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬

# ಸಂಶೋಧಕರ ಪ್ರಮಾಣ ಪತ್ರ

"ಹಿಂದಿ ಹಾಗೂ ಕನ್ನಡ ರಾಮಾಯಣಗಳಲ್ಲಿ ನಿರ್ಲಕ್ಷಿತ ಸ್ತ್ರೀ ಪಾತ್ರಗಳು" ಎಂಬ ವಿಷಯದಲ್ಲಿ ಮಹಾಪ್ರಬಂಧವನ್ನು ಡಾ. ಶಿವಾನಂದ ಎಸ್. ವಿರಕ್ತಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಮಹಿಳಾ ಅಧ್ಯಯನ ವಿಭಾಗ,ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

ಈ. ನಾಗರತ್ನ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ. ೫೮೩ ೨೭೬

ದಿನಾಂಕ : ೦೪.೦೧.೨೦೧೬
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪ್ರಮಾಣ ಪತ್ರ

"ಹಿಂದಿ ಹಾಗೂ ಕನ್ನಡ ರಾಮಾಯಣಗಳಲ್ಲಿ ನಿರ್ಲಕ್ಷಿತ ಸ್ತ್ರೀ ಪಾತ್ರಗಳು" ಎಂಬ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ **ಈ ನಾಗರತ್ನ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**ದಿನಾಂಕ : ೦೪.೦೧.೨೦೧೬**
**ಸ್ಥಳ : ವಿದ್ಯಾರಣ್ಯ**

**ಡಾ. ಶಿವಾನಂದ ಎಸ್. ವಿರಕ್ತಮಠ**
**ಮುಖ್ಯಸ್ಥರು,**
**ಮಹಿಳಾ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

# ಪರಿವಿಡಿ

ಅಧ್ಯಾಯ–೪

೪. ಊರ್ಮಿಳೆ



ಅಧ್ಯಾಯ–೫

೫. ರಾಮಾಯಣದ ಪ್ರಮುಖ ಸ್ತ್ರೀ ಪಾತ್ರಗಳು



ಅಧ್ಯಾಯ–೬

## ಅಧ್ಯಾಯ–೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ೧.೧ ಪೀಠಿಕೆ

"ಮಾನವ ಜನಾಂಗ ಈಗಲೂ ಸಾಧಿಸಲು ಬಯಸುವಂತಹ ಆದರ್ಶ ನಾಗರೀಕತೆಯನ್ನು ಚಿತ್ರಿಸುವ ರಾಮಾಯಣ ಮಹಾಭಾರತಗಳು ನಿಜವಾಗಿ ಪ್ರಾಚೀನಾರ್ಯರ ಜೀವನ ಮತ್ತು ಪ್ರಜ್ಞೆಯ ವಿಶ್ವಕೋಶಗಳಾಗಿವೆ"– ಎಂದು ಸ್ವಾಮಿ ವಿವೇಕಾನಂದರು ಉದ್ಘೋಷಿಸಿದರು[೧]. ಅದೇ ರೀತಿ ವಿಶ್ವಸಾಹಿತ್ಯದಲ್ಲಿಯೇ ಜಾತ್ಯಾತೀತ ಮೂಲವನ್ನು ಹೊಂದಿರುವ ಬೇರಾವ ಕೃತಿಯು ಜನಾಂಗವೊಂದರ ಜೀವನ ಮತ್ತು ವಿಚಾರ ಮಾರ್ಗದ ಮೇಲೆ, ರಾಮಾಯಣದಷ್ಟು ಗಾಢವಾದ ಪ್ರಭಾವವನ್ನು ಬೀರಿಲ್ಲವೆಂಬುದು ಮೆಕ್ಡಲ್ಲನ ಅಭಿಪ್ರಾಯವಾಗಿದೆ[೨]. ರಾಮಾಯಣವನ್ನು ಇತಿಹಾಸವೆಂದು ಹೇಳುವ ವಿದ್ವಾಂಸರಿದ್ದಾರೆ. ರಾಮಾಯಣವು ತನ್ನನ್ನು ಕಾವ್ಯವೆಂದೂ, ಆಖ್ಯಾನವೆಂದೂ, ಇತಿಹಾಸವೆಂದೂ, ಧರ್ಮಾರ್ಥಕಾಮಗಳನ್ನು ವಿವೇಚಿಸುವ ಕೃತಿಯೆಂದು ಕರೆದುಕೊಂಡಿದೆ. ತನ್ನ ಕಾಲದಲ್ಲಿ ಅತ್ಯಂತ ಜನಪ್ರಿಯವಾಗಿದ್ದ ರಾಮಕಥೆಯ ಆಧಾರದ ಮೇಲೆ ವಾಲ್ಮೀಕಿಯು ಸುಂದರ ಕಾವ್ಯವನ್ನು ನಿರ್ಮಾಣ ಮಾಡಿದನೆಂದು ಹೇಳಲಾಗಿದೆ.

ರಾಮಕಥೆಯ ಮೂಲವನ್ನು ಹೇಳುವಾಗ ಇಡೀ ರಾಮಾಯಣವು ಅಖಂಡವಾಗಿ ಒಂದೇ ಕತೆಯಲ್ಲ, ಎರಡು ಮೂರು ಭಾಗಗಳು ಬೇರೆ ಬೇರೆಯಾಗಿ ಮಿಶ್ರಗೊಂಡು ರಾಮಯಣವಾಗಿದೆ ಎಂದು ಹೇಳುವ ವಿದ್ವಾಂಸರು ಇದನ್ನು ದಾಖಲೆಗಳ ಸಮೇತ ನಿರೂಪಿಸುತ್ತಾರೆ. ರಾಮನ ವನವಾಸವು ಮಾತ್ರ ಐತಿಹಾಸಿಕ ಭಾಗವಾಗಿದೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ರಾಮಾಯಣದ ಮೂಲ ಕಥೆಯನ್ನು ಡಿ.ಸಿ. ಸೇನ್ ರವರು ಮೂರು ಬಗೆಯಾಗಿ ಗುರುತಿಸುತ್ತಾರೆ; 'ಮೊದಲನೆಯದು ದಶರಥ ಜಾತಕ, ಎರಡನೆಯದು ವಿಶ್ರುತನೂ ಉದಾರನೂ ಆದ ಬ್ರಾಹ್ಮಣ ನಾಯಕ ರಾವಣನನ್ನು ಕುರಿತಂತೆ ದಕ್ಷಿಣ ಭಾರತದಲ್ಲಿ ಪ್ರಚಾರದಲ್ಲಿದ್ದ ಕಥಾನಕಗಳ ಪುಂಜ ಮತ್ತು ಮೂರನೆಯದು ಭಾರತದಲ್ಲಿ ಒಮ್ಮೆ ಹೆಚ್ಚಾಗಿ ರೂಢಿಯಲ್ಲಿದ್ದ ವಾನರಪೂಜೆಗೆ ಸಂಬಂಧಿಸಿದ ಕಥೆಗಳ ಜನಜನಿತವಾದ ವ್ಯೂಹಗಳು' ಎಂಬುದಾಗಿ[೩].

ಬಲ್ಕನ ಸಂಶೋಧನೆಗಳು ರಾಮಾಯಣವು ಅಖಂಡವಾದುದೆಂದೂ, ಬೇರೆ ಬೇರೆ ಕಥೆಗಳ ಮಿಶ್ರಣವಲ್ಲವೆಂದೂ ಚಾರಿತ್ರಿಕವೆಂದು ಸಾಂಪ್ರದಾಯಿಕ ವಾದವನ್ನೇ ಪುಷ್ಟೀಕರಿಸುತ್ತವೆ. ಸೇನ್ ಮತ್ತಿತರು ವಾದಿಸುವಂತೆ ರಾಮಾಯಣದ ಕಾಲಕ್ಕೂ ಹಿಂದೆ ರಾವಣ ಮತ್ತು ಹನುಮಂತನಿಗೆ ಸಂಬಂಧಿಸಿದ ಕಥೆಗಳೂ ಸ್ವತಂತ್ರವಾಗಿ ಪ್ರಚಾರದಲ್ಲಿದ್ದವೆಂದು ಹೇಳಲು ಯಾವ ಆಧಾರವೂ ಇಲ್ಲವೆಂಬುದನ್ನು ಬಲ್ಕ್ ವಾಸ್ತವಿಕವಾಗಿ ಮನಗಾಣಿಸಿದ್ದಾನೆ.

ರಾಮಾಯಣದ ನೈಜ ಪಾಠ ಮತ್ತು ಪ್ರಕ್ಷಿಪ್ತ ಭಾಗಗಳನ್ನು ವಿವೇಚಿಸುವ ಬದಲು ರಾಮಾಯಣದ ಮೂಲ ಪಾಠವು ದಾಕ್ಷಿಣಾತ್ಯ ಸಂಸ್ಕರಣಗಳಲ್ಲಿ ಸುರಕ್ಷಿತವಾಗಿದೆ ಎಂಬ ಮಾತು ಸಾಕು ಎಂಬುದು ಸದ್ಯದ ಅಭಿಪ್ರಾಯ. ಏಕೆಂದರೆ ಪ್ರಸ್ತುತ ಮಹಾಪ್ರಬಂಧವೂ ರಾಮಾಯಣದ ನಿರ್ಲಕ್ಷಿತ ಸ್ತ್ರೀ ಪಾತ್ರಗಳನ್ನು ಕೇಂದ್ರೀಕರಿಸಿಕೊಂಡಿರುವುದರಿಂದ ಕೇವಲ ಹಿನ್ನಲೆಯಾಗಿ ಮೂಲ ರಾಮಾಯಣದ ಬಗ್ಗೆ ಕೆಲವು ವಿಚಾರಗಳನ್ನು ಚರ್ಚಿಸುವುದು ಅನಿವಾರ್ಯವಾಗಿತ್ತು.

ರಾಮಾಯಣ ಮಹಾಕಾವ್ಯವು ಭಾರತೀಯ ಸಂಸ್ಕೃತಿಗೆ ಆಧಾರವಾಗಿದೆಯೆಂದು ಭಾವಿಸಲಾಗಿದೆ. ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ರಾಮಾಯಣದ ಚಾರಿತ್ರಿಕತೆಯನ್ನು ವಿಮರ್ಶಿಸುವಾಗ ಅಂದಿನ ನಾಗರೀಕತೆಯನ್ನು ಗಮ್ಯದಲ್ಲಿರಿಸಿಕೊಳ್ಳಬೇಕಾದ ಅವಶ್ಯಕತೆ. ರಾಮಾಯಣದಲ್ಲಿ ಮನುಷ್ಯರು,ವಾನರರು ಮತ್ತು ರಾಕ್ಷಸರೆಂಬ ಮೂರು ತರಹದ ನಾಗರೀಕತೆಗಳ, ವರ್ಗದವರ ವಿಶೇಷ ಪ್ರಕಾರಗಳ ವರ್ಣನೆಗಳನ್ನು ಕಾಣಬಹುದು.

ಭಾರತೀಯರು ಯುಗಧರ್ಮದ ಬಗ್ಗೆ ಅಪಾರವಾದ ನಂಬಿಕೆ ಶ್ರದ್ಧೆಯನ್ನು ಹೊಂದಿದ್ದಾರೆ. ಸತ್ಯಯುಗ, ತ್ರೇತಾಯುಗ, ದ್ವಾಪರಯುಗ ಮತ್ತು ಕಲಿಯುಗ ಈ ನಾಲ್ಕರಲ್ಲಿ ನಾವು ಕಲಿಯುಗದಲ್ಲಿದ್ದರೂ ಉಳಿದ ಮೂರು ಯುಗಗಳ ಸ್ಮರಣೆಗಳನ್ನು ಬಿಟ್ಟಿಲ್ಲ. ಒಂದು ರೀತಿಯಲ್ಲಿ ಕಲಿಯುಗವು ನಾಲ್ಕೂ ಯುಗಗಳ ಮಿಶ್ರಣದಂತಿದೆ. ಕಲಿಯುಗದಲ್ಲಿ "ಸತ್ಯ ಯುಗದಂತೆ ಸರ್ವವೂ ಸುಭಿಕ್ಷವಾಗಿರಬೇಕು. ತ್ರೇತಾಯುಗದ ರಾಮ, ಲಕ್ಷ್ಮಣ, ಸೀತೆ, ಹನುಮಂತ, ದಶರಥ, ಜನಕ, ಅಹಲ್ಯೆ, ಶಬರಿ ಮುಂತಾದವರಂತೆ ಸ್ವಭಾವವಿರಬೇಕು ಹಾಗೂ ರಾಮನ ಪಿತೃಭಕ್ತಿ, ಭ್ರಾತೃವಾತ್ಸಲ್ಯ, ಏಕಪತ್ನಿವ್ರತ ಮುಂತಾದ ಶೀಲಗಳು ಪ್ರತಿಯೊಬ್ಬ ಪುರುಷನಲ್ಲೂ ಇರಬೇಕೆಂಬ ನಿರೀಕ್ಷೆಯಿಟ್ಟುಕೊಳ್ಳಬೇಕು ಎಂಬ ಆಗ್ರಹವಿರುವುದನ್ನೂ ಗಮನಿಸಲಾಗಿದೆ. ತಾನು ಹೇಗಿದ್ದರೂ ತನ್ನ ಪತ್ನಿ ಸೀತೆಯಂತೆ ಪವಿತ್ರಳಾಗಿರಬೇಕು ಇತ್ಯಾದಿಯಾದ ಅಪೇಕ್ಷೆಗಳು ಅಸಂಖ್ಯಾತ. ರಾಮರಾಜ್ಯದ ಕಲ್ಪನೆಯಂತೂ ಅಮೋಘ. ಹಾಗೆಯೇ ದ್ವಾಪರಯುಗದ ಕೃಷ್ಣನ ಲೀಲೆಗಳು ನಮಗೆ ಪ್ರಿಯ. ಭಗವದ್ಗೀತೆಯ ಸಾರವೂ ನಮ್ಮಲ್ಲಿಯೇ ಇದೆ. ಪಾಂಡವರ ಸದ್ಗುಣಗಳು ನಮಗೆ ಅಚ್ಚರಿ.

ಕುರುಕ್ಷೇತ್ರ ಯುದ್ಧಕ್ಕೆ ಕಾರಣವಾದ ಕುರು ಪಾಂಡವರ ದಾಯದಿ ಕಲಹ ಮಾತ್ರ ಬೇಡವೆನ್ನುವ ಧೋರಣೆ ನಮ್ಮದು. ಇವುಗಳೆಲ್ಲ ಅತಿರೇಕಗಳೆನಿಸಿದರೂ ವಾಸ್ತವ". ವಿಶೇಷವೆಂದರೆ ನಾಲ್ಕೂ ಯುಗಗಳಲ್ಲೂ ಉಳಿದ ಮೂರು ಯುಗಗಳು, ಆ ಯುಗಗಳ ವಿಶೇಷತೆಗಳ ಬಗ್ಗೆ ಅರಿವಿತ್ತು ಎಂಬುದು ಸರ್ವವಿದಿತ. ಅದರ ದೀರ್ಘ ವಿವರಣೆ ಇಲ್ಲಿ ಅಪ್ರಸ್ತುತ.

ಪ್ರಸ್ತುತ ಸಂಶೋಧನೆಯ ದೃಷ್ಟಿಯಿಂದ ನಮ್ಮ ಉದ್ದೇಶ ಮತ್ತು ಗುರಿಯ ದೃಷ್ಟಿಯಿಂದ ತ್ರೇತಾಯುಗ ನಮಗೆ ಮುಖ್ಯವಾಗಿತ್ತು. ಅದರಲ್ಲಿಯೂ ಸ್ತ್ರೀ ಪಾತ್ರಗಳು ನಮ್ಮ ಸಂಶೋಧನೆಯ ಪ್ರಮುಖ ವಸ್ತುವಾಗಿತ್ತು. ದ್ವಾಪರಯುಗದ ಗಂಗೆ, ಅಂಬೆ, ಅಂಬಿಕೆ, ಅಂಬಾಲಿಕೆ, ಕುಂತಿ, ಮಾದ್ರಿ, ದ್ರೌಪದಿ, ದುಶ್ಯಲೆ, ಇವರುಗಳಿಗಿಂತ

ತ್ರೇತಾಯುಗದ ಸೀತಾ, ತಾರಾ, ಮಂಡೋದರಿ, ಅಹಲ್ಯೆ, ಊರ್ಮಿಳೆ, ಕೌಸಲ್ಯೆ, ಸುಮಿತ್ರೆ, ಮಂಥರೆ, ಶಬರಿ, ಕೈಕಸೆ, ತಾಟಕಿ, ಶೂರ್ಪನಖಿ ಮುಂತಾದ ಸ್ತ್ರೀಯರು ಮನಸ್ಸಿಗೆ ಹತ್ತಿರವಾಗುತ್ತಾರೆ. ದ್ವಾಪರದ ಕ್ಷಾತ್ರ ತೇಜಸ್ಸು, ರಜೋಗುಣದ ಆರ್ಭಟಕ್ಕಿಂತ ತ್ರೇತಾಯುಗದ ಸತ್ವಗುಣ, ಸಜ್ಜನಶೀಲತೆ, ಸೌಮ್ಯತೆಗಳು ನಮ್ಮ ಮನಸ್ಸಿಗೆ ತಟ್ಟುತ್ತವೆ.

ಮೊದಲೇ ಹೇಳಿದಂತೆ ಯುಗಧರ್ಮದ ಕಬಂಧ ಬಾಹುಗಳಲ್ಲಿದ್ದರೂ ಯುಗಾತೀತರಾಗಿ ರಾಮಾಯಣದ ಸ್ತ್ರೀ ಪಾತ್ರಗಳ ಬಗ್ಗೆ ಯೋಚನಾಪರರಾಗುತ್ತೇವೆ. ಕಾಲ–ಸ್ಥಳಗಳು ಬೇರೆಯಾದರೂ ನಡೆದ ಘಟನೆಗಳನ್ನು ಆಧುನಿಕ ದೃಷ್ಟಿಯಿಂದ ವೀಕ್ಷಿಸಿ ಸ್ತ್ರೀಪಾತ್ರಗಳು ನಿರ್ಲಕ್ಷಿತವಾಗಿವೆ, ಶೋಷಿತವಾಗಿವೆ. ಅವುಗಳಿಗೆ ನ್ಯಾಯ ಒದಗಿಸಬೇಕೆಂಬ ಕಳಕಳಿ, ಹಾತೊರಿಕೆಗಳು ಕಂಡುಬಂದಿವೆ. ಆಧುನಿಕ ಕವಿಗಳು ಈ ನಿಟ್ಟಿನಲ್ಲಿ ಹಲವು ಬಗೆಗಳಲ್ಲಿ ಯೋಚಿಸಿ ಸ್ತ್ರೀಪಾತ್ರಗಳ ಆತ್ಮದಂತೆ ಸ್ವಗತದಲ್ಲಿ ನುಡಿದ ವಿವರಗಳು ಅಸಂಖ್ಯಾತ. ಜೊತೆಜೊತೆಗೇ ಕಣ್ಮುಂದೆಯೇ ನಡೆದ ಘಟನೆಯಂತೆ ಕಂಡು, ನೊಂದು ನ್ಯಾಯಪರವಾಗಿ ನಿಲ್ಲುವ ಮನೋಭಾವವೂ ಅಸಂಖ್ಯಾತರಲ್ಲಿವೆ. ಅಧ್ಯಯನದುದ್ದಕ್ಕೂ ವಿವಿಧ ರಾಮಾಯಣಗಳಲ್ಲಿ ಇರುವ ಇವುಗಳ ಬಗ್ಗೆ ವಿಸ್ತೃತ ವಿವರಗಳು ಕಂಡುಬಂದಿವೆ. ಪ್ರಮುಖವಾಗಿ ಕಾಡಿದ ಸಮಸ್ಯೆಯೆಂದರೆ ಕಲಿಯುಗದ ಆಧುನಿಕತೆಯ ಪ್ರಧಾನ ಕೂಗಾದ ಸ್ತ್ರೀಸಮಾನತೆ. ನ್ಯಾಯ, ಶೋಷಣೆ, ನಿರ್ಲಕ್ಷ್ಯ ಎನ್ನುವ ಹಿನ್ನಲೆಯಿಂದ ತ್ರೇತಯುಗದ ಸ್ತ್ರೀಯರನ್ನು ಪಾರು ಮಾಡಬೇಕೆನ್ನುವ ತುಡಿತ ಸರಿಯೆ? ಇದರಿಂದ ಯಾರಿಗೇನು ಪ್ರಯೋಜನ? ರಾಮಾಯಣದ ಉದ್ದೇಶವೇನು? ಮುಂತಾದ ಪ್ರಶ್ನೆಗಳು ಅಧ್ಯಯನಕ್ಕೆ ತೊಡಗುವ ಮುನ್ನ ನಮ್ಮ ಕಣ್ಮುಂದೆ ನಿಲ್ಲುತ್ತವೆ. ರಾಮಾಯಣ ಕೇವಲ ಒಂದು ಕಾವ್ಯವಾಗಿ ಮನಸ್ಸನ್ನು ರಂಜಿಸುವ ಕಥೆಯಷ್ಟೇ ಆಗಿದ್ದರೆ ಈ ಪ್ರಶ್ನೆಗಳು ಉದ್ಭವಿಸುತ್ತಿರಲಿಲ್ಲ. ಅದು ಒಂದು ಸಂಸ್ಕೃತಿಯ ಅಂಗವಾಗಿ, ಅನೇಕ ಮಾದರಿಗಳನ್ನು ಸೃಷ್ಟಿಸಿದ ಆದರ್ಶರೂಪಿ ಇಂದಿಗೂ ಪೂಜನೀಯ ಕೃತಿಯೆಂದು ಭಾವಿಸಿರುವುದೇ ಇದಕ್ಕೆ ಕಾರಣ ಎಂದು ಗುರುತಿಸಬಹುದಾಗಿದೆ. ರಾಮಾಯಣ ನಡೆಯುವುದಕ್ಕೆ ನಿಶ್ಚಿತ ಗುರಿಯುತ್ತು. ಆ ಗುರಿಯನ್ನು ತಲುಪಿಯೂ ಆಗಿದೆ. ರಾಮಾವತಾರ ರಾವಣಸಂಹಾರ ಎರಡೂ ಆಗಿದೆ. ರಾಮಾವತಾರಕ್ಕೆ ಹಿನ್ನಲೆಯಾಗಿ ಹಲವಾರು ಘಟನೆಗಳಾದವು. ರಾಮನ ವನವಾಸವು ರಾವಣ ಸಂಹಾರಕ್ಕೆ ಹೊರಡುವ ಮುನ್ನಿನ ಸಿದ್ಧತೆಯಾಯಿತು. ಮಾನವನಾದ ರಾಮ ಪ್ರಾಣಿ, ಪಕ್ಷಿ, ಸುರಾಸುರರೊಂದಿಗೆ ಸಮಾನವಾಗಿಯೇ ನಡೆದುಕೊಳ್ಳುತ್ತ ತನ್ನ ಜನ್ಮ ಕಾರಣವನ್ನು ಸಫಲಗೊಳಿಸಿದ. ರಾಮನ ಜೀವನ ವೃತಾಂತ ಅಮಾನುಷ ಘಟನೆಗಳಿಂದ ಕೂಡಿದ್ದರೂ ಮಾನವ ಸಹಜವಾಗಿ ಬದುಕಿದ ರೀತಿ ಪ್ರಶಂಸನೀಯ ಎಂದು ಹೇಳಲಾಗುತ್ತದೆಯಾದರೂ ವಾಸ್ತವದಲ್ಲಿ ಪುರುಷೋತ್ತಮನ ಸೃಷ್ಟಿಯ ಹಿಂದಿನ ಕಾರಣವೇನೆಂದು ತಿಳಿದುಕೊಳ್ಳಬೇಕಾಗಿದೆ.

ದುಷ್ಟಶಿಕ್ಷಣ ಶಿಷ್ಟರಕ್ಷಣವನ್ನು ಅತ್ಯಂತ ಸಹಜವಾಗಿ ಮಾಡಿಮುಗಿಸಿದ ರಾಮನ ಆದರ್ಶಗಳು ಹಲವಾರು. ಪ್ರಿಯದರ್ಶನ ರಾಮನಾಗಿ ಸಕಲಗುಣ ಸಂಪನ್ನನಾಗಿ, ಪತಿತಪಾವನನಾಗಿ, ಮರ್ಯಾದಾ ಪುರುಷೋತ್ತಮನಾಗಿ ಜನಮಾನಸದಲ್ಲಿ ನೆಲೆನಿಲ್ಲುವಂತೆ ಮಾಡಿರುವ ಉದ್ದೇಶವೇನು. ರಾಮನು ಸೀತೆ, ಮಂಥರೆ, ಶೂರ್ಪನಖಿ, ತಾಟಕಿ ಮುಂತಾದ ಸ್ತ್ರೀಪಾತ್ರಗಳೊಂದಿಗೆ ನಡೆದುಕೊಂಡ ರೀತಿ ಕೆಲವು ಸಂದರ್ಭಗಳಲ್ಲಿ ಕ್ರೌರ್ಯದಂತೆ ಕಂಡುಬರುತ್ತದೆ. ಕರುಣಾಮಯಿ ರಾಮ ಇಷ್ಟು ಕಠೋರನೇ? ಜನರ ಮಾತಿಗೆ ಕಿವಿಗೊಟ್ಟು ತನ್ನ ಜೀವನದ ಅತಿ ದೊಡ್ಡ ನಿರ್ಧಾರಗಳನ್ನು ನಿರ್ದಾಕ್ಷಿಣ್ಯವಾಗಿ ಕೈಗೊಳ್ಳುವ ಮೂಲಕ ತಾನು ಸರಿ ಎನ್ನುವುದನ್ನು ತೋರಿಸಿದನೆ? ಆದರೆ ರಾಮನ ನಿರ್ಧಾರಗಳಿಂದ ನೊಂದ ಸ್ತ್ರೀಪಾತ್ರಗಳ ಕೋಮಲ ಭಾವನೆಗಳಿಗೆ ಮರ್ಮಘಾತಕ ಕೊಡಲಿ ಬೀಸಿದ್ದು ಕ್ರೌರ್ಯತೆಯ ಪರಮಾವಧಿಯಲ್ಲವೆ? ಮುಂತಾದ ಮಾತುಗಳು ಮೇಲ್ನೋಟಕ್ಕೆ ಸರಳವಾಗಿ ಕಂಡುಬಂದರೂ ಪಿತೃಪ್ರಧಾನ ವ್ಯವಸ್ಥೆ ಸ್ತ್ರೀ ಶೋಷಣೆ ಹಾಗೂ ಆರ್ಯ ದ್ರಾವಿಡರೆಂಬ ಜನಾಂಗ ತಾರತಮ್ಯವನ್ನು ಚಿರಸ್ಥಾಯಿಯಾಗಿ ಇರುವಂತೆ ಕಾಪಾಡಿಕೊಳ್ಳಲು ಪುರೋಹಿತಶಾಹಿ ಸೃಜಿಸಿದ ಪಾತ್ರ ಅಥವಾ ಕಾವ್ಯವೆಂಬಂತೆ ಇದು ಕಂಡುಬರುತ್ತದೆ.

ರಾಮನ ಜೀವನದುದ್ದಕ್ಕೂ ಬರುವ ಹಲವಾರು ಸ್ತ್ರೀಪಾತ್ರಗಳು ರಾಮಕಥಾಗಮನಕ್ಕೆ ಪೂರಕವಾಗಿಯೇ ಬರುತ್ತವೆ. ಆಯಾ ಘಟನೆಗಳು ಬಂದಂತೆಯೇ ಮರೆಯಾಗುತ್ತವೆ. ಸೀತೆಯನ್ನೂ ಸೇರಿಸಿಕೊಂಡಂತೆ ಹೀಗೆಯೇ ಇದೆ. ಈ ಅಭಿಪ್ರಾಯವು ಕೇವಲ ನಮ್ಮದು. ಕೆಲವು ಬಾರಿ ಪಾತ್ರಗಳು ಅಪೂರ್ಣವೆಂಬಂತೆ ಕಂಡುಬರುತ್ತದೆ. ಕಲಿಯುಗದ ಆಧುನಿಕದ ದೃಷ್ಟಿಕೋನ ಇದನ್ನು ಒಪ್ಪಿಕೊಳ್ಳುವುದಿಲ್ಲವಾದ್ದರಿಂದಲೇ ಸ್ತ್ರೀಪಾತ್ರಗಳ ಬಗೆಗೆ ಅನುಕಂಪದ ನೋಟ ಹರಿಸುತ್ತ ಆ ಪಾತ್ರಗಳನ್ನು ಪೂರ್ಣಗೊಳಿಸುತ್ತ ತಮ್ಮ ಮನಸ್ಸಿನ ಅತೃಪ್ತಿಯನ್ನು ಕವಿಗಳು ತೃಪ್ತಗೊಳಿಸಿ ಸಮಾಧಾನ ಹೊಂದುವ ಪ್ರಯತ್ನ ಮಾಡಿದ್ದಾರೆ.

ರಾಮಾಯಣವು ಆರ್ಯ, ವಾನರ ಮತ್ತು ರಾಕ್ಷಸ ಸಂಸ್ಕೃತಿಗಳ ಸಮನ್ವಯವಾಗಿದೆ. ಆರಂಭದಲ್ಲಿ ಇಪ್ಪತ್ತನಾಲ್ಕು ಸಾವಿರದಷ್ಟಿದ್ದ ಶ್ಲೋಕಗಳು ಕಾಲಕ್ರಮೇಣ ಒಂದು ಲಕ್ಷ ಇಪ್ಪತ್ತೈದು ಸಾವಿರದಷ್ಟು ಬೃಹತ್ತಾಗಿ ಬೆಳೆದು ನಿಂತ ರೀತಿಯನ್ನು ಕಂಡಾಗ ರಾಮಾಯಣ ಕಾವ್ಯದ ಜನಪ್ರಿಯತೆಯ ಬಗ್ಗೆ ಅರಿವಾಗಿ ಅಚ್ಚರಿಯೆನಿಸುತ್ತದೆ. ಪ್ರಕ್ಷೇಪಗಳ ಬಾಹುಳ್ಯವನ್ನು ಕಂಡಾಗ ಮೂಲ ಕಥೆಯಿಂದ ಸನ್ನಿವೇಶಗಳನ್ನು ಬೇರ್ಪಡಿಸಿ ವ್ಯಾಖ್ಯಾನಿಸುವ ಪ್ರಕ್ರಿಯೆ ಶತಮಾನಗಳಿಂದ ಅವ್ಯಾಹತವಾಗಿ ನಡೆದು ಬಂದಿರುವುದನ್ನು ದೃಡವಾಗಿಸುತ್ತದೆ.

ಅನೇಕ ಬಗೆಯ ರಾಮಾಯಣಗಳು ನಮಗೆ ದೊರಕಿವೆ. ಬೌದ್ಧ, ಜೈನ, ಕನ್ನಡ ಪರಂಪರೆಯ ರಾಮಾಯಣಗಳು ನಮಗೆ ದೊರಕುತ್ತವೆ. ಬೌದ್ಧ ರಾಮಾಯಣಗಳು ಕನ್ನಡದಲ್ಲಿ ದೊರೆಯುವುದಿಲ್ಲ. ಜೈನ ರಾಮಾಯಣವು ವಿಮಲಸೂರಿಯ ಪರಂಪರೆ ಮತ್ತು ಗುಣಭದ್ರನ ಪರಂಪರೆಯಲ್ಲಿ ದೊರೆಯುತ್ತವೆ. ವೈದಿಕ

ರಾಮಾಯಣದ ಮೇಲೆ ಜಾನಪದ, ಜೈನ ಧರ್ಮಗಳ ಪ್ರಭಾವ, ಯುಗಧರ್ಮ, ಸಮಕಾಲೀನ ಭಾಷಾ ಪ್ರಭಾವಗಳೂ ಸೇರಿ ಮೂಲ ವೈದಿಕ ರಾಮಾಯಣವಾಗಿಯೇ ಉಳಿದಿಲ್ಲ ಎಂಬುದು ಸರ್ವವಿದಿತ.

ರಾಮಾಯಣದಲ್ಲಿ ಬರುವ ಹಲವು ಸ್ತ್ರೀ ಪಾತ್ರಗಳು ನಿರ್ಲಕ್ಷ್ಯಕೊಳಪಟ್ಟಿವೆ ಎನ್ನುವ ವಿದ್ವಾಂಸರ ಸಂಖ್ಯೆ ಬಹಳಷ್ಟಿದೆ. ಹಿಂದೆಯೇ ಹೇಳಿದಂತೆ ಭೂತದಲ್ಲಿ ನಡೆದುಹೋದ ರಾಮಾಯಣವನ್ನು ಆಧುನಿಕತೆಯ, ವರ್ತಮಾನದ ದೃಷ್ಟಿಯಿಂದ ವಿಶ್ಲೇಷಿಸುವ, ವಿಮರ್ಶಿಸುವ ಮತ್ತು ತನ್ಮೂಲಕ ಬದಲಾವಣೆಯನ್ನು ತರುವುದು ಸಾಧ್ಯವೆಂಬ ನಿರ್ಣಯಕ್ಕೆ ಬರುವುದರಿಂದ ಮೂಲ ಕಥೆಯ ಬದಲಾವಣೆ ಸಾಧ್ಯವಿಲ್ಲವೆಂಬ ವಾಸ್ತವದ ಅರಿವು ನಮಗಿದೆ? ಆದರೂ ವಾಲ್ಮೀಕಿ ವಿರಚಿತ ಮೂಲ ಕಥೆಗೂ ಜೈನ ರಾಮಾಯಣಗಳಿಗೂ, ವಿವಿಧ ರಾಮಾಯಣಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಈ ಎಲ್ಲ ಹಿನ್ನಲೆಯಿಂದ ರಾಮಾಯಣದ ಸ್ತ್ರೀ ಪಾತ್ರಗಳನ್ನು ವಿಶ್ಲೇಷಿಸುವುದಕ್ಕೆ ನಿರೂಪಣಾ ಕ್ರಮವು ಬದ್ಧವಾಗಿದೆ. ಅಂದರೆ ಇಂದು ಕೇವಲ ಬದಲಾವಣೆಗಳು ಆಗಬೇಕಿತ್ತು ಎನ್ನುವುದಷ್ಟೇ ಈ ಅಧ್ಯಯನದ ಉದ್ದೇಶವಲ್ಲ ಆ ಮೂಲಕ ಸ್ತ್ರೀ ಸ್ವತಂತ್ರಳಾಗಿ ಸ್ವಾಭಿಮಾನಿಯಾಗಿ ತನ್ನದೇ ಪ್ರಪಂಚದಲ್ಲಿ, ತನ್ನ ಅಧಿಕಾರದಲ್ಲಿ ಬದುಕಲು ಮಾರ್ಗದರ್ಶಿಯಾಗಬೇಕೆಂಬುದೇ ಆಗಿದೆ. ಆಂದರೆ ಸ್ತ್ರೀ ಪುರುಷದ್ವೇಷಿಯಾಗಬೇಕೆಂಬುದು ನಮ್ಮ ಉದ್ದೇಶವಲ್ಲ, ಸ್ಥಾಪಿತ ಮೌಲ್ಯಗಳನ್ನು ಕೆಡವಿ ತನ್ನ ಶಕ್ತಿ, ಸಾಮರ್ಥ್ಯವನ್ನು ಗಳಿಸಿ ಪುರುಷನಿಗೆ ಸಮಾನವಾಗಿ ಬದುಕಲು ಸ್ತ್ರೀಯರಿಗೆ ದಾರಿದೀಪವಾಗಬೇಕಿದೆ. ಪ್ರಸ್ತುತ ಸಂಶೋಧನೆಯು ರಾಮಾಯಣದ ಸ್ತ್ರೀಪಾತ್ರಗಳಲ್ಲಿ ಕೆಲವನ್ನು ಮಾತ್ರ ನಿರ್ಲಕ್ಷಿತ ಸ್ತ್ರೀ ಪಾತ್ರಗಳೆಂದು ಪರಿಗಣಿಸಿದೆ. ಇದು ತಿರಸ್ಕಾರವೂ ಅಲ್ಲ. ಅಂದಿನ ಮೌಲ್ಯಗಳನ್ನು ಗಮನಿಸಿ, ಚರ್ಚಿಸಿ, ಅಂದಿನ ಮತ್ತು ಇಂದಿನ ಸ್ತ್ರೀಯರ ನಿಲುವಿನ ಬಗೆಗೂ ತುಲನಾತ್ಮಕವಾಗಿ ಪರಾಮರ್ಶಿಸುತ್ತ ಸಾರ್ವಕಾಲಿಕ ಸತ್ಯಗಳು, ಸಂಬಂಧಗಳು ಮುಂತಾದುವುಗಳ ಬಗೆಗೆ ತಲಸ್ಪರ್ಶೀ ಅಧ್ಯಯನ ನಡೆಸುವುದು ನಮ್ಮ ಉದ್ದೇಶವಾಗಿದೆ.

ಪ್ರಸ್ತುತ ಸಂಶೋಧನೆಯಲ್ಲಿ ಕೆಲವು ಸ್ತ್ರೀಪಾತ್ರಗಳನ್ನು ಅಧ್ಯಯನದ ದೃಷ್ಟಿಯಿಂದ ವಿಮರ್ಶೆಗೆ ಒಳಪಡಿಸಲಾಗಿದೆ. ಸೀತೆ, ಊರ್ಮಿಳೆ, ಅಹಲ್ಯೆ, ಮಂಥರೆ, ಶೂರ್ಪನಖಿ ಹಾಗೂ ಮಂಡೋದರಿಯ ಪಾತ್ರಗಳನ್ನು ವಿಶ್ಲೇಷಿಸಲಾಗಿದೆ. ಸ್ತ್ರೀ ಶೋಷಣೆ ಎನ್ನುವುದು ಕಾಲಧರ್ಮ ಮತ್ತು ಯುಗಧರ್ಮವನ್ನೂ ಮೀರಿ ನಿಂತಿರುವುದು ಅಚ್ಚರಿ ಮತ್ತು ಸಾರ್ವಕಾಲಿಕ ಸತ್ಯಗಳಾಗಿ ಕಾಡಿವೆ ಎಂಬುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಕವಿಯ ನಿಲುವುಗಳು ಪಾತ್ರಗಳೊಂದಿಗೆ ಹೊಂದಿರುವ ತಾದಾತ್ಮ್ಯತೆಯಿಂದಾಗಿ ವಿಶೇಷವಾಗಿ ಕಂಡು ಬರುತ್ತದೆ. ಅಂದರೆ ಪಾತ್ರ ಪೋಷಣೆಯ ವಿವರಗಳಲ್ಲಿ ಇದನ್ನು ಕಾಣಬಹುದು. ಪ್ರತಿ ಪಾತ್ರದ ವಿವೇಚನೆ ಕವಿಯ ಮನೋಧರ್ಮದ ಮೇಲೆ ಅವಲಂಬಿತವಾಗಿರುತ್ತದೆ. ಕವಿಯ ಲೋಕಾನುಭವದೊಂದಿಗೆ, ಓದಿನ ಹರವು ಮಿಳಿತವಾಗಿರುತ್ತದೆ. ಪಾತ್ರವೆಂಬುದು ಕೇವಲ

ಪಾತ್ರವಾಗಿರದೆ ಕಾಲಧರ್ಮ, ಯುಗಧರ್ಮವಾಗಿ ಬೆಳೆಯುವುದನ್ನು ಕಾಣಬಹುದು. ಉದಾ: ಕುಲಂ ಕುಲಮಲ್ತೆ ಚಲಂ ಕುಲಂ, ಅಭಿಮಾನ ಕುಲಂ, ಗುಣಂ ಕುಲಂ ಎಂಬ ಕರ್ಣನ ಮಾತುಗಳು ಕುಲದ ಭ್ರಮೆಗೆ ಒಳಗಾದವರ ಹುಚ್ಚುಗಳನ್ನು ಬಿಡಿಸಿದಂತೆ, ಪ್ರತಿ ಕವಿಯು ರಾಮಾಯಣದ ತನ್ನ ಕಾವ್ಯಗಳಲ್ಲಿ ಹೊಸದೊಂದು ವೈಚಾರಿಕ ನಿಲುವನ್ನು ಪ್ರಕಟಿಸುತ್ತಲೇ ಸಾಗುತ್ತಾನೆ. ಸಂಕಾಲಿಯವರ ಇತಿಹಾಸದ ಕಣ್ಣಲ್ಲಿ ರಾಮಾಯಣ ಎಂದರೆ ಮೌಲ್ಯಗಳಿಂದಾಗಿ ಪಾತ್ರಗಳು ಇಂದಿಗೂ ವರ್ತಮಾನದ ಬದುಕಿಗೆ ಅವಶ್ಯವಿದೆ ಎಂದು ಹೇಳುತ್ತಾರೆ.

ವಿಷವೃಕ್ಷ ರಾಮಾಯಣ[೫] ಕೃತಿಯಲ್ಲಿ ರಾಮಾಯಣದಲ್ಲಿ ರಾಮ ಇತರ ಪಾತ್ರಧಾರಿ ಮಾನವರೀತಿಯ ನಡುವಳಿಕೆಗಿಂತ ಹೆಚ್ಚಾಗಿ ಅಸುರೀ ರೀತಿಯಲ್ಲಿ ವರ್ತಿಸಿರುವುದನ್ನು ವಿವಾಹಾಕಾಂಕ್ಷೆಯ ಶೂರ್ಪನಖಿ ಪ್ರಸಂಗ, ಶಬರಿ ಪ್ರಸಂಗ, ಸಮರಾಕಾಂಕ್ಷಿಯಾದ ತಾಟಕಿ ಪ್ರಸಂಗಗಳಲ್ಲಿ ವಿಶ್ಲೇಷಿಸುತ್ತಾರೆ. ಇದರಿಂದ ಒಂದೊಂದು ಕಾಲದ ಯುಗಧರ್ಮವೂ ಕೂಡಾ ಕೃತಿಕಾರನ ಮನೋಧರ್ಮವನ್ನು ನಿರ್ಧರಿಸುತ್ತದೆ ಎಂಬುದನ್ನು ಅರಿಯಬಹುದಾಗಿದೆ.

ಎ.ಕೆ. ರಾಮಾನುಜಮ್[೬]ರವರ ಅನುವಾದ ಓ.ಎಲ್. ನಾಗಭೂಷಣಸ್ವಾಮಿ[೭] ಕೃತಿ ಅನುದಿನದ ಚಿಂತನೆಯಲ್ಲಿ, ರಾಮ ಬ್ರಹ್ಮನ ಅಂತಿಮ ಭೇಟಿಯಲ್ಲಿ ದರ್ಶನಾಕಾಂಕ್ಷಿಯಾಗಿ ಬಂದ ಲಕ್ಷ್ಮಣನ ಪರವಾಗಿ ಗುಪ್ತಸಮಾಲೋಚನ ಕೊಠಡಿ ಪ್ರವೇಶ ಮಾಡಿದ ಹನುಮಂತ ತನ್ನ ಸಹಜ ವಾನರ ಬುದ್ಧಿಯಿಂದ ರಾಮನ ಮುದ್ರೆಯುಂಗುರ ಬಿದ್ದು ಭೂಮಿಯನ್ನು ಸೀಳಿ ಪಾತಾಳಕ್ಕೆ ಹೊರಟು ಹೋಗುತ್ತದೆ. ಅದರ ಅನ್ವೇಷಣೆಯಲ್ಲಿ ಹೊರಟ ಹನುಮಂತ ಪಾತಾಳ ಲೋಕಕ್ಕೆ ಬರುತ್ತಾನೆ. ಪಾತಾಳ ರಾಜನ ಅನುಮತಿ ಪಡೆದು ಮುದ್ರೆಯುಂಗುರವಿದ್ದ ಹರಿವಾಣದ ಸಮೀಪ ಬಂದಾಗ ಸಹಸ್ರಾರು ರಾಮ ಮುದ್ರಿತ ಉಂಗುರಗಳನ್ನು ಕಂಡು ವಿಸ್ಮಿತನಾಗುತ್ತಾನೆ. ಪಾತಾಳರಾಜ ನಿನ್ನ ರಾಮನ ಉಂಗುರ ತೆಗೆದುಕೊಂಡು ಹೊರಡು ಎನ್ನುತ್ತಾನೆ. ತನ್ನ ರಾಮನ ಉಂಗುರ ಹುಡುಕಿ ಭೂಲೋಕಕ್ಕೆ ಬಂದಾಗ ರಾಮನ ಮಕ್ಕಳು ಆಡಳಿತ ನಡೆಸುತ್ತಿರುತ್ತಾರೆ. ಈ ಉಪಲಬ್ಧ ಕಥೆಯ ವಿಶ್ಲೇಷಣೆಯಲ್ಲಿ ಕಂಡು ಬರುವ ಅಂಶವೇನೆಂದರೆ ಕಾಲಕಾಲಕ್ಕೆ ಭಿನ್ನ ಮನೋಧರ್ಮಗಳ ಹಿನ್ನಲೆಯಲ್ಲಿ, ನೂರಾರು ಕವಿಗಳ ಬರಹಗಳಲ್ಲಿ ಸಾವಿರಾರು ರಾಮಾಯಣಗಳು ಸೃಷ್ಟಿಯಾಗಿರುವುದೇ ಇದಕ್ಕೆ ಸಾಕ್ಷಿ ಎನ್ನುತ್ತಾರೆ.

ವ್ಯಕ್ತಿಯ ಮನೋಧರ್ಮ ವಿಶ್ಲೇಷಣೆ ತನ್ನ ಸಂಗಾತಿ, ಸಹಚಾರಿಗಳೊಂದಿಗೆ, ಸಾಮಾಜಿಕರೊಂದಿಗೆ ಹಾಗೆಯೇ ಇತ್ತು ಎಂಬುದನ್ನು ಇಲ್ಲಿ ಕಂಡುಕೊಳ್ಳಬಹುದು. ಹಾಗಾಗಿ ಒಂದು ಕೃತಿ ಕಾಲವೊಂದರ ಉತ್ಕೃಷ್ಟ ಅಥವಾ ಉತ್ತಮ ಎಂದೆನಿಸುವಂಥ ನಡಾವಳಿ ಹೊಂದಿದ ಪಾತ್ರಗಳೊಂದಿಗೆ ಸೃಷ್ಟಿಯಾಗಿರುತ್ತದೆ. ಹಾಗೂ ಆ ಕಾಲದ ಆಚಾರಗಳೊಂದಿಗೆ ನಿಲುವುಗಳೊಂದಿಗೆ ಬದ್ಧವಾಗಿರುತ್ತದೆ ಎಂಬುದನೂ ಕಾಣಬಹುದು.

ಭಾರತೀಯ ಮಹಾ ಕಾವ್ಯಪರಂಪರೆಯಲ್ಲಿ ರಾಮಾಯಣ ಮತ್ತು ಮಹಾಭಾರತಗಳು ಅಗ್ರಸ್ಥಾನದಲ್ಲಿವೆ. ಕಥೆ ಸಣ್ಣದಿರಲಿ ದೊಡ್ಡದಿರಲಿ ವಸ್ತುವಿಷಯದ ಆಯ್ಕೆಗಾಗಿ ರಾಮಾಯಣ

ಮಹಾಭಾರತಗಳನ್ನೇ ಮೊರೆ ಹೋಗುವುದು ಭಾರತೀಯ ಕವಿಗಳ ಸಹಜತೆ. ಜನಸಾಮಾನ್ಯರೇನೂ ಇದಕ್ಕೆ ಹೊರತಲ್ಲ. ತಮ್ಮ ಕುಟುಂಬದ ಸದಸ್ಯರೆಲ್ಲ ದಶರಥ, ರಾಮ, ಲಕ್ಷ್ಮಣರಂತಿರಬೇಕು. ಕೌಸಲ್ಯೆ, ಸೀತೆಯಂತಿರಬೇಕೆಂದೇ ಆಶಿಸುತ್ತಾರೆ. ರಾಮಾಯಣ ನಡೆದದ್ದು ತ್ರೇತಾಯುಗ. ಇದು ಕಲಿಯುಗ. ಮಧ್ಯದಲ್ಲೊಂದು ದ್ವಾಪರಯುಗ. ಹೀಗೆ ಯುಗಗಳ ಅಂತರವಿದ್ದರೂ ರಾಮಕಥೆ ಇದೀಗ ನಡೆಯಿತೋ ಎನ್ನುವಂತೆ ಜನಮಾನಸದಲ್ಲಿ ಆ ಪಾತ್ರಗಳು ತುಂಬಿಕೊಂಡಿವೆ. ಅದು ಈಗಲೂ ಬದುಕಿನ ಭಾಗವೇ ಆಗಿರುವಂತೆ ನೋಡಿಕೊಳ್ಳಲಾಗಿದೆ.

ರಾಮಾಯಣ ಕಥೆಯನ್ನು ಹಲವಾರು ಕವಿಗಳು ತಮ್ಮ ಸ್ವಂತಿಕೆಯಲ್ಲಿ ಹೇಳಲು ಪ್ರಯತ್ನಪಟ್ಟಿರುವ ನೂರಾರು ಉದಾಹರಣೆಗಳು ನಮ್ಮ ಕಣ್ಣು ಮುಂದಿವೆ. ವಾಲ್ಮೀಕಿ ರಾಮಾಯಣವು ಸಂಸ್ಕೃತ ಭಾಷೆಯಲ್ಲಿ ಅತ್ಯಂತ ಸುಂದರವಾಗಿ ಮೂಡಿಬಂದಿದೆ. ಮುಂದೆ ಹಲವಾರು ಭಾಷೆಗಳಲ್ಲಿ ಅನುವಾದಗೊಂಡಿದೆ. ರಾಮಕಥೆಯನ್ನು ಬರೆದ ಪ್ರತಿಯೊಬ್ಬ ಕವಿಗೂ ಕಾವ್ಯವನ್ನು ಮತ್ತಷ್ಟು ಸುಂದರವಾಗಿ ಬರೆಯುವ ಸಹಜ ಕಾತುರವಿರುವುದು ಕಂಡುಬರುತ್ತದೆ. ತಾನು ಬರೆದುದೇ ಮೂಲಕಥೆಯೇನೋ ಎನ್ನುವಂತಿರಬೇಕೆಂಬ ಕವಿ ಚಾಪಲ್ಯ ಇಂತಹ ರಾಮಾಯಣಗಳ ನಿರೂಪಣೆಯಲ್ಲಿ ಎದ್ದು ತೋರುತ್ತದೆ. ಗದ್ಯ, ಪದ್ಯ, ಚಂಪೂ ಹೀಗೆ ಹಲವಾರು ಶೈಲಿಯಲ್ಲಿ ಛಂದೋಬದ್ಧವಾಗಿ ಕಾವ್ಯವನ್ನು ಕಟ್ಟಿಕೊಡುವ ಪರಿ ಶ್ಲಾಘನೀಯ. ಹೀಗೆ ರಚಿತವಾಗಿರುವ ರಾಮಾಯಣಗಳು ಕೂಡ ಸ್ವತಂತ್ರ ಕೃತಿಯೆಂಬಂತೆ ಅದ್ಭುತವಾಗಿರುವುದೂ ಸತ್ಯವೇ ಆಗಿದೆ. ಇವುಗಳನ್ನು ಕೇವಲ ಅನುವಾದ ಸಾಹಿತ್ಯ ಎನ್ನುವಂತಿಲ್ಲ. ಅವು ಕವಿಯ ಮನೋಧರ್ಮ, ಮರುಸೃಷ್ಟಿಯ ಉದ್ದೇಶವೂ ಅದರಲ್ಲಿ ಸಾಕಾರಗೊಂಡಿರುತ್ತದೆ.

ವಾಲ್ಮೀಕಿ ರಾಮಾಯಣದಷ್ಟೆ ಸುಂದರವಾಗಿ ಹಿಂದಿಯ ತುಲಸೀ ರಾಮಾಯಣ, ಸಾಕೇತ ರಾಮಾಯಣಗಳು ಪ್ರಸಿದ್ಧವಾಗಿವೆ. ಇವುಗಳು ಉತ್ತರಭಾರತದಲ್ಲಿ ಪಾರಾಯಣ ಗ್ರಂಥಗಳಾಗಿ ಬಳಕೆಯಲ್ಲಿವೆ. ಮೂಲ ಸಂಸ್ಕೃತಿ ಕಾವ್ಯವನ್ನು ಆಸ್ವಾದಿಸುವವರ ಸಂಖ್ಯೆ ಕಡಿಮೆಯಿದ್ದರೂ ಸರಳ ಅನುವಾದಗಳು ಹೃದಯಸ್ಪರ್ಶಿಯಾಗುವುದರಿಂದ ಅವು ಜನರನ್ನು ಆಕರ್ಷಿಸುವಲ್ಲಿ ಸಫಲವಾಗುತ್ತವೆ. ಸಂಬಂಧಗಳಲ್ಲಿ ಪ್ರೀತಿ, ವಿಶ್ವಾಸ, ಗೌರವ, ಭಾವನೆಗಳ ಮಿಡಿತ, ವಾತ್ಸಲ್ಯದ ತುಡಿತ, ಪಿತೃವಾಕ್ಯಪರಿಪಾಲನೆ, ವೈರಾಗ್ಯದ ಉತ್ಕೃಷ್ಟತೆ ಇವೆಲ್ಲ ಸಾವಿರಾರು ವರ್ಷಗಳ ನಂತರವೂ ಸಮಕಾಲೀನ ಜನರ ಬದುಕಿಗೆ ಹತ್ತಿರವಾಗಿರುವಂತೆ ಸಾಮಾನ್ಯ ಜನರ ಬದುಕಿನಲ್ಲಿ ಇವರೆಲ್ಲ ಆದರ್ಶವಾಗೀಯೇ ಇರುವಂತೆ ಕಾಯ್ದುಕೊಳ್ಳುವ ಪ್ರಯತ್ನ ನಡೆದಿದೆ.

೭ನೆಯ ಶತಮಾನದಷ್ಟು ಹಿಂದೆಯೇ ಭವಭೂತಿ ತನ್ನ ಉತ್ತರ ರಾಮಾಯಣದಲ್ಲಿ 'ಸೀತೆ ಪವಿತ್ರ'ಳೆಂದು ಅಗ್ನಿ ಪರೀಕ್ಷೆಯಿಂದ ಸಾಬೀತಾದರೂ ರಾಮ ಆಕೆಯನ್ನು ಸ್ವೀಕರಿಸದಿರುವ ಬಗ್ಗೆ ಪ್ರಶ್ನಿಸುತ್ತಾನೆ. ಇದನ್ನು ಲವಕುಶ ಮತ್ತು ಪೃಥ್ವಿಯ ಮುಖಾಂತರ ಅಭಿವ್ಯಕ್ತಗೊಳಿಸುತ್ತಾನೆ. 'ಸಂಕಾಲಿಯಾ ಅವರು ಹೇಳುವಂತೆ ರಾಮ, ಸೀತೆ, ಲಕ್ಷ್ಮಣ ಮತ್ತು ಹನುಮಂತರನ್ನು ಅವರ ಆದರ್ಶ ಗುಣಗಳಿಗಾಗಿ

ಮೆಚ್ಚಿಕೊಳ್ಳಬೇಕು. ಇವು ಶತಮಾನಗಳಿಂದ ಮನುಷ್ಯನ ಹೃದಯವನ್ನು ಆಳವಾಗಿ ತಟ್ಟಿವೆ. ಇದರ ಜೊತೆಗೆ ಇನ್ನುಳಿದ ಹಲವು ಪಾತ್ರಗಳ ವೈಶಿಷ್ಟ್ಯ. ಪಿತೃಪ್ರೇಮದಿಂದ ವನವಾಸಕ್ಕೆ ನಡೆದ ರಾಮನೊಂದೆಡೆ, ಭಾತೃಪ್ರೇಮದಿಂದ ರಾಮಪಾದುಕೆಯೊಂದಿಗೆ ವನಜೀವನವನ್ನೇ ನಡೆಸಿದ ಭರತ ಇನ್ನೊಂದೆಡೆ. ಇವೆಲ್ಲದರಿಂದ ಭಿನ್ನವಾದ ಮಾತು, ಮೌನಗಳನ್ನು ಮೀರಿದ ಭಾವನೆಗಳಿಂದ ತುಂಬಿದ ಕೆಲವು ಪಾತ್ರಗಳಿವೆ. ಈ ಪಾತ್ರಗಳು ಮೂಲ ರಾಮಾಯಣದಲ್ಲಿ ನಿಮಿತ್ತ ಮಾತ್ರವಾಗಿ ಬಂದುಹೋಗುತ್ತವೆ. ನಂತರ ಅವುಗಳ ಸ್ಥಿತಿ ಏನಾಯಿತೆಂಬುದು ತಿಳಿಯುವುದಿಲ್ಲ. ಆದರೆ ಆ ಪಾತ್ರಗಳನ್ನು ಕತ್ತಲೆಯಿಂದ ಬೆಳಕಿಗೆ ತರುವ ಪ್ರಯತ್ನವನ್ನು ಮುಂದೆ ರಾಮಾಯಣವನ್ನು ಅನುವಾದಿಸಿದ ಕವಿಗಳು ಮಾಡಿದರು. ನೇಪಥ್ಯದ ಪಾತ್ರಗಳ ಭಾವನೆಗಳಿಗೂ ಜೀವವಿದೆ. ಅವುಗಳಿಗೂ ಪ್ರಾಮುಖ್ಯತೆಯಿದೆಯೆಂಬುದನ್ನು ತೋರಿಸಿಕೊಟ್ಟರು. ಇವು ಹಲವು ರಾಮಾಯಣಗಳಲ್ಲಿ ವಿಭಿನ್ನ ರೀತಿಯಿಂದ ಅಭಿವ್ಯಕ್ತಗೊಳಿಸಲ್ಪಟ್ಟವು. ಈ ವಿಭಿನ್ನತೆಗಳು ಮೂಲ ರಾಮಾಯಣ ಅಥವಾ ವೈದಿಕ ರಾಮಾಯಣಗಳಿಗೆ ವಿರುದ್ಧವಾಗಿ ಚಿಂತಿಸುವ, ಚರ್ಚಿಸುವ ಧೈರ್ಯ ಮಾಡಲಿಲ್ಲ.

'ತಿಣುಕಿದನು ಫಣಿರಾಯ ರಾಮಾಯಣದ ಭಾರದಲಿ' ಎನ್ನುತ್ತಲೇ ರಾಮಾಯಣದ ಕಥೆಗಳನ್ನು ಬರೆಯುತ್ತಿರುವ ನಮ್ಮ ಕವಿಗಳಿಗೆ ರಾಮಾಯಣ ಅಕ್ಷಯ ಪಾತ್ರೆಯಿದ್ದಂತೆ. ಮೂಲ ರಾಮಾಯಣದ ಕಥೆಗೆ ಒಂದಿಷ್ಟು ಹೊಸ ಹೊಳಹುಗಳನ್ನು ಸೇರಿಸುತ್ತ ಹೆಣೆದಿರುವ ಹಲವಾರು ರಾಮಾಯಣದ ಆವೃತ್ತಿಗಳು ಹೊರಬಿದ್ದಿವೆ. ಶತಮಾನಗಳೇ ಕಳೆದರೂ ಹಳತಾಗದ ರಾಮಾಯಣದ ಕಥೆ ಕವಿಗಳಿಗೆ ಬಹುಪ್ರಿಯವಾದುದು. ಈ ಅನಿಸಿಕೆ ಕೇವಲ ಕನ್ನಡ ಭಾಷೆಗೆ ಮಾತ್ರ ಸೀಮಿತವಾಗಿಲ್ಲ. ಭಾರತೀಯ ಭಾಷೆಗಳಿಗೆಲ್ಲ ಅನ್ವಯವಾಗುತ್ತದೆ.

ರಾಮಾಯಣ ಎನ್ನುವುದು ಕೇವಲ ರಾಮರಾವಣರ ಕಥೆಯಲ್ಲ. ಕೇವಲ ದುಷ್ಟಶಿಕ್ಷಣ ಶಿಷ್ಟರಕ್ಷಣ ಮಾತ್ರವಲ್ಲ. ರಾಮಾಯಣವೆನ್ನುವುದು ಹಲವಾರು ಭಾವನಾತ್ಮಕ ತಂತುಗಳ ಸೂಕ್ಷ್ಮ ಹರಿದಾಟವೂ ಹೌದು. ವಿಪರ್ಯಾಸವೆಂದರೆ ಬಂದಿರುವ ಬಹುಪಾಲು ರಾಮಾಯಣ ಕಥೆಗಳು ರಾಮ ರಾವಣರ ಕಥೆಗಳಾಗಿವೆ. ದಶರಥ, ಕೈಕೇಯಿ, ಮಂಥರೆ, ಸೀತೆಯ ಹುಡುಕಾಟದ ಸಂದರ್ಭದಲ್ಲಿ ಬರುವ ಹನುಮ, ಸುಗ್ರೀವರ ಹೊರತು ಉಳಿದ ಪಾತ್ರಗಳು ಗೌಣವೋ ಎಂಬಂತೆ ಚಿತ್ರಿತವಾಗಿವೆ. ರಾಮನ ಕಥೆಯನ್ನು ವಿಷ್ಣುವಿನ ಅವತಾರವನ್ನು ಮಾತ್ರ ಹೇಳುವುದಷ್ಟೇ ವಾಲ್ಮೀಕಿಯ ಉದ್ದೇಶವಾಗಿರಬಹುದೆ? ಉಳಿದ ಪಾತ್ರಗಳು ಕೇವಲ ಸಾಂದರ್ಭಿಕವಾಗಿ ಬಂದು ಹೋಗುವುದು ಮಾತ್ರವೇ ಎನ್ನುವ ಪ್ರಶ್ನೆ ನಮ್ಮ ಮುಂದೆ ಬರುತ್ತದೆ.

ಆದರೆ ರಾಮಾಯಣದ ತುಂಬ ಹರಡಿರುವ ಮೂಕ ಪಾತ್ರಗಳಿಗೂ ಜೀವವಿದೆ, ಭಾವನೆಗಳಿವೆ ಎನ್ನುವುದು ಸತ್ಯ. ರಾಮಾಯಣ ಸೃಷ್ಟಿಯಾದ ಸಂದರ್ಭದಲ್ಲಿ ಈ ಪ್ರಶ್ನೆಗಳು ಬಂದಿತ್ತೋ ಇಲ್ಲವೋ ತಿಳಿಯದು. ಆದರೆ ಕಾಲಕಳೆದಂತೆ ಈ ಪ್ರಶ್ನೆಗಳು ಉದ್ಭವಿಸಿ ಮೂಲ ಕಥೆಯಲ್ಲಿ ಇಲ್ಲದ ಹಲವು

ಸಂದರ್ಭಗಳು, ಪಾತ್ರಗಳ ಒಳಗೆ ತುಂಬಿರುವ ಭಾವನೆಗಳನ್ನು ಊಹಿಸಿ ಅವುಗಳನ್ನು ಸಹೃದಯರ ಮುಂದೆ ತೆರೆದಿಡುವ ಪ್ರಯತ್ನದಲ್ಲಿ ತೊಡಗಿದರು. ಆಗ ಗೌಣವೆನಿಸಿಕೊಂಡ ಪಾತ್ರಗಳೂ ಮಹತ್ವ ಪಡೆದವು.

ವಿವಿಧ ಕಾಲಘಟ್ಟಗಳಲ್ಲಿ ರಾಮಾಯಣದ ಕಥೆಯು ಹಲವು ಪ್ರಭಾವ, ಒತ್ತಡಗಳಿಗೆ ಒಳಗಾಯಿತು. ಧಾರ್ಮಿಕ ಒತ್ತಡ, ಸಾಂಸ್ಕೃತಿಕ ಒತ್ತಡ, ಪ್ರಾದೇಶಿಕ ಒತ್ತಡಗಳಿಗೆ ಒಳಗಾಗಿರುವುದನ್ನು ಕಾಣಬಹುದು. ಹೀಗಾಗಿ ರಾಮಾಯಣದ ಹಲವಾರು ಆವೃತ್ತಿಗಳು ಬಂದಿವೆ, ಬರುತ್ತಲೇ ಇವೆ, ಮುಂದೆಯೂ ಬರುವುದರಲ್ಲಿ ಸಂಶಯವಿಲ್ಲ.

ಮೇಲೆ ಸೂಚಿಸಿದ ಹಿನ್ನಲೆಯ ಜೊತೆಗೆ ಭಾಷಾ ಭಿನ್ನತೆಗಳು, ಸಮಕಾಲೀನ ಸಮಾಜದ ಪ್ರಭಾವ ಮತ್ತು ನಿರೀಕ್ಷೆಗಳಿಂದಾಗಿ ಭಾಷಾ ವೈವಿಧ್ಯತೆ, ಕಥಾ ನಿರೂಪಣೆಯಲ್ಲಿ ವೈವಿಧ್ಯತೆ, ನಿರೂಪಣಾ ಶೈಲಿಗಳಲ್ಲಿ ಇರುವ ಭಿನ್ನತೆಗಳನ್ನು ಮರೆಯುವಂತಿಲ್ಲ. ಪದ್ಯ, ಗದ್ಯ, ಚಂಪೂ ಶೈಲಿಗಳಲ್ಲಿ ರಾಮಾಯಣ ಧಾರೆ ಹರಿದುಬಂದಿದೆ. ಪಾತ್ರಗಳ ಕುರಿತು ಚಿಂತನೆ ಹೆಚ್ಚಿದಂತೆ ಹೊಸ ಕಲ್ಪನೆಗಳೊಂದಿಗೆ ರಾಮಾಯಣವನ್ನು ನಿರೂಪಿಸುವ ಹೊಸ ಪರಂಪರೆಯೊಂದು ಹುಟ್ಟಿಕೊಂಡು ಶತಮಾನಗಳಿಂದ ಮುಂದುವರಿಯುತ್ತ ಬಂದಿದೆ. ಹೀಗಾಗಿ ವಿಷಯ ವೈವಿಧ್ಯತೆಗಳು ನಮಗಿಂದು ದೊರೆಯುತ್ತವೆ.

ಜೈನ ರಾಮಾಯಣದಲ್ಲಿ ರಾಮನು ಅಹಿಂಸಾ ಪಾಲನೆ ಮಾಡಬೇಕಾದ ಅನಿವಾರ್ಯತೆಯಿಂದಾಗಿ ಲಕ್ಷ್ಮಣನಿಂದ ರಾವಣ ವಧೆಯಾಗುತ್ತದೆ. ಭ್ರಾತೃ ಭಕ್ತಿಯಿಂದ ರಾಮನೊಂದಿಗೇ ವನವಾಸಕ್ಕೆ ತೆರಳುವ ಲಕ್ಷ್ಮಣನಿಗೆ ತನ್ನ ಪತ್ನಿ ಊರ್ಮಿಳೆಯ ಭಾವನೆಗಳ ಬಗ್ಗೆ ಗಮನವೇ ಇಲ್ಲ. ರಾಮನ ವನವಾಸಕ್ಕೆ ಕಾರಣಗಳಾಗುವ ಕೈಕೇಯಿಯನ್ನು ಹಾದಿತಪ್ಪಿಸಲು ಬರುವ ನಿಮಿತ್ತವಾಗಿ ಮಂಥರೆಯು ಬರುತ್ತಾಳೆ. ಇಡೀ ರಾಮಾಯಣವು ನಡೆಯುವ ನಿಮಿತ್ತವಾಗಿ ಮಂಥರೆಯ ಪಾತ್ರವು ಬರುತ್ತದೆ. ರಾವಣ ಸಂಹಾರಕ್ಕಾಗಿ ರಾಮಾವತಾರವಾದರೂ ಕಥೆಗೆ ಬರುವ ಮುಖ್ಯ ತಿರುವಿಗೆ ಕಾರಣೀಭೂತಳಾಗಿ ಮಂಥರೆಯು ಬರುತ್ತಾಳೆ. ಅದೇ ರೀತಿ ರಾಮ ರಾವಣರನ್ನು ಪರಿಚಯಿಸುವ ಕೊಂಡಿಯಾಗಿ ಶೂರ್ಪನಖಿಯ ಪ್ರವೇಶವಾಗುತ್ತದೆ. ಹೀಗೆ ಕಥೆಯ ಮುಖ್ಯ ತಿರುವುಗಳಲ್ಲಿ ಪ್ರಧಾನವಾಗಿ ಕಾಣುವ ಸ್ತ್ರೀ ಪಾತ್ರಗಳು ಮುಂದೆ ಗೌಣವಾಗುವುದು ರಾಮಾಯಣದ ವಿಶೇಷತೆಗಳಲ್ಲಿ ಒಂದಂಶವಾಗಿದೆ. ಬಹುಶಃ ಈ ಹಿನ್ನಲೆಯಿಂದಲೇ ಕುವೆಂಪು ಅವರು 'ಪಾಪಿಗುಂ ಉದಾರಮಿಹುದಲ್ತೆ' ಎನ್ನುವ ಘೋಷವಾಕ್ಯದೊಂದಿಗೆ 'ರಾಮಾಯಣ ದರ್ಶನಂ' ಕಾವ್ಯವನ್ನು ರಚಿಸಿದರು. ಭಕ್ತಿಯ ಪರಾಕಾಷ್ಠತೆಯೊಂದಿಗೆ ತುಲಸೀದಾಸರು ತುಲಸೀ ರಾಮಾಯಣವನ್ನು ರಚಿಸಿದರು. ಇನ್ನು ಶ್ರೀಲಂಕಾ, ಜಪಾನ್,ಇಂಡೊನೇಷಿಯಾದ ರಾಮಾಯಣಗಳು ಮತ್ತಷ್ಟು ವೈವಿಧ್ಯತೆಗಳಿಂದ ಕೂಡಿವೆ. ಪ್ರಸ್ತುತ ಸಂಶೋಧನೆಯಲ್ಲಿ ಕನ್ನಡ ಮತ್ತು ಹಿಂದೀ ರಾಮಾಯಣಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿರುವುದರಿಂದ ಅವುಗಳ ಬಗ್ಗೆ ಹೆಚ್ಚು ಚರ್ಚಿಸಲು ಹೋಗದೆ ಅಗತ್ಯವಿದ್ದೆಡೆ ಮಾತ್ರ ಬಳಸಲಾಗಿದೆ.

## ೧.೨ ಉದ್ದೇಶ

ಮೂಲ ರಾಮಕಥೆಯನ್ನೇ ಇಟ್ಟುಕೊಂಡು ಕೆಲವು ಪಾತ್ರಗಳನ್ನು ನಿರ್ಲಕ್ಷಿಸಲಾಗಿದೆ ಎನ್ನುವ ವಾದ ಒಂದೆಡೆಯಾದರೆ ರಾಮಾಯಣದಲ್ಲಿ ಸ್ತ್ರೀಪಾತ್ರಗಳನ್ನು ಪೂರ್ಣವಾಗಿ ನಿರ್ಲಕ್ಷಿಸಲಾಗಿದೆ ಎನ್ನುವುದು ಇನ್ನೊಂದು ವಾದವಾಗಿದೆ. ಈ ಅನಿಸಿಕೆಗಳಿಗೆ ಹಲವಾರು ಕಾರಣಗಳಿದ್ದರೂ ನಿರ್ಲಕ್ಷಿಸಿರುವುದನ್ನು ಮಾತ್ರ ಅಲ್ಲಗೆಳೆಯುವಂತಿಲ್ಲ. ಉದಾಹರಣೆಗೆ ಊರ್ಮಿಳೆ, ಸೀತೆ, ಮಂಡೋದರಿ, ಅಹಲ್ಯೆ, ಶೂರ್ಪನಖಿ ಮುಂತಾದವರನ್ನು ಹೆಸರಿಸಬಹುದು. ಈ ಪಾತ್ರಗಳು ಸಾಂದರ್ಭಿಕವಾಗಿ ಹೀಗೆ ಮಿಂಚಿ ಹಾಗೆ ಮಾಯವಾಗುತ್ತವೆ. ಇಂತಹ ಸಂದರ್ಭಗಳಲ್ಲಿ ಆ ಪಾತ್ರಗಳಿಗೆ ನ್ಯಾಯ ದೊರಕಿಲ್ಲ ಎನಿಸುವುದು ಸಹಜವಾದ ಅನಿಸಿಕೆಯಾಗಿದೆ. ವಾಲ್ಮೀಕಿಗೆ ಕೇವಲ ರಾಮ ಮಾತ್ರ ಮುಖ್ಯವಾಗಿದ್ದ. ರಾಮ ರಸಾಯನದಲ್ಲಿ ಮಗ್ನನಾದ ಋಷಿಗೆ ಉಳಿದ ಪಾತ್ರಗಳ ಸಂಪೂರ್ಣ ಚಿತ್ರಣ ನೀಡುವ ಅಗತ್ಯವೂ ಕಂಡಿರಲಾರದು. ಆದರೆ ಸಮಕಾಲೀನ ಕಣ್ಣಿನಿಂದ ನೋಡುವ ಮುಂದಿನ ಮತ್ತು ಇಂದಿನ ಅನೇಕ ಕವಿಗಳಿಗೆ ಇದೊಂದು ಅಸಹಜ, ಅಸಂಪೂರ್ಣ, ಅನ್ಯಾಯ, ನಿರ್ಲಕ್ಷ್ಯವೆನಿಸಿದೆ. ರಾಮಾಯಣ ಮತ್ತು ಅಲ್ಲಿನ ಪಾತ್ರಗಳ ಬಗ್ಗೆಯೂ ಮನ ಮಿಡಿಯುವುದೇಕೆ ಎನ್ನುವ ಪ್ರಶ್ನೆಗೆ ಯಾರಲ್ಲೂ ಸರಿಯಾದ ಉತ್ತರವಿಲ್ಲ. ಅದೊಂದು ಕಾವ್ಯ ಪ್ರಸಂಗವೆಂದು ಕೈಬಿಡದೆ ಆ ಪಾತ್ರಗಳನ್ನು ಸಾರ್ವಕಾಲಿಕ, ಸಹಜ ಮತ್ತು ನಮ್ಮ ನಡುವೆಯೇ ಓಡಾಡುತ್ತಿರುವ ವ್ಯಕ್ತಿಗಳೋ ಎನ್ನುವಂತೆ ಸ್ವೀಕರಿಸಿರುವ ಭಾರತೀಯ ಮನಸ್ಸುಗಳ ಓಘ ನಮ್ಮರಿವಿಗೆ ನಿಲುಕದು ಎನ್ನಿಸುವುದು ಸಹಜವಾದರೂ ಸುಳ್ಳಲ್ಲ. ಕವಿಯ ಮನಸ್ಸೂ ಇದಕ್ಕೆ ಹೊರತಲ್ಲದ ಕಾರಣ ವಿಭಿನ್ನ ರಾಮಾಯಣಗಳ ಪರಂಪರೆಯೆ ಸೃಷ್ಟಿಯಾಯಿತೆಂದರೆ ಅತಿಶಯೋಕ್ತಿಯಲ್ಲ.

ಇಂತಹ ರಾಮಾಯಣಗಳ ಬಗ್ಗೆ ಗಮನಿಸಿದಾಗ ರಾಮಾಯಣಗಳನ್ನು ವಿಶೇಷ ಅಧ್ಯಯನಕ್ಕೊಳಪಡಿಸಿದರೆ ಹೇಗೆ ಎನ್ನುವ ಆಲೋಚನೆಯು ಇದೇ ವಿಷಯವನ್ನು ಸಂಶೋಧನೆಗೆ ಕೈಗೆತ್ತಿಕೊಳ್ಳಬೇಕೆಂಬ ನಿರ್ಧಾರಕ್ಕೆ ಕಾರಣವಾಯಿತು. ಯಾವ ಪಾತ್ರಗಳನ್ನು ಆಯ್ಕೆ ಮಾಡಿಕೊಳ್ಳುವುದೆಂಬ ವಿಚಾರ ಬಂದಾಗ ಸ್ತ್ರೀ ಪಾತ್ರಗಳನ್ನು ಅದರಲ್ಲೂ ನಿರ್ಲಕ್ಷಿತ ಸ್ತ್ರೀ ಪಾತ್ರಗಳಾದರೆ ಒಳಿತೆಂಬ ತೀರ್ಮಾನಕ್ಕೆ ಬಂದು ಅದೇ ವಿಷಯವನ್ನು ಗಟ್ಟಿಗೊಳಿಸಿಕೊಂಡು ಮೂಲ ಉದ್ದೇಶವಾಗಿಟ್ಟುಕೊಳ್ಳಲಾಯಿತು.

'ಸಂಕಾಲಿಯಾ ಅವರು ಹೇಳುವಂತೆ ರಾಮ, ಸೀತೆ, ಲಕ್ಷ್ಮಣ ಮತ್ತು ಹನುಮಂತರನ್ನು ಅವರ ಆದರ್ಶ ಗುಣಗಳಿಗಾಗಿ ಮೆಚ್ಚಿಕೊಳ್ಳಬೇಕು. ಇವು ಶತಮಾನಗಳಿಂದ ಮನುಷ್ಯನ ಹೃದಯದ ಆಳವನ್ನು ತಟ್ಟಿವೆ. ಆದರೆ ಈ ಆದರ್ಶ ಗುಣಗಳು ಇಂದು ಅನುಕರಣೀಯವೇ ಎಂಬುದು ಪ್ರಶ್ನೆ. ಅಥವಾ ಅನುಕರಣೆ ಸಾಧ್ಯವೆ ಎಂಬುದೂ ಒಂದು ಪ್ರಶ್ನೆಯೇ? ಇವು ಸೃಷ್ಟಿಸಲಾದ ಆದರ್ಶವೆ ಅಥವಾ ಸಹಜವಾದ ಗುಣಲಕ್ಷಣವೇ ಸೃಷ್ಟಿಸಲಾಗಿದ್ದರೆ ಯಾವ ಕಾರಣಕ್ಕಾಗಿ ಸೃಷ್ಟಿಸಲಾಗಿದೆ ಎಂಬ ಅನುಮಾನಕ್ಕೀಡುಮಾಡಿಕೊಡುತ್ತದೆ. ಇದರ ಜೊತೆಗೆ ಇನ್ನುಳಿದ ಹಲವು ಪಾತ್ರಗಳ ಬಗ್ಗೆಯೂ

ಯೋಚಿಸಬೇಕಾಗುತ್ತದೆ. ರಾಮಾಯಣವೆಂದರೆ ಕೇವಲ ರಾಮಸೀತೆಯರ ಕಥೆಯಲ್ಲ, ರಾಮ-ರಾವಣರ ಯುದ್ಧವಲ್ಲ, ಸಹೋದರರ ಪ್ರೀತಿ ವಿಶ್ವಾಸಗಳಲ್ಲ. ಇದನ್ನು ಮೀರಿ ಮುಂದೆ ಹೋಗುವುದು ರಾಮಾಯಣದ ಪಾತ್ರಗಳ ವೈಶಿಷ್ಟ್ಯ.

ರಾಮಕಥೆಯನ್ನೆ ವಸ್ತುವನ್ನಾಗಿ ಮಾಡಿಕೊಂಡು ಭಾಸ, ಕಾಳಿದಾಸ, ದಿಙ್ನಾಗ, ಭವಭೂತಿ ಮುಂತಾದವರು ಸಾಂದರ್ಭಿಕವಾಗಿ ಟೀಕಿಸಿದ್ದಾರೆ. (ಪ್ರಸ್ತುತ ಅಧ್ಯಯನವು ರಾಮಾಯಣದ ಕಾಲ, ಸಾಂಪ್ರದಾಯಿಕ ಭಾವನೆಗಳ ಬಗ್ಗೆ ಚರ್ಚಿಸುತ್ತಾ ಸೀತೆಯ ಜೊತೆಗೆ ಉಳಿದ ಕೆಲವು ನಿರ್ಲಕ್ಷಿತ ಸ್ತ್ರೀ ಪಾತ್ರಗಳ ಸುತ್ತಲೂ ಹೆಣೆದುಕೊಳ್ಳುತ್ತದೆ.) ಅನೇಕ ರಾಮಾಯಣದ ಸ್ತ್ರೀಪಾತ್ರಗಳು ತಮ್ಮ ಭಾವನೆಗಳನ್ನು ಹರಿಯಬಿಡುತ್ತವೆ. ಈ ಭಾವನಾಲಹರಿಯಿಂದ ಪಾತ್ರಗಳ ಪ್ರಸ್ತುತತೆಯೂ ಕಾವ್ಯಕ್ಕೆ ಮುಖ್ಯವಾಗಿತ್ತೆನಿಸುತ್ತದೆ. ಇಲ್ಲಿ ನಾವು ಮೂಲ ರಾಮಾಯಣ ಕರ್ತೃತ್ವದ ಹಿಂದಿನ ಕೈ ಯಾವುದು ಎನ್ನುವುದನ್ನು ಚರ್ಚೆಗೆ ಒಳಪಡಿಸಿದ್ದೇವೆ. ಜೊತೆಗೆ ಎರಡನೆಯ ಸ್ತರದ ಪಾತ್ರಗಳಿಗೂ ಬೆಲೆ ಕೊಡಬೇಕಿತ್ತು ಎನ್ನುವ ಕಳಕಳಿಯು ವಿವಿಧ ರಾಮಾಯಣಗಳಲ್ಲಿ ಕಂಡು ಬರುವ ಬಗೆಯನ್ನು ತುಲನಾತ್ಮಕವಾಗಿ ಶೋಧಿಸುತ್ತಾ ಅದಕ್ಕೆ ಇರಬಹುದಾದ ಸಾಮಾಜಿಕ, ಸಾಂಸ್ಕೃತಿಕ ಒತ್ತಡಗಳ ಬಗ್ಗೆಯೂ ಗಮನಹರಿಸಲಾಗಿದೆ.

ರಾಮಾಯಣದಲ್ಲಿ ಬರುವ ಪಾತ್ರಗಳು ಪುರುಷಪ್ರಧಾನ ಪಾತ್ರಗಳಿಗಷ್ಟೇ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿವೆ. ಸ್ತ್ರೀ ಶೋಷಣೆಯು ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಎರಡೂ ರೀತಿಯಲ್ಲಿ ಕಂಡುಬರುತ್ತವೆ. ರಾಮನನ್ನು ಏಕಪತ್ನಿ ವ್ರತಸ್ಥನನ್ನಾಗಿಸಲು ದೃಢವಾಗಿ ನಿಂತರೂ ಸೀತೆಯ ಪಾವಿತ್ರತೆಯ ಬಗ್ಗೆ ಅನುಮಾನಿಸುತ್ತದೆ. ದಶರಥನ ನಾಲ್ವರು ಪುತ್ರರು ವಿವಾಹಿತರಾಗಿದ್ದು, ಸೀತೆಯು ರಾಮನೊಡನೆ ವನವಾಸಕ್ಕೆ ತೆರಳಿದರೆ ಊರ್ಮಿಳೆ ನಿರಾಕೃತಳಾಗಿ ಅಯೋಧ್ಯೆಯಲ್ಲಿಯೇ ಉಳಿಯಬೇಕಾಗುತ್ತದೆ. ಮಂಥರೆಗೆ ಭರತನ ಮೇಲಿರುವ ಕುರುಡು ವಾತ್ಸಲ್ಯದಿಂದಾಗಿ ಚಂದ್ರವಂಶದ ಅರಸ ಅರಸಿಯರ ಸ್ಥಿತಿ ಚಿಂತಾಜನಕವಾಗುತ್ತದೆ ಯಾವ ಹಂತದವರೆಗೆ ಎಂಬುದರ ಬಗೆಗೆ ಗಮನ ಹರಿಸಲಾಗಿದೆ. ಹಾಗೂ ಸೀತೆ, ಊರ್ಮಿಳೆ ಪಾತ್ರಗಳು ಆತ್ಮಾವಲೋಕನ ಮಾಡಿಕೊಂಡು ಕಲ್ಲು ಹೃದಯಿಗಳಾಗಿ, ದೃಢರಾಗಿ ತಮ್ಮ ದಾರಿಯನ್ನು ತಾವು ಕಂಡುಕೊಳ್ಳಬಹುದಾದ ಅನಿವಾರ್ಯತೆಯ ಶೋಧವನ್ನು ಹಲವು ಕೃತಿಗಳ ಅಧ್ಯಯನದ ನೆರವಿನಿಂದ ಮಾಡಲಾಗಿದೆ.

### ೧.೩ ವ್ಯಾಪ್ತಿ

ರಾಮಾಯಣದ ನೂರಾರು ಆವೃತ್ತಿಗಳು ಹಲವಾರು ಭಾಷೆಗಳಲ್ಲಿ ಲಭ್ಯವಿರುವುದರಿಂದ ಎಲ್ಲವನ್ನೂ ಗಮನಿಸಿ, ಅಧ್ಯಯನ ಮಾಡಿ ಪಾತ್ರ ವಿಶ್ಲೇಷಣೆ ಮಾಡುವುದು ಸೀಮಿತ ಅವಧಿಯಲ್ಲಿ ಸಾಧ್ಯವಿಲ್ಲ. ಹೀಗಾಗಿ ಸಂಶೋಧನೆ ಅಪೂರ್ಣವಾಗಬಹುದೆನಿಸಿತು. ಹೀಗಾಗಿ ಕನ್ನಡ ಮತ್ತು ಹಿಂದಿ ಭಾಷೆಯ ರಾಮಾಯಣಗಳಿಗೆ

ಅಧ್ಯಯನವನ್ನು ಸೀಮಿತಗೊಳಿಸಿದರೆ ನಾವು ಸಮರ್ಥಿಸಿಕೊಳ್ಳಲು ಬಯಸಿರುವುದನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುತ್ತದೆನಿಸಿತು. ಮೂಲ ರಾಮಾಯಣವನ್ನು ಆಕರವಾಗಿಟ್ಟುಕೊಂಡು ಕನ್ನಡ ಮತ್ತು ಹಿಂದಿಯ ರಾಮಾಯಣಗಳಲ್ಲಿ ಬರುವ ನಿರ್ಲಕ್ಷಿತ ಸ್ತ್ರೀ ಪಾತ್ರಗಳ ತುಲನಾತ್ಮಕ ಅಧ್ಯಯನವಾದಕೆ ಆಗಬಹುದು. ಇಲ್ಲಿ ಕೂಡ ಪಂಪ ರಾಮಾಯಣ (ನಾಗಚಂದ್ರ ವಿರಚಿತ), ತೊರವೆ ರಾಮಾಯಣ, ರಾಮಾಯಣ ದರ್ಶನಂ ಇವುಗಳನ್ನು ಮತ್ತು ತುಲಸೀ ರಾಮಾಯಣ, ಸಾಕೇತ ರಾಮಾಯಣಗಳನ್ನು ಮುಖ್ಯವಾಗಿರಿಸಿಕೊಂಡಳೆ ಅಧ್ಯಯನದ ವ್ಯಾಪ್ತಿಯು ಸಮರ್ಪಕವಾಗುವುದು ಹಾಗೂ ಅತೀವ್ಯಾಪ್ತಿಯ ತೊಡಕಿಲ್ಲದೆ ಅಚ್ಚುಕಟ್ಟಾದ ಸಂಶೋಧನೆಯು ಸಾಧ್ಯವಾಗುವುದೆಂಬ ನಂಬಿಕೆಯಿಂದ ಈ ಮಿತಿಯನ್ನು ಹಾಕಿಕೊಳ್ಳಲಾಗಿದೆ. ಇಷ್ಟೇ ಕೃತಿಗಳ ಆಧಾರದಿಂದಲೇ ನಾವು ಹೇಳಬಯಸುವುದನ್ನು ಹೇಳಿ ಹೊಸ ಆಯಾಮಗಳನ್ನು ಕಂಡುಕೊಳ್ಳುವುದು ಸಾಧ್ಯ ಎಂಬುದೂ ಸಹ ಈ ನಿರ್ಧಾರವನ್ನು ಕೈಗೊಳ್ಳುವುದಕ್ಕೆ ಕಾರಣವಾಗಿದೆ.

**೧.೪ ಕಾಲ ನಿರ್ಣಯ**

ಕಾಲದ ಬಗ್ಗೆ ನಿರ್ಧರಿಸುವಾಗ ಕನ್ನಡದಲ್ಲಿ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಮೂರೂ ಪ್ರಕಾರಗಳಲ್ಲಿ ಅಧ್ಯಯನ ಮಾಡಿದರೆ ಮಾತ್ರ ವ್ಯವಸ್ಥಿತವಾಗಬಹುದು ಎನ್ನುವ ಅಭಿಪ್ರಾಯಕ್ಕೆ ಬರಲಾಯಿತು. ಜೈನ ರಾಮಾಯಣ ಮುಂತಾದವುಗಳನ್ನು ಕೂಡ ವಿಶ್ಲೇಷಿಸಬಹುದಾದ್ದರಿಂದ ಹೆಚ್ಚು ಸಮಂಜಸವಾಗುತ್ತದೆ ಎಂಬ ಅಭಿಪ್ರಾಯವಿತ್ತು. ನಿರ್ಲಕ್ಷಿತ ಸ್ತ್ರೀ ಪಾತ್ರಗಳ ಬಗ್ಗೆ ಹೇಳುವಾಗ ಕುವೆಂಪು ವಿರಚಿತ ರಾಮಾಯಣ ದರ್ಶನಂ ಕೃತಿಯನ್ನು ಬಿಟ್ಟು ಮುಂದೆ ಸಾಗುವಂತಿಲ್ಲ. ಈ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಪಂಪ ರಾಮಾಯಣದಿಂದ ಕುವೆಂಪು 'ರಾಮಾಯಣ ದರ್ಶನಂ'ವರೆಗಿನ ನಾಲ್ಕು ಮುಖ್ಯ ಕೃತಿಗಳನ್ನು ಪ್ರಮುಖವಾಗಿ ಅಧ್ಯಯನಕ್ಕೆ ಒಳಪಡಿಸುವುದು ಮತ್ತು ಉಳಿದ ರಾಮಾಯಣಗಳನ್ನು ಪ್ರಾಸಾಂಗಿಕವಾಗಿ ಗಮನಿಸುವುದು ಎಂಬ ನಿರ್ಧಾರಕ್ಕೆ ಬರಲಾಯಿತು.

ಹತ್ತನೆಯ ಶತಮಾನದಿಂದ ರಾಮಾಯಣಗಳನ್ನು ಗಮನಿಸುವುದು ಮತ್ತು ಹಿಂದಿಯ ರಾಮಾಯಣಗಳೂ ಕೂಡ ಇದೇ ಕಾಲದ ವ್ಯಾಪ್ತಿಯಲ್ಲಿ ಬರುವುದಾಗಿದ್ದು ಒಟ್ಟಾರೆ ವಾಲ್ಮೀಕಿ ರಾಮಾಯಣ ಮತ್ತು ಹತ್ತರಿಂದ ಇಪ್ಪತ್ತನೆಯ ಶತಮಾನದವರೆಗಿನ ಏಳು ರಾಮಾಯಣಗಳ ಸ್ತ್ರೀ ಪಾತ್ರಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡುವುದೆಂದು ಎಂದು ನಿರ್ಧರಿಸಲಾಗಿದೆ. ವ್ಯಾಪ್ತಿಯ ಬಗ್ಗೆ ಹೇಳುವಾಗ ನಾವು ಆಯ್ದುಕೊಂಡಿರುವ ಕೃತಿಯ ಕಾಲಗಳನ್ನು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಸಾಂದರ್ಭಿಕವಾಗಿ ವಿವಿಧ ರಾಮಾಯಣಗಳಲ್ಲಿ ಬಂದಿರುವ ವಿಭಿನ್ನತೆಗಳ ಬಗೆಗೂ ಗಮನ ಹರಿಸಲಾಗಿದೆ. ಹೀಗಾಗಿ ರಾಮಾಯಣದ ಉಳಿದ ಕೃತಿಗಳ ಕಾಲದ ಬಗೆಗೆ ತೀರಾ ಕಟ್ಟು ನಿಟ್ಟಾಗಿ ಗಮನಹರಿಸಿಲ್ಲ.

## ೧.೫ ಅಧ್ಯಯನದ ಅಧ್ಯಾಯಗಳು

ವಿಷಯ ಮಂಡನೆಯ ಅನುಕೂಲಕ್ಕಾಗಿ ಪ್ರಬಂಧವನ್ನು ಆರು ಅಧ್ಯಾಯಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಹೇಳುವುದಾಗಿದೆ. ಇದರಲ್ಲಿ ಈವರೆಗಿನ ಬಂದಿರುವ ರಾಮಾಯಣಗಳಲ್ಲಿ ಸ್ತ್ರೀ ಪಾತ್ರಗಳ ಬಗ್ಗೆ ಚರ್ಚಿಸಿರುವ ರಾಮಾಯಣಗಳ ಪರಿಚಯ ಮಾಡಿಕೊಟ್ಟು ಇದರಲ್ಲಿ ಬರುವ ಪಾತ್ರಗಳು ಬೆಳೆದು ಬಂದ ಬಗೆಯನ್ನು ಮತ್ತು ಅದರ ವಿಶೇಷತೆಯ ಬಗ್ಗೆ ವಿವರಿಸಿದೆ. ಕೂಲಂಕುಷ ಚರ್ಚೆಯನ್ನು ಸಂಬಂಧಪಟ್ಟ ಅಧ್ಯಾಯಗಳಲ್ಲಿ ಮಾಡಲಾಗಿದೆ. ಈ ಆಧ್ಯಾಯದಲ್ಲಿ ಸಂಶೋಧನೆಯ ಉದ್ದೇಶ ಮತ್ತು ವ್ಯಾಪ್ತಿಗಳನ್ನು ಸ್ಪಷ್ಟೀಕರಿಸಿ ನಿರ್ದಿಷ್ಟತೆಯ ಚೌಕಟ್ಟನ್ನು ಗುರುತಿಸಿಕೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ 'ನಿರ್ಲಕ್ಷೆ' ಈ ಪದಕ್ಕೆ ಇರುವ ಅರ್ಥ ಸಾಧ್ಯತೆಗಳು ಹಾಗೂ ವ್ಯಾಖ್ಯಾನಗಳನ್ನು ಯಥಾವತ್ತಾಗಿ ನೀಡಲಾಗಿದೆ. ನಿಘಂಟು, ಸಂಸ್ಕೃತಿಯ ನಿರ್ವಚನ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಮಹಿಳಾ ಅಧ್ಯಯನ, ರಾಜ್ಯಶಾಸ್ತ್ರ ಮುಂತಾದ ಅಧ್ಯಯನ ಶಿಸ್ತುಗಳಲ್ಲಿ ಸ್ಥಾಪಿತವಾಗಿರುವ ಅಸಮಾನತೆ, ವೈರುಧ್ಯಗಳನ್ನು ಗುರುತಿಸಲಾಗಿದೆ. ಆ ಮೂಲಕ ನಿರ್ಲಕ್ಷಕ್ಕೆ ಇರಬಹುದಾದ ಕಾರಣಗಳನ್ನು ಗುರುತಿಸಲಾಗಿದೆ. ವ್ಯಕ್ತಿ, ಗುಂಪು ಸಮುದಾಯ, ಸಮಾಜ, ವ್ಯವಸ್ಥೆ, ರಾಜ್ಯ, ರಾಷ್ಟ್ರ ಹೀಗೆ ವಿವಿಧ ನೆಲೆಯಲ್ಲಿ ನಿರ್ಲಕ್ಷೆ ಯಾರಿಂದ, ಯಾರನ್ನು ಎಂಬುದನ್ನು ಸವಿವರವಾಗಿ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹಲವು ಪ್ರಮುಖ ರಾಮಾಯಣಗಳ ಬಗ್ಗೆ ಚರ್ಚಿಸಲಾಗಿದೆ. ಕೆಲವು ರಾಮಾಯಣಗಳಲ್ಲಿ ಕಂಡುಬರುವ ಕಥಾವೈವಿಧ್ಯಗಳನ್ನು ನಿರೂಪಿಸಲಾಗಿದೆ. ಅವುಗಳನ್ನು ಪರಿಚಯಿಸಿರುವ ಉದ್ದೇಶ ಮತ್ತು ಕಾಲಕಾಲಕ್ಕೆ ಮೂಲಕಥೆಯು ಹೇಗೆ ಬದಲಾಗುತ್ತಾ ಹೋಗಿದೆ ಎನ್ನುವುದನ್ನು ಗುರಿತಿಸುವ ಸಲುವಾಗಿ ಈ ಪ್ರಯತ್ನವನ್ನು ಮಾಡಲಾಗಿದೆ. ಮೊದಲು ಸಂಸ್ಕೃತ ಮೂಲ ಮತ್ತು ಹಿಂದಿಯ ಸಾಕೇತ ರಾಮಾಯಣದಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ಪರಿಚಯಿಸಲಾಗಿದೆ. ನಂತರ ಸೀತೆಯ ಪಾತ್ರದ ವಿಶ್ಲೇಷಣೆ ಮಾಡಲಾಗಿದೆ. ಈ ಪಾತ್ರವೂ ಕೂಡ ಹೇಗೆ ನಿರ್ಲಕ್ಷಿಸಲ್ಪಟ್ಟಿದೆ ಎಂಬುದನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಊರ್ಮಿಳೆಯ ಚಿತ್ರಣ ವಿವಿಧ ರಾಮಾಯಣಗಳಲ್ಲಿ ಹೇಗಿದೆ ಎಂಬುದನ್ನು ವಿವರಿಸಲಾಗಿದೆ. ಊರ್ಮಿಳೆಯ ಪಾತ್ರ ಅನಾದಾರಕ್ಕೆ ಒಳಗಾಗಲು ಆಕೆಯನ್ನು ವಿರಹಿಣಿ, ತಪಸ್ವಿನಿ ಎಂದು ಚಿತ್ರಿಸಿ ಉನ್ನತೀಕರಿಸಲು ಪ್ರಯತ್ನಿಸಿದರೂ ಏಕೆ ಆ ಪಾತ್ರ ಅಷ್ಟೊಂದು ನೋವು, ವೇದನೆ ಪಡಬೇಕಾಯಿತು. ಆ ನೋವು ತಿರಸ್ಕಾರ ಆಕೆಯನ್ನು ಹೇಗೆ ದೃಢವಾಗಿಸಿತು, ಸ್ವತಂತ್ರವಾಗಿ ಬದುಕಲು ಅನುವು ಮಾಡಿಕೊಟ್ಟಿತು ಎಂಬ ಅಂಶವನ್ನು ಅನೇಕ ನಿದರ್ಶನಗಳ ಮೂಲಕ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ರಾಮಾಯಣದ ಪ್ರಮುಖ ನಿರ್ಲಕ್ಷಿತ ಸ್ತ್ರೀ ಪಾತ್ರಗಳು, ಮೂಲ ರಾಮಾಯಣದಲ್ಲಿ ಅವುಗಳ ಸ್ವರೂಪದ ಬಗೆಯನ್ನು ವಿವರಿಸಲಾಗಿದೆ. ನಂತರ ಇತರ ರಾಮಾಯಣಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಮೂಲದಲ್ಲಿದ್ದಂತೆಯೇ ಇದೆಯೆ ಅಥವಾ ಭಿನ್ನವಾಗಿ ಚಿತ್ರಿತವಾಗಿಯೋ ಎನ್ನುವ ಬಗ್ಗೆಯೂ ಮಾಹಿತಿ ನೀಡಲಾಗಿದೆ. ಜೊತೆಗೆ ಇಂತಹ ಪಾತ್ರಗಳ ಬಗೆಗೆ ಕವಿಯ ಸ್ವಂತ ಅನಿಸಿಕೆಗಳೇನಾದರೂ ಇವೆಯೆ? ಭಿನ್ನವಾಗಿ ಅಭಿವ್ಯಕ್ತಗೊಳಿಸಿರುವುದಕ್ಕೆ ಕಾರಣವಾದ ಹಿನ್ನಲೆಯ ಬಗ್ಗೆ ವಿವರಿಸಲಾಗಿದೆ. ಭಿನ್ನ ನಿರೂಪಣೆಯಿಂದಾಗಿ ಕಂಡುಬರುವ ಕಾವ್ಯದ ಸ್ವರೂಪ ಮುಂತಾದವುಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಎಲ್ಲ ರಾಮಾಯಣಗಳಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ಕಂಡಾಗ ಮೂಲದ ಪಾತ್ರ ಹೇಗೆ ಬದಲಾಗುತ್ತಾ ಸಾಗಿದೆ ಎನ್ನುವುದನ್ನು ಗುರುತಿಸಲಾಗಿದೆ. ಆ ಪಾತ್ರಗಳ ಬಗೆಗಿನ ಕಳಕಳಿ ಸಾರ್ವಕಾಲಿಕವಾಗಿ ಹೇಗಿತ್ತು ಎಂಬುದನ್ನು ವಿಶ್ಲೇಷಿಸಲಾಗಿದೆ. ಮತ್ತು ಏಕೆ ಈ ಪಾತ್ರಗಳು ಓದುಗರ ಮನಸ್ಸನ್ನು ತಟ್ಟುತ್ತವೆ ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೆ ಇಲ್ಲಿನ ಕೆಲವು ಸ್ತ್ರೀ ಪಾತ್ರಗಳನ್ನು ಖಳನಾಯಕಿಯರಂತೆ ಚಿತ್ರಣಗೊಳಿಸಲಾಗಿದೆ. ಅಂತಹ ಪಾತ್ರಗಳು ಇಡೀ ಕಥೆಗೆ ತಿರುವು ನೀಡಿವೆ. ಇಂತಹ ಪಾತ್ರಗಳ ನಿರ್ಲಕ್ಷ್ಯಕ್ಕೆ ಇರಬಹುದಾದ ಸಾಂಸ್ಕೃತಿಕ, ಸಾಮಾಜಿಕ ಒತ್ತಡಗಳೇನು ಎಂಬುದನ್ನೂ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಆರನೆಯ ಅಧ್ಯಾಯವಾದ ಉಪಸಂಹಾರದಲ್ಲಿ ಇಡೀ ಸಂಶೋಧನೆಯ ಸಾರವನ್ನು ನೀಡಲಾಗಿದೆ. ಮೊದಲಿಗೆ ನಾವು ಅಂದುಕೊಂಡಂತೆ ಅಧ್ಯಯನವು ನಡೆದಿದೆ. ಈ ಅಧ್ಯಾಯದಲ್ಲಿ ನಮಗೆ ದೊರಕಿರುವ ಹೊಸ ಹೊಳಹುಗಳನ್ನು ನೀಡಲಾಗಿದೆ. ಪ್ರಬಂಧದ ಕೊನೆಯಲ್ಲಿ ಗ್ರಂಥಋಣ ನೀಡಲಾಗಿದ್ದು ಮೂಲ ಆಕರ ಮತ್ತು ಪೂರಕ ಆಕರಗಳನ್ನು ನೀಡಲಾಗಿದೆ.

**ಟಿಪ್ಪಣಿಗಳು:**

೧. ಯುಗಯಾತ್ರೀ ಭಾರತೀಯ ಸಂಸ್ಕೃತಿ: ಸಂ.೨-೧೦, ಪ್ರ.ಸಂ. ಡಾ. ಕೆ.ವಿ. ಪುಟ್ಟಪ್ಪ, ಪ್ರಸಾರಾಂಗ ಮೈ.ವಿ.ವಿ. ೧೯೭೧ Complete works, IV, ೪th ed.,p.೯೭.

೨. ಯುಗಯಾತ್ರೀ ಭಾರತೀಯ ಸಂಸ್ಕೃತಿ; ಸಂ.೨, ಪು.೧೦, ಪ್ರ.ಸಂ, ಡಾ. ಕೆ.ವಿ. ಪುಟ್ಟಪ್ಪ, ಪ್ರಸಾರಾಂಗ, ಮೈ.ವಿ.ವಿ.೧೯೭೧; EXE.X.P. ೫೭೪.

೩. ಯುಗಯಾತ್ರೀ ಭಾರತೀಯ ಸಂಸ್ಕೃತಿ : ಸಂ.೨, ಪು. ೧೩, ಪ್ರ.ಸಂ., ಡಾ. ಕೆ.ವಿ.ಪುಟ್ಟಪ್ಪ, ಪ್ರಸಾರಾಂಗ, ಮೈ.ವಿ.ವಿ, ೧೯೭೧

೪. ರಾಮಕಥಾ, ಪು.೧೧೦-೨, ಆಡಿ. Bulcke.

೫. ರಾಮಾಯಣ ವಿಷವೃಕ್ಷ : ಅನು: ಬಂಜಗೆರೆ ಜಯಪ್ರಕಾಶ್, ಲಂಕೇಶ್ ಪ್ರಕಾಶನ, ಬೆಂಗಳೂರು. ೨೦೧೦. (ರಂಗನಾಯಕಮ್ಮನವರ 'ರಾಮಾಯಣ ವಿಷವೃಕ್ಷಮ್' ಆಧಾರಿತ)

# ಅಧ್ಯಾಯ-೨

## ನಿರ್ಲಕ್ಷೆ-ವ್ಯಾಖ್ಯಾನ-ಅರ್ಥಸಾಧ್ಯತೆಗಳು

ನಿರ್ಲಕ್ಷೆ ಎಂದರೆ ಯಾವುದನ್ನಾದರೂ ಒಂದು ಸಂಸ್ಥೆ, ವ್ಯವಸ್ಥೆ, ಸಮುದಾಯ, ಸಮಾಜ ಅಥವಾ ವ್ಯಕ್ತಿ ಕಡೆಗಣಿಸುವುದು ಅಥವಾ ಆ ಕಡೆ ಲಕ್ಷ್ಯ ಕೊಡದೇ ಇರುವುದು ಎಂದು ಸರಳವಾಗಿ ವಿವರಿಸಬಹುದು. ಇದಿಷ್ಟು ಸರಳವಾದ ಅರ್ಥವಾಗಿದ್ದಿದ್ದರೆ ಅದಕ್ಕಾಗಿ ಒಂದು ಪ್ರತ್ಯೇಕ ಅಧ್ಯಾಯದಡಿ ಚರ್ಚಿಸಬೇಕಾದ ಅಗತ್ಯವಿರಲಿಲ್ಲ. ಇದು ಸಮಾಜದ ಪ್ರತಿ ಹಂತದಲ್ಲೂ ಕಂಡುಬರುವ ಅಂಶ. ನಿರ್ಲಕ್ಷೆ ಕೆಲವೊಮ್ಮೆ ತಿಳಿಯದೇ ಆದರೆ ಮತ್ತೆ ಹಲವು ಸಂದರ್ಭಗಳಲ್ಲಿ ಉದ್ದೇಶಪೂರ್ವಕವಾಗಿ ನಡೆಯುತ್ತದೆ. ಆ ಉದ್ದೇಶಗಳೇನು ಎಂದು ಹುಡುಕುವ ಪ್ರಯತ್ನವೇ ನಮ್ಮದು.

### ೨.೧ ನಿಘಂಟು-ಕೋಶಗಳ ಅರ್ಥ

ಮೊದಲಿಗೆ ನಾವು ಅರ್ಥಕೋಶ, ನಿಘಂಟುಗಳಲ್ಲಿರಬಹುದಾದ ಅರ್ಥಗಳನ್ನು ಗಮನಿಸೋಣ.

**ನಿರ್ಲಕ್ಷ್ಯ**-(ಗು) ೧. ಗಮನಕ್ಕೆ ಬಾರದ, ಕಣ್ಣಿಗೆ ಬೀಳದ (ನಾ) ೨. ಅಸಡ್ಡೆ: ಅನಾದರ; ಉಪೇಕ್ಷೆ ೩. ಉದಾಸೀನವಾಗಿರುವ ವ್ಯಕ್ತಿ: ಲಕ್ಷ್ಯವಿಲ್ಲದಿರುವ ವ್ಯಕ್ತಿ: ೪. ಕಾಣದಿರುವವನು ಅಗೋಚರನಾದವನು: ನಿರ್ಲೇಪ ನಿರ್ಜಾತ ನಿರ್ಲಯ ನಿರಾಕಾರ ನಿರ್ಲಕ್ಷ್ಯ (ಏ ಕೋಪು-೫-೭೫)[೧]

**ನಿರ್ಲಕ್ಷ್ಯ**: ನಾ. ೧. ಉದಾಸೀನತೆ; ಉಪೇಕ್ಷೆ; ಅಲಕ್ಷ್ಯ: ಅಸಡ್ಡೆ: ಸರಿಯಾದ ಜೋಕೆ, ಗಮನ ಇಲ್ಲದಿರುವಿಕೆ ೨. Contributory Negligence ೩. (ಸಾಹಿತ್ಯ ಯಾ ಕಲೆ ಮೊದಲಾದವುಗಳಲ್ಲಿ) ಸಹಜತೆ; ಅನಿರ್ಬಂಧತೆ, ನಿಸ್ಸಂಕೋಚ ಮನೋಭಾವ: ಕೃತಕತೆ; ನಿರ್ಬಂಧಗಳಿಲ್ಲದಿರುವಿಕೆ.[೨]

**ಕಿಟೆಲ್‌ನ ಕನ್ನಡ ಇಂಗ್ಲಿಷ್ ಡಿಕ್ಷನರಿಯಲ್ಲಿ** ನಿರ್ಲಕ್ಷ್ಯ ಎಂಬ ಪದಕ್ಕೆ- Disregard, Contempt (My) ಎಂಬ ಅರ್ಥವಿದೆ.

**ಇಂಗ್ಲಿಷ್-ಹಿಂದಿ ಕೋಶ** (अंग्रेजी-हिन्दी कोश) (ಫಾದರ್ ಕಾಮಿಲ್ ಬುಲ್ಕೆ ರಚಿಸಿದ ಕೋಶ)

Neglect: ೧. उपेकश, अनादर, तिरस्कार, अवहेलन

೨. Negligence लापरवाही की उपेक्षा का; का ध्यान नही रखना; (पूरा) नही कं, छोड देना; neglected , उपेक्षित neglectful लापरवाह

ಪ್ರಭಾತ ವ್ಯಾವಹಾರಿಕ ಹಿಂದೀ-ಅಂಗ್ರೇಜಿ ಕೋಶ- ಬದರಿನಾಥ ಕಪೂರ್ (Prabhat Practical Hindi-English Dictionary- Badri Nath Kapoor)

उपेक्षा (U pek shA) f. neglect, indifference; करना to neglect; उसने अपने कर्तयों की ~ की He neglected his duties, अपने बचचों की~ मत कीजिए Don't neglect your children.

Oxford Dictionary:

Neglect. verb 1. Fail to give proper care or attention to 2. Fail to do something. noun the action of neglecting or the state of being neglected: animals dying through neglect-origin. Latin-neglegere'dis regard!

ಯಾವುದೇ ಅರ್ಥಕೋಶ ನಿಘಂಟುಗಳಲ್ಲಿ ಹುಡುಕಿದರೂ ಸಿಗುವುದು ಇಷ್ಟೇ ಅರ್ಥ. ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಅಧ್ಯಯನ ಶಿಸ್ತುಗಳಲ್ಲಿ ಇದರ ಅರ್ಥ ಸಾಧ್ಯತೆಗಳು ವ್ಯಾಖ್ಯಾನಗಳು ಹೇಗಿದೆ ಎಂಬುದನ್ನು ಗಮನಿಸೋಣ.

ರಾಜ್ಯಶಾಸ್ತ್ರದಲ್ಲಿ ಈ ತೆರನಾದ ಒಂದು ಅರ್ಥವಿವರಣೆ ನಮಗೆ ಲಭಿಸುತ್ತದೆ.

**ನಿರ್ಲಕ್ಷ್ಯತನ (Carelessness)** ಆಳುವವರ ನಿರ್ಲಕ್ಷ್ಯತನದಿಂದ ಕ್ರಾಂತಿಯುಂಟಾಗುವ ಸಂಭವವಿರುತ್ತದೆ. ಆಡಳಿತಾಧಿಕಾರಿಗಳು, ನ್ಯಾಯಾಧೀಶರುಗಳು ಮುಂತಾದವರನ್ನು ನೇಮಿಸುವಾಗ ಸರಕಾರ ಬಹಳ ಜಾಗರೂಕತೆಯಿಂದ ವರ್ತಿಸಬೇಕಾಗುತ್ತದೆ. ಸಮಾಜ ವಿರೋಧಿಗಳನ್ನು ಉನ್ನತ ಹುದ್ದೆಗಳಿಗೆ ನೇಮಿಸುವುದರಿಂದ, ಸಾರ್ವಜನಿಕರಲ್ಲಿ ಅಸಮಾಧಾನವುಂಟಾಗುತ್ತದೆ. ಹೀಗೆ ಅಧಿಕಾರಕ್ಕೆ ಬಂದವರು ಸರಕಾರವನ್ನು ಉರುಳಿಸಲೂ ಪ್ರಯತ್ನಿಸಬಹುದು. ಆದುದರಿಂದ ಸರಕಾರ ಅಧಿಕಾರಿಗಳನ್ನು ನೇಮಿಸುವಾಗ ನಿರ್ಲಕ್ಷ್ಯ ತೋರಿದರೆ ರಾಷ್ಟ್ರಕ್ಕೆ ಅಪಾಯ ತಪ್ಪಿದ್ದಲ್ಲ.[೩] ಇದರಲ್ಲಿ ನಿರ್ಲಕ್ಷ್ಯ ಅಂದರೆ ಅಪಾಯ, ದುರಂತ, ಸರ್ವನಾಶ ಎಂಬ ಅರ್ಥ ಬರುವಂತಿದೆ.

ಸಮಾಜ ವಿಜ್ಞಾನದ ವಿಶ್ವಕೋಶದಲ್ಲಿ ನಿರ್ಲಕ್ಷ್ಯಕ್ಕೆ ಮುಂದಿನಂತೆ ಅರ್ಥ ವಿವರಣೆಯಿದೆ.

**NEGLIGENCE**. In modern law liability for negligence, or fault, is more common in the civil than in the criminal law. The liability for criminal negligence has already been treated under intent (see Intent, Criminal). In early systems of law, however, little if any distinction is traceable between civil and criminal liability: the two forms of liability may be described as a viscous intermixture.

In the Roman law, as stated by Justinian, *dolus*, or intentional damage, was opposed to *culpa*, or unintentional damage. *Culpa* originally signified active conduct and was contrasted with *negligentia*, or negligent ormission, the opposite of which was *diligentia*. Three degrees of *culpa* were recognized: *culpa levis*, or failure to exercise that degree of care which a *bonus pater* familias (a careful, circumspect, sound man of business) would use; *culpa levis in concreto* (the epithet in *concreto* is due ot the moderns), or failure to show such care as a person would ordinarily use in his own affairs; *culpa lata*, or failure to show any reasonable care- lack of that degree of care "which any fool would take"- reckoned as equivalent to *dolus*. The first and third standards of care were therefore defined objectively, but the second was a subjective conception. The principles upon which these degrees of care were based in contractual and quasi-contractual liability are not clear. A rough test was that where a party benefited by a transaction he was liable for culpa levis and that where he did not benefit he was liable only for *dolus* and *culpa lata*; but there are puzzling exceptions and still greater difficulties with respect to liability for *culpa levis in concreto*. As regards delict the rule was much simpler. The typical delict involving *culpa* was unlawful damage, *damnum injuri*, under the *Lex aquilia*, and *culpa levis* was sufficient to raise liability. Contributory negligence of the aggrieved person was a defense if it was the true case of the injury. There was no liability for mere omission. In contrast with modern Anglo-American law *culpa* was not itself an independent delict. For *casus*, or inevitable accident, no one was liable in delict or, in the absence of express agreement, in contract. Roman law recognized vicarious responsibility for so-called "quasi-delict"; for example, a ship owner, an innkeeper or a public stable keeper was liable for the theft or damage of his employees, and in "noxal liability" the owner of a slave had the option of handing over to

the injured party the slave who had committed a delict or of paying damages. Otherwise an employer was not liable for the delicts of his servants unless he was in *culpa* himself. ನಿರ್ಲಕ್ಷ್ಯಕ್ಕೆ ಜವಾಬ್ದಾರರು ಯಾರು, ಎಷ್ಟು ಪ್ರಮಾಣದಲ್ಲಿ ಜವಾಬ್ದಾರರು, ಜವಾಬ್ದಾರರಿಗೆ ಏನು ಬದ್ಧತೆ ಇರುತ್ತದೆ ಎಂಬ ವಿವರಗಳನ್ನು ಈ ವ್ಯಾಖ್ಯಾನ ನೀಡುತ್ತದೆ.

**೨.೨ ಜಾತಿ, ವರ್ಗ ಮತ್ತು ಧರ್ಮ- ನಿರ್ಲಕ್ಷ್ಯದ ಅರ್ಥ ಸಾಧ್ಯತೆಗಳು**

ಪ್ರಸ್ತುತ ಸಮಾಜದಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿರುವಂತದ್ದು ಧರ್ಮ. ಇದರ ಶ್ರೇಷ್ಠತೆ ಕನಿಷ್ಠತೆಯ ಕಾರಣದಿಂದಾಗಿ ದೊಡ್ಡ ದುರಂತಗಳು ಸಂಭವಿಸುತ್ತಿರುವುದನ್ನು ನಾವು ಗಮನಿಸುತ್ತಿದ್ದೇವೆ. ಧರ್ಮದಲ್ಲಿ ಶ್ರೇಷ್ಠವಾದದ್ದು ಕನಿಷ್ಠವಾದ್ದದನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿ ಅವಮಾನ, ಅಪಮಾನಕ್ಕೆ ಒಳಪಡಿಸುವ ಸಂದರ್ಭಗಳಿವೆ. ಮನುಷ್ಯನ ಹುಟ್ಟಿನಿಂದಲೇ ಈ ಧರ್ಮ ಅಸ್ತಿತ್ವದಲ್ಲಿತ್ತ ಅಥವಾ ಇದನ್ನು ಸೃಷ್ಟಿಸಿದವರು ಯಾರು, ಯಾರನ್ನು ಉಪೇಕ್ಷಿಸಲು, ನಿಯಂತ್ರಣದಲ್ಲಿಡಲು ಇಂತಹ ಧರ್ಮಗಳ ಸ್ಥಾಪನೆಯಾಯಿತು ಎಂಬುದನ್ನು ಸ್ವಲ್ಪ ಗಮನಿಸೋಣ.

ಆರಂಭದಲ್ಲಿ ಭಾರತೀಯ ಸಮುದಾಯ ಜಾತಿ, ವರ್ಗರಹಿತವಾಗಿದ್ದವು. ಪ್ರತಿಯೊಂದು ಬುಡಕಟ್ಟು ಸಮುದಾಯ ತಾನು ಜೀವಿಸುತ್ತಿದ್ದ ಪರಿಸರದ ಗಿಡ, ಮರಗಳ, ತಾನು ಸೌಹಾರ್ದ ಸಂಬಂಧ ಹೊಂದಿದ್ದ ಪ್ರಾಣಿಗಳ ಹೆಸರುಗಳಿಂದ ತನ್ನ ಗುಂಪನ್ನು ಹೆಸರಿಸುತ್ತಿದ್ದ. ಉದಾಹರಣೆಗೆ ಮತ್ಸ್ಯ, ಅಜ, ಗೋತಮ, ವತ್ಸ ಶುನಕ, ಕೌಶಿಕ, ಮಂಡೂಕೇಯ, ಕಶ್ಯಪ ಮುಂತಾಗಿ. ಇಂತಹ ಒಂದು ಗುಂಪುಗಳ ಸದಸ್ಯರುಗಳಲ್ಲಿ ಸದಾ ಸಮಾನತೆ ಇರುತ್ತಿತ್ತು. ಏಕೆಂದರೆ ಅವರಲ್ಲಿ ಆಸ್ತಿಯ ಒಡೆತನವಾಗಲಿ, ಮಾಲೀಕತ್ವವಾಗಲಿ ಇರಲಿಲ್ಲ. ಇಲ್ಲಿ ಎಲ್ಲರೂ ಸಮಾನರು, ಎಲ್ಲರೂ ದುಡಿದು ಹಂಚಿ ತಿನ್ನುತ್ತಿದ್ದರು. ಯಾವುದೇ ಗುಂಪಿನ ಯಾವುದೇ ಸದಸ್ಯ ಎಷ್ಟೇ ಬಲಶಾಲಿಯಾಗಿದ್ದರು ಖಾಸಗಿ ಒಡೆತನದ ಆಸ್ತಿಯನ್ನು ಹೊಂದಲು ಅವಕಾಶಗಳೇ ಇರಲಿಲ್ಲ. ಅಂತಹ ಅಪೇಕ್ಷೆ ಅವರಲ್ಲಿರಲಿಲ್ಲ.

ಬುಡಕಟ್ಟಿನವರು ನಾಗರೀಕರು ಮತ್ತು ಶಿಸ್ತುಬದ್ಧ ಜೀವನ ನಡೆಸುತ್ತಿದ್ದರು ಎಂಬುದು ಅನೇಕ ಅಧ್ಯಯನಗಳಿಂದ ನಮಗೆ ಕಂಡುಬರುತ್ತದೆ. ಅವರ ಪ್ರಕೃತಿಯೊಂದಿಗಿನ ಒಡನಾಟ, ಅದರೊಂದಿಗಿನ ತಾದಾತ್ಮ್ಯ ಸಂಬಂಧ ಇಂದಿಗೂ ನಮಗೆ ಅಚ್ಚರಿಯನ್ನು ಮೂಡಿಸುತ್ತದೆ. ಅವರ ಬದುಕಿನ ಶೈಲಿ, ಸಹಬಾಳ್ವೆ ಸಾಂಪ್ರದಾಯಿಕ ಜ್ಞಾನ, ನಮಗೆ ಈಗಲೂ ಬೆರಗುಗೊಳಿಸುತ್ತದೆ. ನಾಗರೀಕ ಸಮಾಜಕ್ಕೆ ಈಗಲೂ ಅವರ ಆಚರಣೆಯಲ್ಲಿದ್ದ, ಅನುಸರಿಸುತ್ತಿದ್ದ ಮೌಲ್ಯಗಳು ಅನುಕರಣೀಯ. ಅವರಲ್ಲಿ ಆಳುವ ವರ್ಗ ಹಾಗೂ ಸೇವಕ ಎಂಬ ವರ್ಗಬೇಧವಿರಲಿಲ್ಲ. ಅವರ ಹಕ್ಕು ಮತ್ತು ಕರ್ತವ್ಯಗಳು ಒಂದೇ ಆಗಿದ್ದವು. ಅವರ ಎಲ್ಲ ಉತ್ಪನ್ನಗಳು

ಸಾಮೂಹಿಕ ಒಡೆತನಕ್ಕೆ ಒಳಪಟ್ಟಿರುತ್ತಿದ್ದವು. ಹಿಂದೆ ನಮ್ಮ ಗ್ರಾಮೀಣ ಬದುಕು ಸಹ ಹಾಗೆಯೇ ಇತ್ತು. ನಮ್ಮ ಜನಪದ ರಚನೆಗಳಿಗೆ ಇವತ್ತಿಗೂ ಕರ್ತೃಗಳಿಲ್ಲ. ಅವನ್ನು ಸಂಗ್ರಹಿಸಿ ಪ್ರಕಟಿಸಿ ವಿದ್ವಾಂಸರು ಅದರ ಮಾಲೀಕತ್ವವನ್ನು ಹೊಂದಿದ್ದಾರೆ.

ಹೀಗಿದ್ದ ವರ್ಗರಹಿತ ಸಮಾಜಗಳಲ್ಲಿ ವರ್ಗಗಳು ಹೇಗೆ ಹುಟ್ಟಿಕೊಂಡವು ಎಂಬುದು ನಿಜವಾಗಿ ಕುತೂಹಲದ ಸಂಗತಿ. ಇದರ ಮೂಲವನ್ನು ನಾವು ವೇದಗಳಲ್ಲಿ ಹುಡುಕಬಹುದು. ಋಗ್ವೇದದ ಪುರುಷ ಸೂಕ್ತದ ಎರಡು ಋಕ್ಕುಗಳಲ್ಲಿ ಇದರ ಪ್ರಸ್ತಾಪವಿದೆ. ಸೃಷ್ಟಿಯ ಉಗಮದಿಂದ ಹಿಡಿದು ಚಾತುರ್ವರ್ಣ್ಯ ವ್ಯವಸ್ಥೆಯ ಸೃಷ್ಟಿಯವರೆಗೂ ಇದರಲ್ಲಿ ಮಾಹಿತಿ ಲಭಿಸುತ್ತದೆ. ಈ ಪುರುಷಸೂಕ್ತ ಋಕ್ಕುಗಳಲ್ಲಿ ಹೇಳಿರುವಂತೆ ಚಾತುರ್ವರ್ಣ್ಯಗಳು ಸೃಷ್ಟಿಕರ್ತನಾದ ಪುರುಷನ ದೇಹದಿಂದ ಹೇಗೆ ಉದ್ಭವಿಸಿದವು ಎಂಬುದು ಕಂಡುಬರುತ್ತದೆ. ಸಮಾಜದಲ್ಲಿ ನಿರ್ಲಕ್ಷಕ್ಕೆ ಕಾರಣವಾದ ಜಾತಿವ್ಯವಸ್ಥೆಯ ಮೂಲ ಯಾವುದು ಎಂದು ತಿಳಿಸುವುದು ಮುಖ್ಯ ಉದ್ದೇಶವಾದ್ದರಿಂದ ಈ ಚರ್ಚೆಯನ್ನು ಲಂಬಿಸಲಾಗಿದೆ. ಈ ಸೃಷ್ಟಿ ಪುರುಷನ ದೇಹದಿಂದ ನಾಲ್ಕು ವರ್ಗಗಳು ಉದಿಸಿದವು ಎಂದು ಹೇಳಲಾಗುತ್ತದೆ. ಪುರುಷನ ತಲೆಯಿಂದ ಬ್ರಾಹ್ಮಣ, ಬಾಹುಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ ಮತ್ತು ಪಾದಗಳಿಂದ ಶೂದ್ರ ಉದಿಸಿದರೆಂದು ಅವು ಹೇಳುತ್ತವೆ. ಇದು ಕೇವಲ ವೇದಗಳನ್ನು ರಚಿಸಿದ ಸೃಷ್ಟಿಕರ್ತನ ಕಲ್ಪನೆಯೆಂದು ಯಾರೂ ಭಾವಿಸದಷ್ಟು ಭದ್ರವಾಗಿ ಸಮಾಜದಲ್ಲಿ ನೆಲೆಯೂರಿದೆ ಹಾಗೂ ಸಮಾಜದ ಏಣಿಶ್ರೇಣಿಗೆ ಇಂದಿಗೂ ಕಾರಣೀಭೂತವಾಗಿದೆ. ಇದನ್ನು ಹೆಚ್ಚು ಪ್ರಚುರಪಡಿಸಿ ಬಳಸಿಕೊಂಡವರು ಆರ್ಯರು. ಇವು ಸಮಾಜದ ರಚನೆಯನ್ನು ನಿರ್ಧರಿಸಲು ದೈವದಿಂದ ಬಂದ ಆದೇಶ ಎಂಬಂತೆ ಬಿಂಬಿಸಿದರು. ಇದರ ಪರಿಣಾಮದಿಂದಾಗಿ ಶೂದ್ರ ಸಮಾಜದಲ್ಲಿ ಅತ್ಯಂತ ನಿರ್ಲಕ್ಷೆಗೆ ಒಳಗಾದ. ಶೂದ್ರ ಹಿಂಡುವ ಹಾಲು ಅಗ್ನಿಹೋತ್ರಕ್ಕೆ ಉಪಯೋಗವಿಲ್ಲ ಎಂದಾಯಿತು. ಯಜ್ಞಯಾಗಾದಿಗಳನ್ನು ಮಾಡುವಾಗ ಅವನೊಡನೆ ಮಾತನಾಡುವುದು ಅಪಚಾರ ಎಂದಾಯಿತು. ಸೋಮಪಾನ, ಸುರಪಾನಗೋಷ್ಠಿಯಿಂದ ಅವನನ್ನು ದೂರ ಇರಿಸಿದರು. ಶೂದ್ರ ಅದ್ವಿಜನೆಂದು ಅವನಿಗೆ ಉಪನಯನ ಜನಿವಾರವಿಲ್ಲ, ಅವನು ಮೂರು ಮೇಲ್ವರ್ಗದ ಸೇವಕ, ಅದರಲ್ಲೂ ಬ್ರಾಹ್ಮಣರ ಸೇವೆ ಮಾಡಿದರೆ ಅತಿ ಹೆಚ್ಚು ಪುಣ್ಯ ದೊರೆಯುತ್ತದೆ ಎಂದು ನಂಬಿಸಲಾಯಿತು. ಸಮಾಜದಲ್ಲಿ ಚಾತುರ್ವರ್ಣ್ಯಗಳೇ ಆತ್ಯಂತಿಕ ಹಾಗೂ ಶ್ರೇಷ್ಠ ಎಂದು ನಂಬಿಸಲಾಯಿತು. ಕ್ರಮೇಣ ಜನಸಂಖ್ಯೆ ಹೆಚ್ಚಾದಂತೆ ಉತ್ಪಾದನೆ ಹೆಚ್ಚಾಯಿತು. ಉತ್ಪಾದನಾ ಸಾಧನಗಳು ಹೆಚ್ಚಾದಂತೆಲ್ಲ ವರ್ಗರಹಿತವಾದ ಸಮಾಜದಲ್ಲಿ ಶ್ರಮದ ವಿಭಜನೆ ಆರಂಭವಾಯಿತು. ಉಚ್ಚವರ್ಣದವರು ಚಾಣಾಕ್ಷತನದಿಂದ ಶ್ರಮವಿಭಜನೆಯನ್ನು ಎರಡು ಪ್ರಮುಖ ಭಾಗಗಳಲ್ಲಿ ಗುರುತಿಸಿದರು. ಒಂದು ಮಾನಸಿಕ, ಇನ್ನೊಂದು ದೈಹಿಕ ಶ್ರಮ ಎಂದು ವಿಂಗಡಿಸಲಾಯಿತು. ಈಗಾಗಲೇ ಉಚ್ಚವರ್ಗದವರು ಅಕ್ಷರಜ್ಞಾನವನ್ನು ಹೊಂದಿದವರಾದ್ದರಿಂದ ಮಾನಸಿಕ ಶ್ರಮದ ಕೆಲಸಗಳು ಅವರದಾದವು, ದೈಹಿಕ ಶ್ರಮದ ಕೆಲಸಗಳೆಲ್ಲ ಶೂದ್ರದ ಪಾಲಾದವು. ಈ ಶ್ರಮ ವಿಭಜನೆಯನ್ನು

ಆದರ್ಶವೆಂದು ದೈವೀನಿಯಮವೆಂದು ನಂಬಿಸಲಾಯಿತು. ಶೂದ್ರರು ದೈಹಿಕ ಶ್ರಮದ ಕೆಲಸಗಳನ್ನು ಶ್ರದ್ಧೆಯಿಂದ ನಿಷ್ಠೆಯಿಂದ ಮಾಡುವ ಸಲುವಾಗಿ ಅದನ್ನು ನಿಯಂತ್ರಿಸಲು ದೇವರು, ಕರ್ಮಸಿದ್ಧಾಂತವನ್ನು ಜಾರಿಗೆ ತರಲಾಯಿತು.

ಅದೇನೆ ಇದ್ದರೂ ಉತ್ಪಾದನೆ ಅತ್ಯಂತ ಕಡಿಮೆ ಇದ್ದಾಗ ಅದು ತಮ್ಮ ಅಗತ್ಯಕಷ್ಟೇ ಎಂದು ಭಾವಿಸಿ ಬದುಕುವ ಮನಸ್ಥಿತಿ ಇತ್ತು. ಉತ್ಪಾದನೆ ಹೆಚ್ಚಾದಂತೆಲ್ಲ ಅದರ ಒಡೆತನ ಮಾಲೀಕತ್ವದ ಪರಿಕಲ್ಪನೆ ಹುಟ್ಟಿಕೊಂಡಿತು. ಕ್ರಮೇಣ ಅದರ ಮಾಲೀಕತ್ವವು ಉನ್ನತ ವರ್ಗ/ಜಾತಿಯವರ ಪಾಲಾಯಿತು. ಬುದ್ಧಿ ಮತ್ತು ಶಾರೀರಿಕ ಬಲ ಇದ್ದವರು ಭೂ ಮಾಲೀಕರಾದರು, ಉಳಿದ ಶೂದ್ರರು ಅವರ ಜೀತದಾಳಾದರು. ಉತ್ಪಾದನಾ ಸಾಧನಗಳ ಬೆಳವಣಿಗೆಯಿಂದಾಗಿ ವರ್ಗ ವಿಭಜಿತ ಸಮಾಜವನ್ನು ನಿಯಂತ್ರಿಸಲು ಒಂದು ವ್ಯವಸ್ಥೆ ಅಗತ್ಯವಿತ್ತು. ದೈವದ ಕಲ್ಪನೆ ಬಹುಶಃ ಮೂಡಿದ್ದು ಇಂತಹ ಸಂದರ್ಭದಲ್ಲಿ ಎಂದರೆ ತಪ್ಪಾಗಲಾರದು. ಸಮಾಜದ ಬೆಳವಣಿಗೆಯ ಒಂದು ಚಾರಿತ್ರಿಕ ಹಂತದಲ್ಲಿ ಧರ್ಮ ಉದಯಿಸಿತು. ಬಲಿಷ್ಠ ವರ್ಗ ದುರ್ಬಲ ವರ್ಗಗಳನ್ನು ಶೋಷಿಸಿ ತನ್ನ ಅಂಕೆಯಲ್ಲಿಟ್ಟುಕೊಳ್ಳಲು ದೇವರು, ಧರ್ಮ ಅಗತ್ಯ ಮಾನದಂಡಗಳಾದವು. ಎಷ್ಟರಮಟ್ಟಿಗೆ ಇದು ಸಮಾಜದಲ್ಲಿ ಆಚರಣೆಯಲ್ಲಿದೆ ಎಂದರೆ ಮಾನವೀಯತೆಯಿರುವ ಉಚ್ಚ ಜಾತಿ ಜನರು ಇದು ಶೋಷಣೆ ಎನಿಸಿದರೂ ಅದನ್ನು ತಡೆಯಲು ಅಶಕ್ತರಾದಂತಹ ಸಂದರ್ಭ ಸೃಷ್ಟಿಯಾಗಿದೆ. ಮನುಷ್ಯನ ಮಿತಿ ಅಥವಾ ನಿಯಂತ್ರಣವನ್ನು ಮೀರಿ ಒಂದು ಸಮುದಾಯದ, ಗುಂಪಿನ ಪ್ರಜ್ಞೆಯಾಗಿ ಇದು ರೂಪುಗೊಂಡಿದೆ. ಪ್ರಜ್ಞಾವಂತರೂ ಕೂಡ ಅದರಿಂದ ಹೊರಬರಲು ಸಾಧ್ಯವಾಗದಷ್ಟು ಇಕ್ಕಟ್ಟುಗಳನ್ನು ಕಟ್ಟಿಕೊಳ್ಳಲಾಗಿದೆ. ಧರ್ಮ, ಜಾತಿ ಬಿಟ್ಟು ಹೊರಬರಲಾಗದ ಶೋಷಣೆಯನ್ನು ಪ್ರತಿಭಟಿಸಲಾಗದ ಸ್ಥಿತಿಗೆ ನಾವಿಂದು ಬಂದು ಸೇರಿದ್ದೇವೆ. 'Blood is thicker than water' ಎಂಬಂತೆ ಅಪ್ರಜ್ಞಾಪೂರ್ವಕವಾಗಿ ಸ್ವಜಾತಿಯ ವ್ಯಾಮೋಹ ಹೆಚ್ಚಾಗಿದೆ. ಮನುಷ್ಯ ಮನುಷ್ಯರನ್ನು ಪ್ರೀತಿಸುವುದನ್ನು, ಸಮಾನತೆಯ ಪ್ರತಿಪಾದಿಸದಿರುವದನ್ನು ಕಂಡು ಈ ಧರ್ಮ ಬೇಡ ಎಂದು ದೂರ ಇದ್ದರೂ, ಧರ್ಮ, ಜಾತಿ ರಹಿತವಾಗಿ ಬದುಕಲು ಸಾಧ್ಯವಿಲ್ಲ. ಅದನ್ನು ಬಿಟ್ಟರೆ ಮತ್ತೊಂದು ಧರ್ಮ, ಜಾತಿಯನ್ನು ಸೇರಿ ಬದುಕಬೇಕಾದ ಅನಿವಾರ್ಯತೆ ಬಂದೊದಗುತ್ತದೆ. ಹಾಗಾಗಿ ಮನುಷ್ಯ ಧರ್ಮ ಜಾತಿರಹಿತವಾಗಿ ಬದುಕಲು ಸಾಧ್ಯವೇ ಇಲ್ಲ ಎಂಬಂತಹ ಸ್ಥಿತಿ ನಿರ್ಮಾಣವಾಗಿದೆ. ವರ್ಣವ್ಯವಸ್ಥೆಯಲ್ಲಿ ಅಥವಾ ಜಾತಿವ್ಯವಸ್ಥೆಯಲ್ಲಿ ನಿರ್ಲಕ್ಷಕ್ಕೆ ಒಳಗಾದ ಸಮುದಾಯ, ಜಾತಿ ಅದನ್ನು ಹಿಂದಿನ ಜನ್ಮದ ಕರ್ಮದ ಫಲ ಎಂದು ಭಾವಿಸುವಂತೆ ಮಾಡಲಾಗಿದೆ. ಮುಂದಿನ ಜನ್ಮದಲ್ಲಾದರೂ ಸುಖವಾಗಿ ಇರಬೇಕೆಂದರೆ ಈ ಜನ್ಮದಲ್ಲಿ ಉಚ್ಚವರ್ಗದವರ ಅಥವಾ ದೈವಪ್ರತಿನಿಧಿಗಳ ಸೇವೆ ಮಾಡಿ ಪುಣ್ಯದ ಖಾತೆ ತೆರೆಯಬೇಕು ಇಲ್ಲದಿದ್ದರೆ ಮುಂದಿನ ಜನ್ಮದಲ್ಲೂ ನೋವು ತಪ್ಪಿದ್ದಲ್ಲ ಎಂದು ಬೋಧಿಸಲಾಗಿದೆ.

ಬ್ರಹ್ಮವೊಂದೇ ಸತ್ಯ, ಬ್ರಹ್ಮವನ್ನುಳಿದು ಮತ್ತೇನೂ ಇಲ್ಲ ಮತ್ತು ಕಣ್ಣಿಗೆ ಕಾಣುವ ಪ್ರಪಂಚವೆಲ್ಲಾ 'ಮಾಯೆ' ಅಥವಾ ಮನಸ್ಸಿನ ಭ್ರಮೆ ಎಂಬುದು ಹಿಂದು ಧರ್ಮದ ಮುಖ್ಯ ಸಂದೇಶಗಳಲ್ಲಿ ಒಂದು ಎಂದು ಹೇಳುತ್ತಾ ಆ ಧರ್ಮ ಪ್ರತಿಪಾದಿಸುವ ಅಂಶಗಳ ಹಿಂದಿನ ಸಂಚನ್ನು ಬಯಲಿಗೆಳೆಯಲು ಪ್ರಯತ್ನಿಸಿದ ಸಂಪಾದಕ ಶ್ರೀ ಬಿ.ವಿ. ವೀರಭದ್ರಪ್ಪ ಅವರು ಚರ್ಚಿಸಿದ ಮೂರು ಸಿದ್ಧಾಂತಗಳು ಕುತೂಹಲಕಾರಿಯಾಗಿವೆ. ಅವು ಇಂದಿಗೂ ಸಮಾಜದ ದಿಕ್ಕನ್ನು ನಿರ್ಧರಿಸುತ್ತಿವೆ ಎಂಬುದೇ ವಿಷಾದದ ಸಂಗತಿ. ಆ ಮೂರು ಸಿದ್ಧಾಂತಗಳು ಯಾವುವು,

೧. ಪರಮಾತ್ಮನೊಬ್ಬನೆ ಕರ್ತೃ, ಅವನ ಇಚ್ಛೆ ಇಲ್ಲದೆ ಹುಲ್ಲು ಎಸಳೂ ಅಲುಗುವುದಿಲ್ಲ.

೨. ನಾನು ಜೀವಾತ್ಮ, ಕರ್ತೃವಲ್ಲ: ಅಂದರೆ ದಿನನಿತ್ಯದ ಆಗು–ಹೋಗುಗಳಿಗೆ ಕಾರಣನಲ್ಲ.

೩. ಏಕೈಕ ಕರ್ತೃವಾದ ಪರಮಾತ್ಮ ನ್ಯಾಯವಾದುದನ್ನೇ ಮಾಡುತ್ತಾನೆ. ಅವನು ವ್ಯಕ್ತಿಯ ಕೆಲಸಕ್ಕೆ ತಕ್ಕ ಫಲ ನೀಡುತ್ತಾನೆ. ಯಾರಾದರೂ ನೋವು ಅನುಭವಿಸಿದರೆ ಅದು ಅವನ ಪೂರ್ವಾರ್ಜಿತ ಕರ್ಮದ ಫಲ. ಎಲ್ಲ ಕೆಲಸಗಳು ಪರಮಾತ್ಮನವೇ ಆದರೆ ಮತ್ತು ಅವನು ಮಾಡುವುದೆಲ್ಲಾ ನ್ಯಾಯವೇ ಆದರೆ ಇಷ್ಟೆಲ್ಲಾ ನೋವು ಕಷ್ಟ ಏಕೆ ಎಂದೂ ಎಲ್ಲೂ ಹೇಳಿಲ್ಲ.[೫]

ಹಾಗಾಗಿ ಈ ಸಿದ್ಧಾಂತಗಳ ಪರಿಣಾಮವಾಗಿ ಶೋಷಿತವರ್ಗ, ನಿರ್ಲಕ್ಷೆಗೆ ಒಳಗಾದ ವರ್ಗ/ಜಾತಿ ಕಷ್ಟಪಡುವುದು ಸರಿಯಾಗಿಯೇ ಇದೆ. ಅವರ ಕರ್ಮಾನುಸಾರ ಅವರ ಕಷ್ಟದ ಪ್ರಮಾಣ ನಿರ್ಧಾರವಾಗಿದೆ. ಅದು ದೈವ ನಿಯಮ, ಕರ್ತೃವಿನ ನಿರ್ಧಾರ. ಪ್ರಶ್ನೆಮಾಡುವ ಧೈರ್ಯ, ಶಕ್ತಿ ಹುಲುಮಾನವರಿಗಿಲ್ಲ. ದೈವ ಪ್ರತಿನಿಧಿಗಳಿಗೆ ದೇವರನ್ನು ಕುತ್ತಿಗೆ ಹಿಡಿದು ಪ್ರಶ್ನಿಸುವ ಶಕ್ತಿಯಿದೆ. ಆದರೆ ಅದು ಅವರಿಗೆ ಬೇಕಿಲ್ಲ. ಹಿಂದಿನ ಪುಣ್ಯದ ಫಲವಾಗಿ ಅವರು ಸಂತೋಷದಿಂದ ಇದ್ದಾರೆ. ಒಂದುವೇಳೆ ಈಗ ಪಾಪ ಕರ್ಮಗಳನ್ನು ಮಾಡಿದರೆ ಅದಕ್ಕೂ ಅವರ ಬಳಿ ಪರಿಹಾರಗಳಿವೆ. ಮಂತ್ರಗಳನ್ನು ಜಪಿಸುವುದರಿಂದ, ಯಜ್ಞಗಳನ್ನು, ಹೋಮಗಳನ್ನು ಮಾಡುವುದರಿಂದ ಅವರು ದಿನನಿತ್ಯ ಮಾಡುವ ಪಾಪಕರ್ಮಗಳಿಂದ ಮುಕ್ತಿದೊರೆತು ಮರುದಿನ ಹೊಸ ಪಾಪಕೃತ್ಯಗಳನ್ನು ಮಾಡಲು ಶುದ್ಧ ಹಸ್ತರಾಗಿರಲು ಅವಕಾಶಗಳಿವೆ. ಶೂದ್ರರಿಗೆ ಈ ಸೌಲಭ್ಯವೂ ಇಲ್ಲ, ಇದ್ದರೂ ಅದಕ್ಕೆ ಅವರು ಅಷ್ಟು ಯೋಗ್ಯತೆ ಸಂಪಾದಿಸಿಲ್ಲ. ಹಾಗಾಗಿ ಶೋಷಿತರು ನಿರಂತರ ಸಂತೋಷದಿಂದ ಶೋಷಣೆಗೆ ತಮ್ಮ ಕರ್ಮ ಎಂದು ಒಳಗಾಗುತ್ತಲೇ ಇರುತ್ತಾರೆ. ತುಳಿಯುವವರು ಇದು ನಮ್ಮ ಕರ್ತವ್ಯ ಎಂದೂ, ತಮ್ಮ ದೈವದತ್ತ ಹಕ್ಕು ಎಂದೋ ತುಳಿಯುತ್ತಲೇ ಇರುತ್ತಾರೆ. ಇದನ್ನು ಅವತಾರ ಪುರುಷ ಶ್ರೀ ಕೃಷ್ಣನೇ ಪ್ರತಿಪಾದಿಸಿದ್ದಾನೆ. ಭಗವಂತನ ನಿರ್ಣಯವನ್ನು ಯಾರಾದರೂ ಪ್ರಶ್ನಿಸಲು ಸಾಧ್ಯವೆ. ದೇವರು, ಧರ್ಮ, ಸಂಸ್ಕೃತಿ, ಜಾತಿ, ವರ್ಗ ಇವುಗಳು ಉದಯಿಸಿದ ಕಾರಣಗಳನ್ನು ತಾರ್ಕಿಕವಾಗಿ ಚಿಂತಿಸಿ ಅರ್ಥಮಾಡಿಕೊಂಡರೆ ಮಾತ್ರ ಜಾತಿರಹಿತ ಮತ್ತು ವರ್ಗರಹಿತ ಸಮಾಜ ನಿರ್ಮಾಣ ಸಾಧ್ಯ. ಒಟ್ಟಿನಲ್ಲಿ ದೇವರು ಧರ್ಮ ಇವುಗಳು ನಾಶವಾಗಿ ವಿಜ್ಞಾನ, ವೈಚಾರಿಕ ಪ್ರಜ್ಞೆಯ ಪ್ರಸಾರ ಆಗಬೇಕಿದೆ. ಎಲ್ಲರಲ್ಲೂ ಈ

ಅರಿವು ಮೂಡಿದರೆ ಮಾತ್ರ ಜಾತಿರಹಿತ, ವರ್ಗರಹಿತ ಸಮಾಜ ನಿರ್ಮಾಣದ ದಾರಿಯಲ್ಲಿ ನಡೆಯಬಹುದಾಗಿದೆ. ಆದರೆ ಈ ಧರ್ಮವನ್ನು ಮೀರಿಸುವಂತಹ ಜಾತ್ಯಾತೀತ ರಾಜಧರ್ಮವೊಂದು ಹುಟ್ಟಿಕೊಂಡಿದೆ. ಈ ಧರ್ಮದ ನಾಶ ಖಂಡಿತಾ ಸಾಧ್ಯವಿಲ್ಲ. ಸ್ವಾರ್ಥದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಈ ಧರ್ಮ ತನ್ನದೇ ಸಿದ್ಧಾಂತಗಳನ್ನು ರೂಪಿಸಿ ಬಡವರ, ಶೋಷಿತರ, ನಿರ್ಲಕ್ಷಿತರ ಉದ್ಧಾರವೇ ನಮ್ಮ ಮುಖ್ಯ ಆದ್ಯತೆಯೆಂದು ಹೇಳುತ್ತಾ ಅವರನ್ನು ಮತ್ತಷ್ಟು ನೋವಿನ ಕಡಲಿಗೆ ದೂಕುತ್ತಿದೆ. ಉಳ್ಳವರ, ಬಲಿತವರ, ಆಸಕ್ತಿಗಳನ್ನು ಕಾಯಲು ಇಂತಹ ಒಂದೊಂದು ಧರ್ಮ ಉದಯಿಸುತ್ತಲೇ ಇರುತ್ತದೆ. ಧ್ವನಿಯಿಲ್ಲದವರು ಆ ಧರ್ಮದ ಅನುಯಾಯಿಗಳಾಗಿ/ಅನುನಾಯಿಗಳಾಗಿ ಬದುಕಲೇ ಬೇಕಾಗಿದೆ. ಶೋಷಿತರ, ಧಮನಿತರ, ನಿರ್ಲಕ್ಷೆಗೆ ಒಳಗಾದವರ ಉದ್ಧಾರ ಎಂದು. ಇದು ಸಾಧ್ಯವಾಗದ ಮಾತಲ್ಲವೆ.

ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಮೈತ್ರೇಯಿಗೆ ಹೇಳುವ ಮಾತುಗಳು ತುಂಬಾ ಮಾರ್ಮಿಕವಾಗಿವೆ. ಈ ಸಮಾಜದ ವ್ಯವಸ್ಥೆ ಸಮತೋಲನದಲ್ಲಿ ನಡೆಯಬೇಕಾದರೆ ಎರಡು ವರ್ಗ ಇರಲೇಬೇಕೆಂಬುದನ್ನು ಇದು ಪ್ರತಿಪಾದಿಸುತ್ತದೆ. ತುಳಿಯುವವರು ತುಳಿತಕ್ಕೆ ಒಳಗಾದವರು, ನಿರ್ಲಕ್ಷಿಸುವವರು– ನಿರ್ಲಕ್ಷೆಗೆ ಒಳಗಾದವರು. ದುಡಿಯುವವರು– ಅನುಭವಿಸುವವರು, ಹೀಗೆ ಸಾಗುತ್ತದೆ ಸಮಾಜ ವ್ಯವಸ್ಥೆಯ ಏಣಿಶ್ರೇಣಿ ಕ್ರಮ. ಯಾಜ್ಞವಲ್ಕ್ಯನ ಮಾತುಗಳನ್ನೇ ಇಲ್ಲಿ ಗಮನಿಸೋಣ,

"ಎಲ್ಲಿ ಭೇದ ಭಾವ ಇರುತ್ತದೋ ಅಲ್ಲಿ ಒಂದು ಇನ್ನೊಂದನ್ನು ನೋಡುತ್ತದೆ, ಒಂದು ಇನ್ನೊಂದನ್ನು ಕೇಳುತ್ತದೆ, ಒಂದು ಇನ್ನೊಂದರೊಡನೆ ಮಾತನಾಡುತ್ತದೆ, ಒಂದು ಇನ್ನೊಂದನ್ನು ಅರ್ಥಮಾಡಿಕೊಳ್ಳುತ್ತದೆ. ಯಾವಾಗ ಎಲ್ಲವೂ ಒಂದೇ ಆಗುತ್ತದೋ ಆಗ ಯಾವುದು ಏನನ್ನು ಎಲ್ಲಿಂದ ನೋಡುತ್ತದೆ? ಯಾವುದು ಏನನ್ನು ಎಲ್ಲಿಂದ ಕೇಳುತ್ತದೆ? ಯಾವುದು ಯಾವುದರೊಡನೆ ಎಲ್ಲಿಂದ ಮಾತನಾಡುತ್ತದೆ? ಯಾವುದು ಏನನ್ನು ಎಲ್ಲಿಂದ ಅರ್ಥಮಾಡಿಕೊಳ್ಳುತ್ತಿದೆ? ಅರ್ಥಮಾಡಿಕೊಳ್ಳುವುದು ಯಾವುದು? ಅರ್ಥ ಮಾಡಿಕೊಳ್ಳುವುದು ಏನನ್ನು?[೬]

ಅಂದರೆ ಈಗಿರುವ ಸ್ಥಿತಿಯೇ ಮುಂದುವರಿಯಬೇಕೆಂಬುದೇ ಈ ಉಪನಿಷತ್‌ನ ಆಶಯ. ಇಂತಹ ಉಪನಿಷತ್‌ಗಳು, ವೇದಗಳು, ಪುರಾಣಗಳು, ಮಹಾಕಾವ್ಯಗಳು ಏಕೆ ಹುಟ್ಟಿಕೊಂಡವು, ಹೇಗೆ ಹುಟ್ಟಿಕೊಂಡವು ಎಂಬುದನ್ನು ನಾವು ಗಮನಿಸಿದರೆ ಈ ಸಮಾಜದಲ್ಲಿರಬಹುದಾದ ನಿರ್ಲಕ್ಷಿತ ಸಮುದಾಯ/ಜಾತಿಗಳ ಸ್ಥಿತಿಗತಿಗೆ ಕಾರಣಗಳೇನು ಎಂಬುದನ್ನು ಗಮನಿಸಲು ಸಾಧ್ಯವಾಗಬಹುದು.

### ೨.೩ ಸಂಸ್ಕೃತಿ–ಉಪಸಂಸ್ಕೃತಿ–ನಿರ್ಲಕ್ಷೆ

ಸಂಸ್ಕೃತಿಯೆಂದರೆ ಪ್ರಸ್ತುತ ಸಂದರ್ಭದಲ್ಲಿ ನಾಗರೀಕತೆ ಎಂದೇ ನಿರ್ವಚಿಸಲಾಗುತ್ತದೆ. ಸಂಸ್ಕೃತಿಯೆಂದರೆ ನಾವು ಬದುಕುವ ಪರಿಸರದ, ಇತಿಹಾಸದ ಸ್ಮೃತಿಗಳೊಂದಿಗೆ ನಿರ್ದಿಷ್ಟಪಡಿಸಲಾದ

ರೀತಿಯಲ್ಲಿ ನಾಗರೀಕತೆ ಎಂದು ಕರೆಯಲ್ಪಡುವ ರೀತಿಯಲ್ಲಿ ಬದುಕುವುದೇ ಆಗಿದೆ. ಸ್ಥಾಪಿತ ಮೌಲ್ಯಗಳನ್ನು ಅನುಸರಿಸುವುದೇ ಸಂಸ್ಕೃತಿ. ವೇದ ಉಪನಿಷತ್, ಪುರಾಣ, ಮಹಾಕಾವ್ಯಗಳು ಕಟ್ಟಿಕೊಟ್ಟಿರುವ ಆದರ್ಶ ಸೂತ್ರಗಳೇನಿವೆ ಅದಕ್ಕೆ ಅನುಗುಣವಾಗಿ ಬದುಕುವುದೇ ಸಂಸ್ಕೃತಿ. ಅದೇ ಶ್ರೇಷ್ಠ ಸಂಸ್ಕೃತಿ.

ಸಂಸ್ಕೃತಿಯನ್ನು ಕುರಿತ ಕೆಲವು ವ್ಯಾಖ್ಯಾನಗಳನ್ನು ಇಲ್ಲಿ ಗಮನಿಸೋಣ. "ಸಮೂಹ ಮತ್ತು ಸಂಬಂಧಗಳ ಆಯಾಮದಲ್ಲಿ ಪ್ರಕಟಗೊಳ್ಳುವ ಸಾಮಾಜಿಕ ಸತ್ಯಗಳ ಮೊತ್ತವೆ ಸಮಾಜ, ಇದೇ ಮೊತ್ತದ ಕ್ರಿಯೆಯ ಆಯಾಮವೇ ಸಂಸ್ಕೃತಿ.[೭]

ಅಂದರೆ ಸಂಸ್ಕೃತಿ ಎಂಬುದು ಕ್ರಿಯೆಯೊಂದಿಗೆ ಸಂಬಂಧ ಹೊಂದಿದೆ. ಅದು ನಿಂತಂತೆ ಕಂಡರೂ ಚಲನಶೀಲವಾದದ್ದು. ಸಂಸ್ಕೃತಿ ಸಾಹಿತ್ಯ, ಕಲೆ, ಸಂಗೀತ, ನೀತಿ, ನಿಯಮ, ಸಿದ್ಧಾಂತಗಳ ಮೂಲಕ ಕಟ್ಟಿಕೊಟ್ಟಿರುವ ಮಾದರಿಗಳು ಸ್ಥಾಯಿಯಾದರೂ ಅದರ ಪರಿಣಾಮಗಳು ಚಲನಶೀಲವಾಗಿರುತ್ತವೆ. ಸಂಸ್ಕೃತಿಯ ಮೂಲ ಬೇರುಗಳಿಂದ ಕಳಚಿಕೊಂಡು ಮತ್ತೊಂದು ಹೊಸ ಸಂಸ್ಕೃತಿಯನ್ನು ಕಟ್ಟಿಕೊಳ್ಳುವುದು ಸಾಧ್ಯವೆ ಇಲ್ಲ ಎನ್ನುವಷ್ಟರಮಟ್ಟಿಗೆ ಅದು ಸ್ಥಿರವಾಗಿದೆ. ಹೊಸ ಸಂಸ್ಕೃತಿಯೆಂದು ಪರಿಭಾವಿಸಿ ಅದನ್ನು ರೂಪಿಸಿದರೆ ಅದರಲ್ಲೂ ಮೂಲ ಸಂಸ್ಕೃತಿಯ ಚಹರೆಗಳನ್ನು ಗುರುತಿಸುವ ಚಾಣಾಕ್ಷರೂ ಇದ್ದಾರೆ.

"ಸಂಸ್ಕೃತಿಯು ಏಕಕಾಲದಲ್ಲಿ ಸ್ಥಿರವೂ ಚಲನಶೀಲವೂ ಆಗಿರುತ್ತದೆ– ಹರ್‌ಸ್ಕೊವಿಟ್ಸ್. ಇದಲ್ಲದೆ ಆತ ಸಂಸ್ಕೃತಿಯ ಮುಖ್ಯ ವೈರುಧ್ಯಗಳನ್ನು ಕೆಳಕಂಡಂತೆ ಪಟ್ಟಿಮಾಡುತ್ತಾನೆ,

೧. Culture is universal in man's experience, yet each local or regional manifestation of it is unique.
೨. Culture is stable, yet is also dynamic and manifests continuous and constant change.
೩. Culture fills and largely determines the course of our lives, yet rarely intrudes into conscious thought.[೮]

ಬಹಳ ಸರಳವಾಗಿ ಮೂರು ವೈರುಧ್ಯಗಳನ್ನು ಇವರು ಪ್ರತಿಪಾದಿಸಿದ್ದಾರೆ. ಪ್ರಾದೇಶಿಕವಾದ ಅಂಶಗಳು ಇರಬೇಕು, ಸ್ಥಿರವೂ ಚಲನಶೀಲವೂ ಆಗಿರಬೇಕು ಹಾಗೆಯೆ ಬಹಳ ಮುಖ್ಯವಾದದ್ದು ಮನುಷ್ಯನ ಚಟುವಟಿಕೆಯನ್ನು ಉತ್ತೇಜಿಸುವಂತೆಯೂ ಇರಬೇಕು ಹಾಗೂ ಸದಾ ನಿಯಂತ್ರಿಸುತ್ತಿರಬೇಕು. ನಿಯಂತ್ರಣ ಎಂಬುದು ಒಂದು ಸಾರ್ವತ್ರಿಕ ಸತ್ಯ/ವಾಸ್ತವ, ಅಥವಾ ಸಮಾಜದ ಎಲ್ಲ ವರ್ಗಗಳ, ಜಾತಿಗಳ, ಸಮುದಾಯದ ಹಿತವನ್ನು ನಿರೀಕ್ಷಿಸುವಂತಹದ್ದಾಗಿದ್ದರೆ ಸರಿ, ಅಲ್ಲದೆ ಸ್ಥಾಪಿತ ಮೌಲ್ಯಗಳನ್ನು, ಸ್ಥಾಪಿಸಿ ಜ್ಞಾನವಲಯಗಳನ್ನು ಒತ್ತಾಯಪೂರ್ವಕವಾಗಿ ಹೇರುವ ಆ ಮೂಲಕ ಒಂದು ಸಮುದಾಯದ, ಸಂಸ್ಥೆಯ, ವ್ಯಕ್ತಿಯ, ಗುಂಪಿನ ಹಿತವನ್ನಷ್ಟೇ ಕಾಯುವಂತಿರಬಾರದು. ಸಂಸ್ಕೃತಿಯನ್ನು ರೂಪಿಸುತ್ತ ಹೋಗುವ ಮಾನವ,

ತನ್ನನ್ನು ತಾನೇ ರೂಪಿಸಿಕೊಳ್ಳುತ್ತಾನೆ ಎಂಬ ಶಂ.ಬಾ. ಜೋಶಿಯವರ ಮಾತಿನಲ್ಲಿ ಯಾವ ಸಂಸ್ಕೃತಿಯನ್ನು ಯಾರು ರೂಪಿಸುತ್ತಾರೆ ಎಂಬ ಸತ್ಯವನ್ನು ಹುಡುಕಬೇಕಾಗುತ್ತದೆ. ಸಂಸ್ಕೃತಿ ಎಂಬುದು ಒಂದೊ, ಎರಡೊ ಅಥವಾ ಹಲವು ಸಂಸ್ಕೃತಿಗಳಿವೆಯೋ ಇದು ಕೂಡ ಇಂದು ಚರ್ಚೆಗೆ ಒಳಗಾಗಬೇಕಾಗಿದೆ. ಸಂಸ್ಕೃತಿಯನ್ನು ನಾವು ಪ್ರೀತಿಯಿಂದ ಅಪ್ಪಿಕೊಂಡಿದ್ದೇವೆಯೋ, ಅಥವಾ ಅದು ಹೇರಿಕೆಯಾಗಿದೆಯೋ. ನಮ್ಮ ಸಂಸ್ಕೃತಿಯನ್ನು ಪ್ರಧಾನ ಸಂಸ್ಕೃತಿಯ ವ್ಯಾಪ್ತಿಯಲ್ಲಿ ಪರಿಗಣಿಸಲ್ಪಡುವುದೋ, ಅಥವಾ ನಮಗೆ ಅದರ ಬಗ್ಗೆ ಕೀಳರಿಮೆ ಬರುವಂತೆ ಸಂದರ್ಭಗಳನ್ನು ಸೃಷ್ಟಿಸಲಾಗಿದೆಯೋ– ಇವೆಲ್ಲಾ ಚರ್ಚೆಗೆ ಒಳಗಾಗಬೇಕಾದ ಸಂಗತಿ. ಸಂಸ್ಕೃತಿಯ ಬಗ್ಗೆ ಚರ್ಚೆ ನಡೆಯುತ್ತಿದ್ದ ವಿಚಾರಗೋಷ್ಠಿಯ ಒಂದು ಪ್ರಸಂಗವನ್ನು ಇಲ್ಲಿ ಉಲ್ಲೇಖಿಸಬಯಸುತ್ತೇನೆ. ಸಭಿಕರಲ್ಲಿದ್ದ ಒಬ್ಬ ವಿದ್ವಾಂಸರು ಮಾಂಸ ಭಕ್ಷಣೆಯನ್ನು ಸಾರ್ವತ್ರೀಕರಣಗೊಳಿಸುತ್ತಿರುವುದು ಸ್ಥಾಪಿತ ಮೌಲ್ಯಕ್ಕೆ ವಿರುದ್ಧವಾದುದಲ್ಲವೆ ಎಂದು ಅಧ್ಯಕ್ಷರನ್ನು ಪ್ರಶ್ನಿಸಿದರು. ಅದಕ್ಕೆ ಅಧ್ಯಕ್ಷತೆ ವಹಿಸಿದ್ದ ಗೌರವಾನ್ವಿತರು ತಾವು ಪ್ರತಿಪಾದಿಸುವ ಮೌಲ್ಯ ಬಹುಸಂಖ್ಯಾತರದ್ದೋ ಅಥವಾ ಅಲ್ಪಸಂಖ್ಯಾತರದ್ದೋ ಎಂದು ಸಭಿಕ ವಿದ್ವಾಂಸರಿಗೆ ಮರುಪ್ರಶ್ನೆ ಹಾಕಿ ಅವರ ಬಾಯಿ ಮುಚ್ಚಿಸಿದರು. ಅಂದರೆ ನಮ್ಮನ್ನು ನಿಯಂತ್ರಿಸುತ್ತಿರುವ ಸ್ಥಾಪಿತ ಮೌಲ್ಯಗಳಾವುವು ಎಂಬುದರ ಅರಿವು ನಮಗಿರಬೇಕಾದ ಅಗತ್ಯತೆ ಇದೆ.

ಸಮಾಜಶಾಸ್ತ್ರದ ವೈಲ್ಡ್ ಪ್ರಕಾರ ಮನುಷ್ಯನೇ ಸಂಸ್ಕೃತಿಯ ಮೂಲ ನಿರ್ಮಾಪಕ–ನಿರ್ದೇಶಕ. ಮುಂದುವರಿದು ಆತ ಹೇಳುವಂತೆ 'ಮನುಷ್ಯನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತದೆಯೋ ಅಷ್ಟಷ್ಟು ಸಂಸ್ಕೃತಿಯ ವಿಕಾಸವಾಗುತ್ತದೆ. ಮನುಷ್ಯನ ದೈಹಿಕ ಹಾಗೂ ಬೌದ್ಧಿಕ ಶ್ರಮ ಬಳಕೆಯಾದಂತೆಲ್ಲ ಬದಲಾವಣೆಗಳು ಆಗುತ್ತವೆ; ಹೊಸ ವಿನ್ಯಾಸಗಳು ರೂಪುಗೊಳ್ಳುತ್ತವೆ. ಇಂಥ ಬೆಳವಣಿಗೆಯನ್ನನುಸರಿಸಿ ಸಂಸ್ಕೃತಿಯೂ ವಿಕಾಸವಾಗುತ್ತದೆ. ಈ ಚಲನಶೀಲ ಸ್ಥಿತಿಯ ಮೂಲ 'ಶ್ರಮ'ವಾಗಿದ್ದು, ಮನುಷ್ಯನು ಕೇಂದ್ರಸ್ಥಾನದಲ್ಲಿರುತ್ತಾನೆ.'

ಮನುಷ್ಯನ ದೈಹಿಕ ಹಾಗೂ ಬೌದ್ಧಿಕ ಶ್ರಮದಿಂದ ಬದಲಾವಣೆಗಳು ಆಗುತ್ತವೆ, ಆ ಮೂಲಕ ಸಂಸ್ಕೃತಿಯ ವಿಕಾಸವಾಗುತ್ತದೆ. ಆದರೆ ಅದನ್ನು ಒಟ್ಟು ಮಾನವನ ಸಂಸ್ಕೃತಿ ಎಂದು ಬಿಂಬಿಸುವುದು ಸರಿಯಲ್ಲ. ದೈಹಿಕ ಶ್ರಮದವರಿಗೆ ಅದರ ಅರಿವೇ ಇರುವುದಿಲ್ಲ. ಅವರ ಕೊಡುಗೆಯನ್ನು ಸ್ಮರಿಸುವಂತಹ ಸಂದರ್ಭಗಳೇ ಉದ್ಭವಿಸುವುದಿಲ್ಲ. ಅದು ಕೇವಲ ಉಳ್ಳವರ ಬಲ್ಲವರ ಸಂಸ್ಕೃತಿಯಾಗುತ್ತದೆ. ಶ್ರಮ ಯಾರದ್ದೊ ಫಲ ಯಾರದ್ದೊ ಎಂಬಂತಾಗುತ್ತದೆ. 'ಶ್ರಮ' ನಿರ್ಲಕ್ಷ್ಯೆಗೆ ಒಳಗಾದವರದಾಗಿದ್ದು, ಸಶಕ್ತ ಅದರ ಕೇಂದ್ರವಾಗುತ್ತಾನೆ. ಸೃಜನಶೀಲತೆ ಮೂಲವು ಅವನೇ, ಶ್ರಮವೂ ಅವನದೇ, ಆದರೆ ಸಂಸ್ಕೃತಿಯ ಹರಿಕಾರರು ಮಾತ್ರ ಅದರ ಫಲ ಉಂಡವರು. ಹಾಗಾಗಿ ಸಂಸ್ಕೃತಿ ಎಂದರೆ ಒಂದೋ ಅಥವಾ ಹಲವು ಸಂಸ್ಕೃತಿಗಳಿವೆಯೋ ಎಂಬುದನ್ನು ನಾವು ಸ್ಪಷ್ಟಪಡಿಸಿಕೊಳ್ಳುವತ್ತಾ ಸಾಗಿರುವುದು ಆಶಾದಾಯಕ ಸಂಗತಿ.

ಆದರೆ ಸಂಸ್ಕೃತಿಯ ನಿರ್ವಚನಗಳೆಲ್ಲವೂ ಮನುಷ್ಯ ಸಮಾಜ ಇರುವ ಕಡೆಯಲ್ಲೆಲ್ಲ ಸಂಸ್ಕೃತಿ ಇದ್ದೇ ಇರುತ್ತದೆ ಎಂದು ಸಾರುತ್ತವೆ. ಸದ್ಯ ಇರುವ ನಿರ್ವಚನಗಳ ಪ್ರಕಾರ ಮನುಷ್ಯ ಬಡವನೋ, ಶ್ರೀಮಂತನೋ, ಮೇಲ್ಜಾತಿಯವನೊ, ಕೆಳಜಾತಿಯವನೊ ಯಾವುದು ಇಲ್ಲಿ ಮುಖ್ಯವಲ್ಲ, ಮನುಷ್ಯನಿದ್ದಕಡೆ ಸಂಸ್ಕೃತಿ ಇರುತ್ತದೆ. ಸಂಸ್ಕೃತಿ ಎಂಬ ಪರಿಕಲ್ಪನೆಗೆ ಮೇಲುಸಂಸ್ಕೃತಿ, ಕೀಳು ಸಂಸ್ಕೃತಿ ಎಂಬ ತಾರತಮ್ಯವಿಲ್ಲ. ಹರ್ಸ್‌ಕೋವಿಟ್ಸ್ ಹೇಳುವಂತೆ ಜನರ ಜೀವನ ವಿಧಾನವೇ ಸಂಸ್ಕೃತಿ.[೧೦]

ಇಲ್ಲಿ ನಾವು ಬಹುಮುಖ್ಯವಾಗಿ ಗಮನಿಸಬೇಕಾದದ್ದು ಸಂಸ್ಕೃತಿಯೆಂಬುದು ಒಂದೇ. ಅದು ಮನುಷ್ಯ ಸಂಸ್ಕೃತಿ ಅದರಲ್ಲಿ ತಾರತಮ್ಯಕ್ಕೆ ಅವಕಾಶವಿಲ್ಲ ಎಂಬ ಅಂಶ. ಯಾವುದೋ ಒಂದು ಘಟ್ಟದಲ್ಲಿ ಇದು ಸಾಧ್ಯವಾಗಿದ್ದಿರಬಹುದು. ಈಗ ಈ ವಾದವನ್ನು ಒಪ್ಪಿಕೊಂಡರೇ ಅನೇಕ ವೈವಿಧ್ಯಮಯವಾದ ತಮ್ಮದೇ ಸಂಸ್ಕೃತಿಗಳಲ್ಲಿ ಬದುಕುತ್ತಿರವವರ ಸಂಸ್ಕೃತಿಗಳಿಗೆ ಬೆಲೆಯೇ ಇಲ್ಲದಂತಾಗುತ್ತದೆ. ಈ ಮಾತು ಸಂಸ್ಕೃತಿ ಚಲನಶೀಲವಾದದ್ದು ಎಂದು ಹೇಳಿದ ಹರ್ಸ್‌ಕೋವಿಟ್ಸ್‌ನ ಅಭಿಪ್ರಾಯಕ್ಕೆ ವಿರುದ್ಧವಾಗುತ್ತದೆ. ಪ್ರಧಾನ ನೆಲೆಯ ಸಂಸ್ಕೃತಿಯೇ ನಮ್ಮೆಲ್ಲರ ಸಂಸ್ಕೃತಿ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಸಾಮಾಜಿಕ, ಆರ್ಥಿಕ ಮತ್ತು ಅಧಿಕಾರದ ನೆಲೆಗಳನ್ನು ನಿಯಂತ್ರಿಸುವ ವಲಯಗಳು ರೂಪಿಸಿದ ಸಂಸ್ಕೃತಿ ಮಾತ್ರವೆ ಮುಖ್ಯ, ಅದೇ ಈ ದೇಶದ, ಜನರ ಸಂಸ್ಕೃತಿ ಎಂದು ಬಿಂಬಿಸುವ ಅಪಾಯವಿದೆ.

ಇಂತಹ ಸಂದಿಗ್ಧ ಸಂದರ್ಭದಲ್ಲಿ ಹುಟ್ಟಿಕೊಂಡದ್ದೆ ಉಪಸಂಸ್ಕೃತಿಯ ಪರಿಕಲ್ಪನೆ. ಹರ್ಸ್‌ಕೋವಿಟ್ಸ್ ಹೇಳುವಂತೆ ಈ ಸಂಸ್ಕೃತಿ ಪರಿಕಲ್ಪನೆಯಲ್ಲಿ ಸ್ಥಳೀಯ ಅಥವಾ ಪ್ರಾದೇಶಿಕ ಮುದ್ರೆ ಕಂಡುಬರುತ್ತದೆ. ಉಪಸಂಸ್ಕೃತಿಯು ರೂಪುಗೊಂಡಿದ್ದು ಒಂದು ಚಾರಿತ್ರಿಕ ಸಂಗತಿ ಎಂಬ ಬರಗೂರು ಅವರ ಅಭಿಪ್ರಾಯ ಉಲ್ಲೇಖಾರ್ಹ, "ಉಪಸಂಸ್ಕೃತಿ'ಯ ಪರಿಕಲ್ಪನೆ ಪ್ರಸ್ತುತವಾಗುವುದು ಈ ನೆಲೆಯಲ್ಲೇ ಎಂಬ ತಿಳುವಳಿಕೆ ನನ್ನದು. ಮನುಷ್ಯ ಸಂಸ್ಕೃತಿಯು ರೂಪುಗೊಳ್ಳುತ್ತಿರುವಾಗ ವಿವಿಧ ಕಾರಣಗಳಿಂದ ವಿಂಗಡಣೆಗೊಳಗಾದ ಮನುಷ್ಯ ಸಮಾಜ, ತನ್ನ ವಿಭಜಿತ ನೆಲೆಗಳಿಗೆ ಅನುಗುಣವಾಗಿ ವಿಭಿನ್ನ ಸಂಸ್ಕೃತಿಗಳನ್ನು ರೂಪಿಸಿಕೊಳ್ಳುತ್ತ ಬಂದದ್ದು ಒಂದು ಚಾರಿತ್ರಿಕ ಸಂಗತಿಯೇ ಆಗಿದೆ. ಮನುಷ್ಯ ಸಮಾಜದ ಬೆಳವಣಿಗೆಯ ಹಿಂದೆ ಒಂದು ನಿರ್ದಿಷ್ಟ ಚರಿತ್ರೆಯಿರುವುದರಿಂದ ಸಂಸ್ಕೃತಿಯ ಉಪವಿಭಾಗೀಕರಣಕ್ಕೂ ಒಂದು ಚರಿತ್ರೆಯಿದೆ."[೧೧]

ಒಂದು ದೇಶ ಅಧಿಕೃತವಾಗಿ ಬಿಂಬಿಸುವ ಪ್ರಧಾನ ಸಂಸ್ಕೃತಿಗಿಂತಲೂ ಭಿನ್ನವಾದ ವೈವಿಧ್ಯಮಯವಾದ ಅನೇಕ ಸಂಸ್ಕೃತಿಗಳು ನಿರ್ಲಕ್ಷ್ಯಗೆ ಒಳಗಾಗುತ್ತವೆ. ಯಾವುದರಿಂದ ನಿರ್ಲಕ್ಷ್ಯಗೆ ಒಳಗಾಗುತ್ತವೆ ಮತ್ತು ಹೇಗೆ ಎಂಬುದನ್ನು ಒಂದು ಉದಾಹರಣೆ ಸಹಿತ ಗಮನಿಸೋಣ. ಸಂಸ್ಕೃತಿಯನ್ನು ಬಿಂಬಿಸಲು ಸಾಹಿತ್ಯ, ಸಂಗೀತ, ದೇಶೀ ಜ್ಞಾನಗಳು ಪ್ರಧಾನ ಪಾತ್ರವಹಿಸುತ್ತವೆ. ದೂರದರ್ಶನದ ಯಾವುದೋ ಒಂದು ವಾಹಿನಿಯಲ್ಲಿ ಶಾಸ್ತ್ರೀಯ ಸಂಗೀತ, ಭರತನಾಟ್ಯಕ್ಕೆ ಸಿಗುವ ಪ್ರಾಧಾನ್ಯತೆ, ಜನಪದ ಹಾಡುಗಾರಿಕೆಗೆ, ಜನಪದ ಅಥವಾ ಬುಡಕಟ್ಟು ಕುಣಿತಕ್ಕೆ ದೊರೆಯುವುದಿಲ್ಲ. ಏಕೆಂದರೆ ಅವು ಪ್ರಧಾನ

ಸಂಸ್ಕೃತಿಯ ಅಂಗಗಳಲ್ಲ. ಅವು ಶ್ರೇಷ್ಠ ದರ್ಜೆಯ ಪ್ರದರ್ಶನಗಳು ಎಂದು ಈವರೆಗೆ ಪರಿಗಣಿತವಾಗಿಲ್ಲ. ಬುಡಕಟ್ಟು ಹಾಗೂ ಜನಪದರ ಅನೇಕ ಜ್ಞಾನಗಳು, ಬದುಕಿನ ಶೈಲಿ, ರೀತಿ-ನೀತಿಗಳು ಆಧುನಿಕ ಸಮಾಜಕ್ಕೂ ಮಾರ್ಗದರ್ಶಿಯಾಗಿವೆ. ಜೀವನ ಮೌಲ್ಯವನ್ನೇ ಕಳೆದುಕೊಂಡು ಕೇವಲ ಮಟೀರಿಯಲ್ ಜಗತ್ತೇ ನಿಜವಾದ ಜಗತ್ತು ಎಂದು ಭ್ರಮಿಸಿರುವ, ಅದೇ ನಮ್ಮ ನಾಗರೀಕತೆ ಎಂದು ಬಿಂಬಿಸಲ್ಪಡುತ್ತಿರುವ ಸಂಸ್ಕೃತಿಯ ಎದುರು ಇವು ಪೇಲವವಾಗುತ್ತಿವೆ. ಸಾಂಪ್ರದಾಯಿಕ ಜ್ಞಾನಗಳು ಅನುಭವ ಜನ್ಯವಾದ್ದರಿಂದ ಪ್ರಯೋಗಾಲಯದಲ್ಲಿ ಸಾಬೀತುಪಡಿಸಲು, ವೈಜ್ಞಾನಿಕವಾಗಿ ಮಂಡಿಸಲು ಜನಪದರು ವಿಫಲರಾಗಿದ್ದಾರೆ. ಆಯುರ್ವೇದ ಪಂಡಿತರೊಬ್ಬರು ತಿಳಿಸಿದ ಔಷಧಿಯೊಂದನ್ನು ಆಧುನಿಕ ಔಷಧಿ ವ್ಯಾಪಾರಿಯಲ್ಲಿ ಕೇಳಿದಾಗ ಅದರ ಬೆಲೆಯನ್ನು ಕಡಿಮೆ ಎಂದು ಹೇಳುತ್ತಾ ಇದನ್ನು ಹಳ್ಳಿ ಜನರು ಮಾತ್ರ ಕೇಳುತ್ತಾರೆ ಮೇಡಮ್ ಎಂದದ್ದು ನಮ್ಮ ದೇಶೀ ಜ್ಞಾನ ಎಷ್ಟು ನಿರ್ಲಕ್ಷೆಗೆ ಒಳಗಾಗಿದೆ ಎಂಬುದನ್ನು ಬಿಂಬಿಸುತ್ತದೆ.

ಉಪಸಂಸ್ಕೃತಿ ಎಂಬ ಹಣೆಪಟ್ಟಿಯಲ್ಲಿ ನಮ್ಮ ತನವನ್ನು ಎತ್ತಿಹಿಡಿಯುವ ನಿಟ್ಟಿನಲ್ಲಿ ಆಗುತ್ತಿರುವ ಪ್ರಯತ್ನ ಶ್ಲಾಘನೀಯವೇ. ಆದರೂ ಅಧಿಕಾರದ, ಪ್ರಬಲರ ಕಪಿಮುಷ್ಠಿಯಲ್ಲಿರುವ ಬಿಂಬಿತ ಸಂಸ್ಕೃತಿಯ ಎದುರು ಸಮನಾಗಿ ನಿಲ್ಲುವುದು ಸವಾಲಿನ ಕೆಲಸವೇ ಸರಿ. ಆದರೂ ನಮ್ಮದೇ ಸಂಸ್ಕೃತಿ ಎಂಬ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಮಾಡಬೇಕಾದ ಪ್ರಯತ್ನ ತುಂಬಾ ಅಗತ್ಯ. ಎಷ್ಟೇ ಆದರೂ ಪ್ರಧಾನ ಸಂಸ್ಕೃತಿಯೆಂದು ಕರೆಯಲ್ಪಡುವ ಸಂಸ್ಕೃತಿಯಿಂದ ನಿರ್ಲಕ್ಷೆಗೆ ಒಳಗಾಗುತ್ತಲೇ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾಗಿದೆ, ಉಳಿಸಿಕೊಳ್ಳಬೇಕಾಗಿದೆ. ಸದ್ಯ ಈಗಲಾದರೂ ನಾವು ನಿರ್ಲಕ್ಷೆಗೆ ಒಳಗಾಗಿದ್ದೇವೆ ಎಂಬ ಅರಿವು ನಮ್ಮಲ್ಲಿ ಮೂಡಿದೆ.

**೨.೪ ಸಾಮಾಜಿಕತೆ ಮತ್ತು ಆರ್ಥಿಕತೆಯ ಸಂದರ್ಭಗಳಲ್ಲಿ ನಿರ್ಲಕ್ಷತೆ**

ಸಾಮಾಜಿಕತೆ ಮತ್ತು ಆರ್ಥಿಕತೆಯ ಸಂದರ್ಭಗಳಲ್ಲಿ ಹೇಗೆ ಮಹಿಳೆ ನಿರ್ಲಕ್ಷ್ಯಕ್ಕೆ ಒಳಗಾಗುತ್ತಾಳೆ ಎಂಬುದನ್ನು ಇಲ್ಲಿ ಗಮನಿಸಲಾಗಿದೆ. ಈ ಅಧ್ಯಯನ ಶಿಸ್ತುಗಳಲ್ಲಿ ನಿರ್ದಿಷ್ಟವಾಗಿ ನಿರ್ಲಕ್ಷ ಎಂಬುದಕ್ಕೆ ವ್ಯಾಖ್ಯಾನಗಳು ಲಭ್ಯವಿಲ್ಲದೇ ಇರುವುದರಿಂದ ವಿವಿಧ ನೆಲೆಗಳಲ್ಲಿ ಯಾವ್ಯಾವ ಕಾರಣಗಳಿಗಾಗಿ ಸ್ತ್ರೀ ನಿರ್ಲಕ್ಷೆಗೆ ಒಳಗಾಗಿದ್ದಾಳೆ ಎಂಬುದನ್ನು ಮಹಿಳಾ ಅಧ್ಯಯನ ಕುರಿತು ಕೆಲಸ ಮಾಡಿರುವ ಶ್ರೀ ಒಡೆಯರ್ ಡಿ ಹೆಗಡೆ ಹಾಗೂ ಎನ್. ಅನ್ನಪೂರ್ಣೇಶ್ವರಿ ಅವರ ಮಾತುಗಳಲ್ಲೇ ಉಲ್ಲೇಖಿಸಲಾಗಿದೆ. ಮಹಿಳೆಯ ಶೋಷಣೆ, ಮಹಿಳಾ ದಮನ, ಮಹಿಳೆ ವಿರುದ್ಧದ ತಾರತಮ್ಯಗಳು, ಮಹಿಳೆಯ ಅಧೀನತೆ ಮತ್ತು ಪರಾವಲಂಬಿತನ, ನಿರಾಕರಣೆಗಳು, ಮಹಿಳಾ ಪ್ರತ್ಯೇಕತೆ, ಮಹಿಳಾ ಸಬಲೀಕರಣ, ಮಾತೃಪ್ರಧಾನ ಕುಟುಂಬ ವ್ಯವಸ್ಥೆ, ಲಿಂಗ ಅಸಮಾನತೆ, ಭ್ರೂಣಾವಸ್ಥೆ, ಸ್ತ್ರೀ ಸಮಾನತೆ, ವಿಶೇಷ ಅವಕಾಶ ಅಸಮಾನತೆ, ಮಾಲೀಕತ್ವ ಅಸಮಾನತೆ, ವೃತ್ತಿಪರ ಅಸಮಾನತೆ, ಜನಾಂಗ ಮತ್ತು ಲಿಂಗ ಪರಿಣಾಮಗಳು ಹೀಗೆ ವಿವಿಧ ಆಯಾಮಗಳಲ್ಲಿ ಸ್ತ್ರೀಯರು

ನಿರ್ಲಕ್ಷ್ಯಗೆ ಒಳಗಾಗಲು ಇರಬಹುದಾದ ಕಾರಣಗಳನ್ನು ವಿಶ್ಲೇಷಿಸಲಾಗಿದೆ. ಇಂತಹ ಸ್ಥಾಪಿತ ಸಿದ್ಧಾಂತ, ಮಾದರಿಗಳಿಂದಾಗಿಯೇ ಸ್ತ್ರೀಯರು ನಿರ್ಲಕ್ಷ್ಯಗೆ ಒಳಗಾಗಲು, ಅಧೀನ ಸ್ಥಿತಿಗೆ ತಲುಪಲು ಕಾರಣಗಳಾಗಿವೆ ಎಂಬುದನ್ನು ಗಮನಿಸಲಾಗಿದೆ.

ಇವೆಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ನಿಜವಾಗಿ ನಾವು ಪಿತೃಪ್ರಧಾನತೆಯಿಲ್ಲದ ಸಮಾಜವನ್ನು ನಿರ್ಮಿಸಲು ಸಾಧ್ಯವೇ? ಅಂತಹ ಸಮಾಜದಲ್ಲಿ ಸ್ತ್ರೀ ಸಮಾನತೆಯನ್ನು ನಿರೀಕ್ಷಿಸಲು ಸಾಧ್ಯವೆ. ಪಿತೃ, ಮಾತೃ ಪ್ರಧಾನ ಎಂಬ ಪರಿಕಲ್ಪನೆಯಿಂದ ಹೊರಬಂದು ಮನುಷ್ಯರಾಗಿ ಬದುಕಲು ಸಾಧ್ಯವೆ. ಇದು ಕೇವಲ ಕಲ್ಪನೆಯಾಗಿ ಉಳಿಯುತ್ತದೆಯೇ. ಈ ನಿಟ್ಟಿನಲ್ಲಿ ನಡೆಯುತ್ತಿರುವ ಸಂಶೋಧನೆಗಳು, ಅಧ್ಯಯನಗಳು, ಚಳುವಳಿ, ಹೋರಾಟಗಳು ಪರಿವರ್ತನೆಯ ಕನಸನ್ನು ಪ್ರಾಮಾಣಿಕವಾಗಿ ಸಾಕಾರಗೊಳಿಸಬೇಕಾದ ಅಗತ್ಯತೆ ಇಂದಿದೆ.

## ೨.೫ ಮಹಿಳಾ ಶೋಷಣೆ- ನಿರ್ಲಕ್ಷ್ಯ

ಶೋಷಣೆ ಎಂದರೆ ಒಬ್ಬ ವ್ಯಕ್ತಿಯ ಅಥವಾ ವ್ಯಕ್ತಿಗಳ ಗುಂಪು ಅಥವಾ ಸಂಸ್ಥೆಯೊಂದು ಇನ್ನೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ಗುಂಪನ್ನು ಆರ್ಥಿಕವಾಗಿ ಮತ್ತು ಆರ್ಥಿಕೇತರವಾಗಿ ನಿರ್ವಿಣ್ಣಗೊಳಿಸುವುದೆಂದರ್ಥ. ಈ ಸೂತ್ರವನ್ನು ಗಂಡು ಹೆಣ್ಣನ್ನು ನಿರ್ವಿಣ್ಣಗೊಳಿಸುವ ಕಾರ್ಯಕ್ಕೂ ಅನ್ವಯಿಸಬಹುದು. ಅದೇ ಶೋಷಣೆ ಆಗುವುದು. ಮಹಿಳೆಗೆ ಆಸ್ತಿ ಹಕ್ಕು, ಉದ್ಯೋಗ, ಶಿಕ್ಷಣ, ಪರಮಾಧಿಕಾರದಲ್ಲಿ ಸಮಾನ ಅವಕಾಶಗಳನ್ನು ಪುರುಷ, ಪುರುಷ ಕೇಂದ್ರಿತ ಸಂಸ್ಥೆಗಳು ನಿರಾಕರಿಸುವುದೇ ಮಹಿಳಾ ಶೋಷಣೆಯಾಗುತ್ತದೆ.[೧೨]

## ೨.೬ ಮಹಿಳಾ ದಮನ- ನಿರ್ಲಕ್ಷ್ಯ

ಮಹಿಳೆಯನ್ನು ಪುರುಷರು ತಮಗೆ ಸರಿಸಮಾನ ವ್ಯಕ್ತಿಯೆಂದು ಪರಿಭಾವಿಸದೆಯೇ ಆಕೆಯನ್ನು ಕುಟುಂಬದೊಳಗೆ ಮತ್ತು ಕುಟುಂಬದ ಹೊರಗೆ ನಿಕೃಷ್ಟ ಸ್ಥಿತಿಯಲ್ಲಿ ವಿವಿಧ ರೀತಿಗಳಲ್ಲಿ ಅದುಮಿಟ್ಟಿರುವುದೇ ಮಹಿಳಾ ದಮನ. ಉದಾ: ಕುಟುಂಬದ ಎಲ್ಲಾ ವಿಷಯಗಳನ್ನೂ ಪುರುಷನೇ ತೀರ್ಮಾನಿಸುವುದು; ಮಹಿಳೆಗೆ ನೇರವಾಗಿ ಸಂಬಂಧಿಸಿದ ವಿಷಯಗಳನ್ನೂ, ಉದಾ: ವಿವಾಹ, ಶಿಕ್ಷಣ, ಮಕ್ಕಳ ಒಲವು, ಗರ್ಭಧಾರಣೆ ಸಮಯ, ಆಸ್ತಿ, ಹಕ್ಕು ಎಲ್ಲವನ್ನೂ ಪುರುಷನೇ ತೀರ್ಮಾನಿಸುವುದು. ಇಂಥ ಸಂದರ್ಭಗಳಲ್ಲೆಲ್ಲಾ ಪುರುಷನು ಮಹಿಳೆ ಕುರಿತು ತೆಗೆದುಕೊಳ್ಳುವ ತೀರ್ಮಾನಗಳು ಮಹಿಳಾ ಹಿತಾಸಕ್ತಿಗಳಿಗನುಗುಣವಾಗಿ ಇರಬೇಕೆಂದೇನೂ ಇಲ್ಲ; ಹಾಗೂ ಪುರುಷನ ತೀರ್ಮಾನಗಳು ವಾಸ್ತವದಲ್ಲಿ ಮಹಿಳಾ ಪರವಾಗಿರುವುದಿಲ್ಲ. ಇದಕ್ಕೆ ಮಹಿಳೆ ಕುರಿತು ಪುರುಷನಲ್ಲಿರುವ ಪೂರ್ವಾಗ್ರಹಗಳೇ ಕಾರಣವಾಗುವುವು. ಮಹಿಳೆಯ ದಮನದಿಂದ ಆಕೆಯ ಶೋಷಣೆಗೆ ಪುರುಷನ ಅವಕಾಶಗಳನ್ನು ಕಲ್ಪಿಸಿಕೊಳ್ಳುವನು.[೧೩]

### ೨.೭ ಮಹಿಳೆ ವಿರುದ್ಧದ ತಾರತಮ್ಯಗಳು- ನಿರ್ಲಕ್ಷೆ

ಮಹಿಳೆ ವಿರುದ್ಧದ ತಾರತಮ್ಯಗಳೆಂದರೆ ಪುರುಷನಿಗೆ ಹೋಲಿಸಿದಂತೆ ಮಹಿಳೆಗೆ ಕಡಿಮೆ ಅಥವಾ ಅಸಮಾನ ಅವಕಾಶಗಳ ನೀಡಿಕೆ ಎಂದರ್ಥ. ಮಹಿಳೆ ವಿರುದ್ಧ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ನೈತಿಕ, ಸಾಮಾಜಿಕ ತಾರತಮ್ಯಗಳನ್ನು ಪಿತೃಪ್ರಧಾನ ಸಾಮಾಜಿಕ ವ್ಯವಸ್ಥೆ ಸಾಮಾಜೀಕರಣ ಮಾಡಿದೆ; ಅದು ತಾರತಮ್ಯಗಳನ್ನು ಮಹಿಳೆ ವಿರುದ್ಧ ಸಾಂಸ್ಥೀಕರಣಗೊಳಿಸಿದೆ. ಕಾರ್ಮಿಕ ಪೇಟೆ ತಾರತಮ್ಯಗಳು (ಮಹಿಳೆಗೆ ಪುರುಷನಿಗಿಂತ ಕಡಿಮೆ ಕೂಲಿ, ಕಡಿಮೆ ಉದ್ಯೋಗ ಭದ್ರತೆ, ಕೆಳಹಂತದ ನೌಕರಿ ನೀಡಿಕೆ) ಮಹಿಳೆಯನ್ನು ರಾಜಕೀಯ ಪರಮಾಧಿಕಾರ/ಮತದಾನದಿಂದ ದೂರವಿರಿಸುವುದು; ಮಹಿಳೆಯ ಪಾತ್ರವನ್ನು ಗೃಹಕೃತ್ಯಗಳಿಗೆ ಮೀಸಲಿರಿಸುವುದು; ನೈತಿಕವಾಗಿ ಶೀಲದ ಪಾವಿತ್ರ್ಯವನ್ನು ಮಹಿಳೆಗೆ ಆರೋಪಿಸುವುದು ಎಲ್ಲವೂ ಮಹಿಳೆ ವಿರುದ್ಧ ಪುರುಷ ಸಮಾಜ ಅನುಸರಿಸುತ್ತಿರುವ ತಾರತಮ್ಯಗಳೇ ಆಗಿವೆ. ಮಹಿಳೆ ಪುರುಷನಿಗಿಂತ ಕೀಳು ಜೀವಿ (Second Sex) ಎನ್ನುವ ಭಾವನೆಯೇ ಮಹಿಳಾ ತಾರತಮ್ಯಗಳ ಹುಟ್ಟಿನ ಮೂಲವಾಗಿದೆ. ಮಹಿಳೆ ವಿರುದ್ಧದ ತಾರತಮ್ಯಗಳಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಪಿತೃಪ್ರಧಾನ ವ್ಯವಸ್ಥೆಯ ಆಕ್ರಮಣಕಾರಿ ಕಾರ್ಯಾಚರಣೆಯು ಮಹಿಳೆ ವಿರುದ್ಧ ತಾರತಮ್ಯಗಳು ಸಾಮಾಜೀಕರಣಗೊಂಡು, ಸಾಂಸ್ಥೀಕರಣಗೊಳ್ಳಲು ಕಾರಣವಾಗಿದೆ.[೧೪] .

### ೨.೮ ಮಹಿಳೆಯ ಅಧೀನತೆ ಮತ್ತು ಪರಾವಲಂಬಿತನ-ನಿರ್ಲಕ್ಷೆ

ಮಹಿಳೆಯ ಅಧೀನತೆ ಮತ್ತು ಪರಾವಲಂಬಿತನಕ್ಕೆ ಮುಖ್ಯ ಕಾರಣಗಳಿವೆ. ಅಧೀನತೆ ಎಂದರೆ ಒಬ್ಬ ವ್ಯಕ್ತಿಯನ್ನು ಇನ್ನೊಬ್ಬ ವ್ಯಕ್ತಿಯನ್ನು ಅಸಹಾಯಕನ(ಳ)ನ್ನಾಗಿಸಿ ಕ್ರಮೇಣ ನಿಯಂತ್ರಣ ಮತ್ತು ಮಾಲೀಕತ್ವ ಸಾಧಿಸುವುದೆಂದರ್ಥ. ಮಹಿಳೆಗೆ ಆರ್ಥಿಕ ಹಕ್ಕುಗಳನ್ನು ನಿರಾಕರಿಸಿ, ಗೃಹಕೃತ್ಯಗಳಿಗೆ ಆಕೆಯ ಪಾತ್ರವನ್ನು ಸೀಮಿತಗೊಳಿಸಿ ಧರ್ಮ ಮತ್ತು ಸಾಂಸ್ಕೃತಿಕ ಆಚರಣೆಗಳ ಮೂಲಕ ಮಹಿಳೆ ಮೇಲೆ ಪುರುಷನು ನಿಯಂತ್ರಣ ಸಾಧಿಸುವುದು. ಇದು ಪುರುಷನು ಮಹಿಳೆಯನ್ನು ಅಧೀನಗೊಳಿಸುವುದಾಗಿದೆ. ಸಂಬಂಧಿತ ಅಧೀನ ವ್ಯಕ್ತಿ ತನ್ನ ನಿಯಂತ್ರಣಕಾರನ ಮೇಲೆ ತನ್ನ ಎಲ್ಲಾ ಅಗತ್ಯಗಳನ್ನು ಹುಟ್ಟುಹಾಕುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯನ್ನು ಸಂಪೂರ್ಣವಾಗಿ ಅಧೀನಗೊಳಿಸಿಕೊಂಡು, ಆಕೆಯನ್ನು ಪುರುಷಾವಲಂಬಿಯನ್ನಾಗಿಸುತ್ತದೆ.[೧೫]

### ೨.೯ ಹಕ್ಕುಗಳ ನಿರಾಕರಣೆಗಳು-ನಿರ್ಲಕ್ಷೆ

ನಿರಾಕರಣೆಗಳು, ತಾರತಮ್ಯಗಳ ಮುಂದುವರಿದ ಶೋಷಕ ಸಾಧನಗಳು ಅಥವಾ ಆಚರಣೆಗಳಾಗಿರುವುವು. ನಿರಾಕರಣೆಗಳು ಅಂತಿಮವಾಗಿ ಮಾನವ ಹಕ್ಕುಗಳ ನಿರಾಕರಣೆ ಅಥವಾ ರದ್ಧತಿ

ಆಗಿರುತ್ತದೆ. ನಿರ್ದಿಷ್ಟ ಬಗೆಯ ಸವಲತ್ತುಗಳ/ಸಂಪನ್ಮೂಲಗಳನ್ನು 'ಕೊಡದಿರುವುದು' ಮತ್ತು 'ಕಸಿದುಕೊಳ್ಳುವುದು' ಎರಡೂ ಕೂಡಾ ನಿರಾಕರಣೆಗಳಲ್ಲಿ ಪರ್ಯವಸಾನವಾಗುವುವು. ಪರಂಪರಾನುಗತವಾಗಿ ಎಲ್ಲಾ ಸಮಾಜಗಳಲ್ಲೂ ಮಹಿಳೆಗೆ ಎಲ್ಲ ಬಗೆಯ ಮಾನವ ಹಕ್ಕುಗಳನ್ನು ನಿರಾಕರಿಸಲಾಗಿದೆ ಅಥವಾ ಮಹಿಳೆಯರ ಮಾನವ ಹಕ್ಕುಗಳನ್ನು ಗಣನೀಯವಾಗಿ ಪುರುಷ ಸಮಾಜವು ತುಂಡರಿಸಿದೆ. ನಿರಾಕರಣೆಗಳು ಲಿಂಗ ಶೋಷಣೆಯನ್ನು ಮುಂದುವರಿಸುತ್ತವೆ.[೧೬]

## ೨.೧೦ ಬಡತನದ ಮಹಿಳಾಕರಣ-ನಿರ್ಲಕ್ಷೆ

ಮಹಿಳೆ ಮೇಲಿನ ಬಡತನದ ಗರಿಷ್ಠ ಭಾರವನ್ನು 'ಬಡತನದ ಮಹಿಳಾಕರಣ'ವೆಂದು ಕರೆಯಲಾಗುತ್ತಿದೆ. ಈ ಪದವನ್ನು ಪ್ರೊ. ಅಮರ್ತ್ಯ. ಕೆ. ಸೆನ್ ಮತ್ತು ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ ಸಂಸ್ಥೆ ಬಳಸುತ್ತಿರುವುದು ಉಂಟು. ಮಾನವಾಭಿವೃದ್ಧಿಯ ಲಿಂಗ ಆಯಾಮಗಳು ಅಧ್ಯಯನಗಳಲ್ಲಿ 'ಬಡತನದ ಮಹಿಳಾಕರಣ' ಪರಿಭಾವನೆಯನ್ನು ಬಳಸಲಾಗುತ್ತಿದೆ. ಸಾಮಾನ್ಯವಾಗಿ ಬಡತನದ ಗರಿಷ್ಠ ಮತ್ತು ಸಾಪೇಕ್ಷ ಭಾರವೆರಡೂ ಕೂಡಾ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಮೇಲೆ ಬೀಳುತ್ತವೆ. ಬಡತನದಿಂದಾಗಿ ಏರ್ಪಡುವ ಆಹಾರ ಹಂಬಲ ಅಸಮಾನತೆ, ಶಿಕ್ಷಣ ಮತ್ತು ಆರೋಗ್ಯ ಸೇವೆಗಳ ನಿರಾಕರಣೆ ಎಲ್ಲವೂ ಬಡತನ ಮಹಿಳಾಕರಣವೇ ಆಗಿವೆ. ಜಾಗತೀಕರಣ ಕ್ರಿಯೆಯು ವಿಕಾಸಶೀಲ ಅಲ್ಪಾದಾಯದ ಕೃಷಿ ಪ್ರಧಾನ ದೇಶಗಳಲ್ಲಿ ಮಹಿಳೆಯನ್ನು ಹೆಚ್ಚೆಚ್ಚು ನಿರುದ್ಯೋಗಿಯನ್ನಾಗಿಸುವ ಅಪಾಯವಿದೆ. ಹೀಗಾಗಿ ಜಾಗತೀಕರಣ ಮತ್ತು ಖಾಸಗೀಕರಣವು ಮಹಿಳಾ ಹಿತಾಸಕ್ತಿಗಳ ಮೇಲೆ ಪ್ರತಿಕೂಲ ಪರಿಣಾಮಗಳನ್ನು ಬೀರುವ ಮೂಲಕ ಬಡತನದ ಮಹಿಳಾಕರಣಕ್ಕೆ ಹೆಚ್ಚೆಚ್ಚು ಕಾರಣವಾಗುವುದೆಂದೂ ಇಂದು ವಾದಿಸಲಾಗುತ್ತಿದೆ. ಬಡತನದ ಮಹಿಳಾಕರಣವನ್ನು ಮಹಿಳೆಯರಿಗೆ ಆರೋಗ್ಯ ಮತ್ತು ಆಹಾರ ಸುರಕ್ಷೆಯನ್ನು ನಿರಾಕರಿಸುತ್ತದೆ. ಶಿಕ್ಷಣ ಮತ್ತು ಆರೋಗ್ಯ ಸೇವೆಗಳನ್ನು ಜಾಗತೀಕರಣ ದುಬಾರಿಗೊಳಿಸುವ ಮೂಲಕ ಅವುಗಳಿಂದ ಸಾಮಾನ್ಯವರ್ಗಗಳ ಮಹಿಳೆಯರ ಪ್ರವೇಶವನ್ನು ನಿರಾಕರಿಸುತ್ತದೆ. ಕೃಷಿಯ ಯಾಂತ್ರೀಕರಣದಿಂದ ಬಡದೇಶಗಳ ಮಹಿಳೆಯರು ಕೃಷಿ ಉದ್ಯೋಗಗಳನ್ನು ಕಳೆದುಕೊಂಡು ಬಡವರಾಗುತ್ತಾರೆ. ರಫ್ತು ಉದ್ಯಮಗಳನ್ನು ಸಣ್ಣ ಕೈಗಾರಿಕೆಗಳನ್ನು ಹೆಚ್ಚೆಚ್ಚು ಯಾಂತ್ರೀಕರಿಸುವುದರಿಂದ ಅವುಗಳನ್ನು ದುಡಿಯುವ ಮಹಿಳೆಯರ ಮೇಲೆ ಮೊದಲು ಉದ್ಯಮಪತಿಗಳ ಕೂಡಲಿಯೇಟು ಬೀಳುತ್ತದೆ. ಹೀಗೆ ನಗರ ಮಹಿಳಾ ಕಾರ್ಮಿಕರೂ ಅಸಂಘಟಿತ ಕೈಗಾರಿಕೆಗಳು ಮತ್ತು ಸಂಘಟಿತ ಉತ್ಪಾದಕರು ದಿವಾಳಿಯಾಗಬಹುದು. ಇಂಥ ಸಂದರ್ಭದಲ್ಲೂ ಮಹಿಳಾ ಕಾರ್ಮಿಕರು ಉದ್ಯೋಗವಂಚಿತರಾಗಿ ಬಡತನಕ್ಕೆ ಗುರಿಯಾಗುವರು. ಹೀಗೆ ಪ್ರತಿ ಹೊಸ ಹೊಸ ತಂತ್ರಜ್ಞಾನ/ಯಾಂತ್ರೀಕರಣವನ್ನು ಮಹಿಳೆ ವಿರುದ್ಧ, ದೈಹಿಕ

ಮಹಿಳಾ ಕಾರ್ಮಿಕರ ಹಿತಾಸಕ್ತಿಗಳ ವಿರುದ್ಧವೇ ಕಾರ್ಯಾಚರಿಸುತ್ತದೆ. ಹೀಗೆ ಬಡತನದ ಮಹಿಳಾಕರಣ ಅನೇಕ ಕಡೆಗಳಲ್ಲಿ ಏರ್ಪಡುತ್ತದೆ.[೧೭]

### ೨.೧೧ ಮಹಿಳಾ ಪ್ರತ್ಯೇಕಿಸುವಿಕೆ–ನಿರ್ಲಕ್ಷೆ

ಸಮಾಜ, ಆರ್ಥಿಕತೆ ಮತ್ತು ರಾಜಕೀಯ ವ್ಯವಸ್ಥೆಯಿಂದ ಮಹಿಳೆಯರನ್ನು ದೂರವಿರಿಸುವುದನ್ನು ಮಹಿಳಾ ಪ್ರತ್ಯೇಕಿಸುವಿಕೆ ಎನ್ನಲಾಗುತ್ತದೆ. ಮಹಿಳೆಯನ್ನು ಗೃಹಕೃತ್ಯಗಳಿಗೆ ಮೀಸಲಿರಿಸುವುದೆಂದರೆ ಅವರನ್ನು ಸಾಮಾಜಿಕ ಕ್ರಿಯೆಯ ಮುಖ್ಯ ವಾಹಿನಿಯಿಂದ ಬೇರ್ಪಡಿಸುವುದೆಂದರ್ಥ. ಮುಸ್ಲಿಮರ ಪರ್ಧಾ (Pardha) ಹಿಂದೂ ಹೆಂಗಸರು ಸೀರೆಯನ್ನು ಸೆರಗಿನಿಂದ ಮುಖ ಮುಚ್ಚಿ (ಮರೆ ಮಾಡುವುದು) ಗಂಡಸರ ಜತೆಗೆ ಸರಿಸಮಾನವಾಗಿ ವ್ಯವಹರಿಸದಿರುವುದು– ಎಲ್ಲವೂ ಮಹಿಳಾ ಪ್ರತ್ಯೇಕಿಸುವಿಕೆಯ ಆಚರಣೆಗಳೇ ಆಗಿವೆ. ಮಹಿಳೆ ಪ್ರತ್ಯೇಕಿಸುವಿಕೆಯು ಒಂದು ಆಚರಣೆಯಾಗಿ ಕುಟುಂಬದೊಳಗೂ ಮತ್ತು ಹೊರಗೂ ತಮ್ಮ ಕರಾಳ ಹಸ್ತಗಳನ್ನು ಚಾಚಿವೆ. ಹೀಗಾಗಿ ಮಹಿಳೆ ಶೋಷಣೆ, ಮಹಿಳೆ ವಿರುದ್ಧದ ತಾರತಮ್ಯಗಳು, ಮಹಿಳೆಯ ಅಧೀನತೆ ಹಾಗೂ ಪರಾವಲಂಬಿತನವು ನಿರಾತಂಕವಾಗಿ ಹಾಗೂ ನಿರಂತರವಾಗಿ ಮುಂದುವರಿದಿದೆ. ಹೆಣ್ಣಿನ ರಕ್ಷಣೆಯ ಕಾರಣ ಮುಂದೆ ಮಾಡಿ ಪ್ರಾಚೀನ ಸಮಾಜಗಳಲ್ಲಿ ರೂಢಿಗೆ ಬಂದ ಮಹಿಳಾ ಪ್ರತ್ಯೇಕಿಸುವಿಕೆ ಪ್ರಸ್ತುತದ ಆಧುನಿಕ ಸಮಾಜಗಳಲ್ಲೂ ಮುಂದುವರಿದಿದೆ. ಇದು ಮಹಿಳಾ ಸ್ವಾತಂತ್ರ್ಯಕ್ಕೆ ಮತ್ತು ಮಹಿಳಾ ಸಬಲೀಕರಣಕ್ಕೆ ಪ್ರಮುಖವಾದ ಅಡಚಣೆ ಆಗಿದೆ. ಮಹಿಳಾ ಪ್ರತ್ಯೇಕಿಸುವಿಕೆ ಆಚರಣೆಯು ಅನೇಕ ರೂಪಗಳಲ್ಲಿ ಸಾಮಾಜೀಕರಣಗೊಂಡಿದೆ ಮತ್ತು ಸಾಂಸ್ಥೀಕರಣಗೊಂಡಿದೆ. ಹೀಗಾಗಿ ಮಹಿಳೆ ವಿರುದ್ಧದ ಪೂರ್ವಾಗ್ರಹಗಳು ಪುರುಷರ ಚಿಂತನೆಗಳಲ್ಲಿ, ದೃಷ್ಟಿಕೋನಗಳಲ್ಲಿ, ನಡೆವಳಿಕೆಗಳಲ್ಲಿ ಪುರುಷರು ಕಟ್ಟುವ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂಸ್ಥೆಗಳಲ್ಲಿ ಆಳವಾಗಿ ಬೇರೂರಿವೆ. ಇವುಗಳ ವಿರುದ್ಧ ಮಹಿಳಾ ಹೋರಾಟ ನಡೆದಿದೆ, ನಡೆಯುತ್ತಿದೆ ಹಾಗೂ ನಿರಂತರ ನಡೆಯಬೇಕಿದೆ. ಮಹಿಳಾ ಪ್ರತ್ಯೇಕೀಕರಣವು ಸೃಜನಶೀಲತೆ, ದುಡಿಯುವ ಸಾಮರ್ಥ್ಯ, ನಾಯಕತ್ವದ ಗುಣ ತೀರ್ಮಾನಿಸುವಿಕೆ ಸಾಮರ್ಥ್ಯ ಎಲ್ಲವನ್ನೂ ಊನಗೊಳಿಸಿಬಿಡುತ್ತದೆ; ನಾಶಪಡಿಸುತ್ತದೆ. ಹೀಗಾಗಿ ಮಹಿಳಾ ಪ್ರತ್ಯೇಕೀಕರಣದ ವಿರುದ್ಧ ಪ್ರಸ್ತುತದ ಜಗತ್ತಿನ ಮಹಿಳೆಯರು ಹೋರಾಟ ಮಾಡಬೇಕಿದೆ.[೧೮]

### ೨.೧೨ ಮಹಿಳಾ ಸಬಲೀಕರಣ (ಶಕ್ತಿ ಸಂವರ್ಧನ)–ನಿರ್ಲಕ್ಷೆ

ಸಬಲೀಕರಣವೆಂದರೆ ಬಡವರ, ದೀನದಲಿತರ, ಪರಾವಲಂಬಿತರ ಶಕ್ತಿ ಸಂವರ್ಧನೆ ಎಂದರ್ಥ. ಮಹಿಳೆಯರೂ ಶೋಷಿತರಾಗಿರುವುದರಿಂದ ಅವರ ಸಬಲೀಕರಣ ಅಥವಾ ಶಕ್ತಿ ಸಂವರ್ಧನೆ ಕುರಿತು ಇಂದು ಜಗತ್ತಿನಾದ್ಯಂತ ಚರ್ಚೆ ನಡೆಯುತ್ತಿದೆ. ಮಹಿಳೆಯರು ಸಮಸ್ತ ಕ್ಷೇತ್ರಗಳಲ್ಲೂ ಪುರುಷರಿಗೆ

ಹೋಲಿಸಿದಂತೆ ಹಿಂದೆ ಬಿದ್ದಿದ್ದಾರೆ. ಹೀಗಾಗಿ ಮಹಿಳೆಯರನ್ನು ಸಮಾಜವೊಂದರ ದುರ್ಬಲ ವರ್ಗವೆಂದು ಕರೆಯಲಾಗುವುದು.

ಮಹಿಳಾ ಸಬಲೀಕರಣವು ಅಥವಾ ಶಕ್ತಿ ಸಂವರ್ಧನೆಯು ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಹಾಗೂ ನೆಲೆಗಳನ್ನು ಹೊಂದಿದೆ. ಈ ಎಲ್ಲಾ ಕ್ಷೇತ್ರಗಳಲ್ಲೂ ಮಹಿಳೆ ಪಾಲುಗೊಳ್ಳುವ ಮೂಲಕ ಪುರುಷನೊಂದಿಗೆ ಸಾಧನೆಗಳ ಮೂಲಕ ಸಮಾನತೆ ಹೊಂದಬೇಕು. ಇದು ಸಾಧ್ಯವಾಗಲು ಮೊತ್ತಮೊದಲಿಗೆ ಮಹಿಳೆಯು ಕುಟುಂಬದ ಹೊರಗಿನ ಕ್ರಿಯೆಗಳಲ್ಲಿ ಪಾಲುಗೊಳ್ಳುವಂತಾಗಬೇಕು. ಇದಕ್ಕಾಗಿ ಮಹಿಳೆ ಕುಟುಂಬವನ್ನು ತೊರೆಯಬೇಕಿಲ್ಲ. ಮಹಿಳೆ ಕುಟುಂಬ ಜೀವನದ ಜತೆಜತೆಗೆ ಕುಟುಂಬದ ಹೊರಗಿನ ರಾಜಕೀಯ-ಆರ್ಥಿಕ ಸಾಮಾಜಿಕ ಕ್ರಿಯೆಗಳಲ್ಲೂ ಪಾಲುಗೊಳ್ಳುವಂಥ ಪರಿಸರ ಇಂದು ಎಲ್ಲಾ ದೇಶಗಳಲ್ಲೂ ಸೃಷ್ಟಿಯಾಗಬೇಕಿದೆ. ಈ ದಿಸೆಯಲ್ಲಿ ವಿಶ್ವಸಂಸ್ಥೆ ನಡೆಸಿದ ಪ್ರಯತ್ನಗಳ ಫಲವಾಗಿ ಎಲಾ ದೇಶಗಳಲ್ಲೂ ಮಹಿಳಾ ಸಬಲೀಕರಣದ ಕುರಿತು ಅರಿವು ಮತ್ತು ಬದ್ಧತೆ ಮೂಡುತ್ತಿದೆ.[೧೯]

ಮಹಿಳಾ ಸಬಲೀಕರಣ ಕ್ರಿಯೆಯು ಕೆಳಕಂಡ ಆಯಾಮಗಳನ್ನು ಒಳಗೊಳ್ಳುತ್ತದೆ ಎನ್ನಲಾಗುವುದು.

೧. ಮಹಿಳಾ ಸ್ವಾತಂತ್ರ್ಯ ಮತ್ತು ಸಮಾನತೆ

೨. ಮಹಿಳೆಗೆ ಆರ್ಥಿಕ ಅವಕಾಶಗಳ ಸೃಷ್ಟಿ.

೩. ಶಿಕ್ಷಣ, ಆರೋಗ್ಯ, ಸುರಕ್ಷೆಗಳಿಗೆ ಮಹಿಳೆಯರ ಪ್ರವೇಶ

೪. ಮಹಿಳಾ ಸಬಲೀಕರಣಕ್ಕೆ ಅವಶ್ಯವಾದ ಕಾನೂನು ಮತ್ತು ಶಾಸನಾತ್ಮಕ ಚೌಕಟ್ಟನ್ನು ನಿರ್ಮಿಸುವುದು. ಈ ಶಾಸನಾತ್ಮಕ ಚೌಕಟ್ಟಿನಲ್ಲಿ ಮಹಿಳಾ ಶೋಷಣೆ, ಮಹಿಳಾದಮನ, ಮಹಿಳಾ ತಾರತಮ್ಯಗಳು ಮತ್ತು ನಿರಾಕರಣೆಗಳನ್ನು ಅಪರಾಧವೆಂದೂ ಮತ್ತು ಮಾನವ ಹಕ್ಕುಗಳ ಉಲ್ಲಂಘನೆ ಎಂದೂ ಪರಿಗಣಿಸಿ ದಂಡ ಮತ್ತು ಶಿಕ್ಷೆಯನ್ನು ಅಪರಾಧಿಗಳಿಗೆ ವಿಧಿಸುವುದು.

ಮಹಿಳಾ ಸಬಲೀಕರಣ ಕುರಿತ ಮೇಲ್ಕಂಡ ಮೊದಲ ಮೂರು ಅಂಶಗಳು ಮಹಿಳೆಯರ ಅಸಾಮರ್ಥ್ಯಗಳನ್ನು ತೊಡೆದುಹಾಕಲು, ಪುರುಷರಿಗೆ ಸರಿಸಮಾನವಾಗಿ ಮಹಿಳೆಯರು ಸಾಮರ್ಥ್ಯಗಳನ್ನು ರೂಢಿಸಿಕೊಳ್ಳುವುದನ್ನು ಮತ್ತು ಅವಕಾಶ ಹೊಂದುವುದನ್ನು ಪ್ರತಿಪಾದಿಸುತ್ತವೆ. ಮತ್ತೆ ನಾಲ್ಕನೆಯ ಅಂಶವು ಮಹಿಳಾ ಶೋಷಣೆಯನ್ನು, ತಾರತಮ್ಯಗಳನ್ನು ತಪ್ಪಿಸುವ, ಕಡಿಮೆಗೊಳಿಸುವ ಸಾಮಾಜಿಕ ಪರಿಸರ ನಿರ್ಮಿಸುವುದರಲ್ಲಿ ಶಾಸನಗಳ ಪಾತ್ರವನ್ನು ಕುರಿತು ಹೇಳುತ್ತದೆ.

ಮಹಿಳಾ ಸಬಲೀಕರಣ ಕ್ರಿಯೆಯಲ್ಲಿ ಸಮಾಜಕ್ಕೆ ಮತ್ತು ಸರ್ಕಾರಗಳಿಗೆ ಮಹತ್ವವಿದೆ, ಪಾತ್ರವಿದೆ. ಸಮಾಜ ಎಂದರೆ ಪುರುಷ ಮತ್ತು ಮಹಿಳೆ ಇಬ್ಬರೂ ಅವರು ಕಟ್ಟಿ ಬೆಳೆಸಿರುವ ಸಾಮಾಜಿಕ ಸಂಸ್ಥೆಗಳೂ- ಕುಟುಂಬ, ಧರ್ಮ, ಧಾರ್ಮಿಕ ಕೇಂದ್ರಗಳು- ಎಲ್ಲವೂ ಮಹಿಳಾ ಸಬಲೀಕರಣದಲ್ಲಿ ವಿಶ್ವಾಸ

ತಳೆಯಬೇಕಾಗಿರುವುದು ಇಂದಿನ ತುರ್ತು ಅಗತ್ಯವಾಗಿದೆ. ಇದಕ್ಕಾಗಿ ಸಮಾಜದ ಎಲ್ಲಾ ಜನರಲ್ಲೂ ಲಿಂಗ ಸ್ಪಂದನವನ್ನು (Gender Sensitisation) ಉಂಟುಮಾಡಬೇಕಿದೆ. ಈ ಮಾತು ಸರ್ಕಾರಕ್ಕೂ ಅನ್ವಯಿಸುತ್ತದೆ. ಸರ್ಕಾರದ ನಾಯಕರು ಮತ್ತು ನೌಕರಶಾಹಿ ಇವರಿಬ್ಬರನ್ನೂ ಲಿಂಗ ಸ್ಪಂದನ ಕ್ರಿಯೆಗೊಳಪಡಿಸಬೇಕಿದೆ. ಎರಡನೆಯ ಹಂತದಲ್ಲಿ ಮಹಿಳಾ ಸಬಲೀಕರಣಕ್ಕಾಗಿ ಅವಶ್ಯವಿರುವ ಆರ್ಥಿಕ ಬೆಳವಣಿಗೆ ಮತ್ತು ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೊಳಿಸಬೇಕು. ಇದಕ್ಕಾಗಿ ಅವಶ್ಯಕವಾದ ಹಣಕಾಸು ಸಂಪನ್ಮೂಲಗಳನ್ನು ಸರ್ಕಾರಗಳು ಬಜೆಟ್‌ಗಳಲ್ಲಿ ನಿಯಮಿತಗೊಳಿಸಿ ಬಿಡುಗಡೆಗೊಳಿಸಬೇಕು.[೨೦]

ಶಿಕ್ಷಣ, ಆಸ್ತಿ ಹಕ್ಕು, ಆರೋಗ್ಯ ಸೇವೆಗಳು, ಸಾಂಸ್ಥಿಕ ಸಾಲಕ್ಕೆ ಪ್ರವೇಶ ಕಲ್ಪಿಸುವುದು. ರಾಜಕೀಯ ಪ್ರಾತಿನಿಧ್ಯ ಕಲ್ಪಿಸುವಿಕೆಯು ಮಹಿಳಾ ಸಬಲೀಕರಣ/ಶಕ್ತಿ ಸಂವರ್ಧನೆಗಾಗಿ ಅವಶ್ಯಕವೆಂದು ೧೯೫೫ರ ಮಾನವಾಭಿವೃದ್ಧಿ ವರದಿ ಹೇಳುತ್ತದೆ. ವಿಶ್ವ ಬ್ಯಾಂಕ್ ಇತ್ತೀಚೆಗೆ ತನ್ನ ಸಾಲ ಬೇಡಿಕೆ ಕಾರ್ಯಕ್ರಮಗಳಲ್ಲಿ ಮಹಿಳಾ ಆಯಾಮವನ್ನು (ಲಿಂಗ ಪ್ರಶ್ನೆ) ಪರಿಗಣಿಸುತ್ತಿದೆ. ಇದು ಬಹಳ ಮುಖ್ಯವಾದ ನೀತಿ ಬದಲಾವಣೆ ಆಗಿದೆ. ಭಾರತ ದೇಶವು ೧೯೮೫ರಿಂದೀಚೆಗೆ ಮಹಿಳಾ ಸಬಲೀಕರಣಕ್ಕಾಗಿ ಕೆಲವು ಲಿಂಗ ನಿರ್ದಿಷ್ಟ (Gender Specific) ಅಭಿವೃದ್ಧಿ ಕಾರ್ಯಕ್ರಮಗಳನ್ನು (ದ್ವಾಕ್ರಾ ಯೋಜನೆ, ಮಹಿಳಾ ಶಿಕ್ಷಣ ಅಭಿಯಾನ, ಮಹಿಳಾ ಸ್ವಸಹಾಯ ಗುಂಪುಗಳ ರಚನೆ) ಜಾರಿಗೊಳಿಸುತ್ತಿದೆ. ಹೀಗೆ ಆರ್ಥಿಕ ನೆಲೆಯಲ್ಲಿ ಮಹಿಳಾ ಸಬಲೀಕರಣದ ಪ್ರಯತ್ನಗಳು ಹಲವಾರು ವಿಕಾಸಶೀಲ ದೇಶಗಳಲ್ಲಿ ಆರಂಭಗೊಂಡಿವೆ.[೨೧]

ಅಭಿವೃದ್ಧಿ ಕೈಗಾರಿಕಾ ದೇಶಗಳಲ್ಲಿ– ಅಮೆರಿಕಾ ಸಂಯುಕ್ತ ಸಂಸ್ಥಾನ, ಕೆನಡಾ, ಬ್ರಿಟನ್, ಪಶ್ಚಿಮ ಯುರೋಪಿನ ದೇಶಗಳು ಜಪಾನ್, ಆಸ್ಟ್ರೇಲಿಯಾ ಮತ್ತು ನ್ಯೂಜಿಲೆಂಡ್ ಆರ್ಥಿಕ ನೆಲೆಯ ಮಹಿಳಾ ಸಬಲೀಕರಣಕ್ಕೆ ಹೆಚ್ಚು ವ್ಯಾಪ್ತಿಯೇನೂ ಇಲ್ಲ. ಅಂದರೆ ಈ ಎಲ್ಲಾ ಶ್ರೀಮಂತ ರಾಷ್ಟ್ರಗಳಲ್ಲಿ ಪೂರ್ಣೋದ್ಯೋಗವಿದೆ. ಉದ್ಯೋಗಾವಕಾಶಗಳು ವಿಫುಲವಾಗಿವೆ; ಲಿಂಗಾಧಾರಿತ ಆರ್ಥಿಕ ತಾರತಮ್ಯಗಳು ಕೈಗಾರಿಕೆ ಮತ್ತು ವಾಣಿಜ್ಯೋದ್ದಿಮೆಗಳಲ್ಲಿ ಬಹಳ ಕಡಿಮೆ ಆಗಿವೆ. ಹೀಗಾಗಿ ಅಭಿವೃದ್ಧಿ ದೇಶಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ನೆಲೆಯ ಮಹಿಳಾ ಸಬಲೀಕರಣ ಹೆಚ್ಚು ಅಗತ್ಯವಿದೆ. ಅಭಿವೃದ್ಧಿ ದೇಶಗಳ ಮಹಿಳೆಯರು ಆರ್ಥಿಕವಾಗಿ ಸದೃಢರಾಗುತ್ತಿದ್ದಾರೆ. ಈ ಕ್ರಿಯೆಗೆ ಇನ್ನಷ್ಟು ತೀವ್ರತೆ ಮತ್ತು ಮೇಲ್ಮುಖ ಚಲನೆ (ವೃತ್ತಿ ಸಂಬಂಧಿ) ತರಬೇಕು ಅಷ್ಟೇ!

ಹೀಗೆ ಮಹಿಳಾ ಸಬಲೀಕರಣದ ವಿಷಯವು ದೇಶ ದೇಶಗಳ ನಡುವೆ, ಕಾಲಾವಧಿಗಳ ನಡುವೆ ಭಿನ್ನವಾಗುವುದು. ಅದರ ಅಗತ್ಯವು ಅಭಿವೃದ್ಧಿಶೀಲ ದೇಶಗಳಲ್ಲಿ ತೀವ್ರವೂ, ಅನಿವಾರ್ಯವಾದುದೂ ಆಗಿದೆ. ಈ ಬಡದೇಶಗಳಲ್ಲಿ ಮಾನವಾಭಿವೃದ್ಧಿ ಕಡಿಮೆ ಇರಲು ಲಿಂಗ ಅಸಮಾನತೆ ಅಪಾರವಾಗಿರುವುದೂ ಕಾರಣವಾಗಿದೆ.[೨೨]

### ೨.೧೩ ಮಾತೃಪ್ರಧಾನ ಕುಟುಂಬ ವ್ಯವಸ್ಥೆ-ನಿರ್ಲಕ್ಷೆ

ಕುಟುಂಬ ಮತ್ತು ಅದರ ಯಜಮಾನಿಕೆಯ ಲಿಂಗ ಸ್ವರೂಪವು ಸಮಾಜಶಾಸ್ತ್ರೀಯ ಅಧ್ಯಯನ ಕ್ಷೇತ್ರವಾಗಿದೆ. ಸಮಾಜಶಾಸ್ತ್ರಜ್ಞರು ಕುಟುಂಬ ವ್ಯವಸ್ಥೆಯನ್ನು ರಕ್ತಸಂಬಂಧ ಬಾಂಧವ್ಯದ (Kinship) ಮೂಲವಾಗಿ, ಸಂಸ್ಕೃತಿ, ಧರ್ಮ, ಸಾಮಾಜಿಕ ಸಂಬಂಧಗಳ ಘಟಕವಾಗಿ ಪರಿಭಾವಿಸುತ್ತಾರೆ. ಹೀಗೆ ಕುಟುಂಬದ ಸಾಮಾಜಿಕ ಸಂರಚನೆ ಅಧ್ಯಯನವು ಸಮಾಜಶಾಸ್ತ್ರದ ಒಂದು ಅತ್ಯಂತ ಸಾಂಪ್ರದಾಯಿಕ ಅಧ್ಯಯನ ಕ್ಷೇತ್ರವಾಗಿದೆ ಹಾಗೂ ಕುಟುಂಬವು ಸಮಾಜಶಾಸ್ತ್ರದಲ್ಲಿ ವ್ಯಾಪಕವಾಗಿ ವ್ಯವಸ್ಥಿತವಾದ ಸಂಶೋಧನೆಗೊಳಗಾಗಿರುವ ವಿಷಯವೂ ಹೌದು.

ಆದರೆ ಅರ್ಥಶಾಸ್ತ್ರವು 'ಕುಟುಂಬ' ಕುರಿತು ಉಪೇಕ್ಷಿತ ನಿಲುವನ್ನೇ ೧೯೭೦ರವರೆಗೂ ತಳೆದಿತ್ತು. ಅದು ಹೇಗೋ ಅರ್ಥಶಾಸ್ತ್ರಜ್ಞರು ಕುಟುಂಬದ ಕುರಿತು ತೀರಾ ಇತ್ತೀಚಿನವರೆಗೂ ವಿಸ್ತೃತವಾದ ವೈಜ್ಞಾನಿಕ ಅಧ್ಯಯನಗಳನ್ನು ನಡೆಸಲಿಲ್ಲ. ಉಳಿತಾಯ ಮತ್ತು ಹೂಡಿಕೆ ಕುರಿತು ಕುಟುಂಬಗಳ ನಡೆವಳಿಕೆ, ವಿವಾಹ ಮತ್ತು ಮಕ್ಕಳ ಸಂಖ್ಯೆ ನಿರ್ಧಾರ ಕುರಿತು ೧೯೬೦ರ ದಶಕದಿಂದೀಚೆಗೆ ಆರ್ಥಿಕ ವಿಶ್ಲೇಷಣೆಗಳನ್ನು ವಿಶೇಷವಾಗಿ ಅಮೆರಿಕನ್ ಅರ್ಥಶಾಸ್ತ್ರಜ್ಞರು (ಉದಾ: ಪ್ರೊ. ಗ್ಯಾರಿ ಎಸ್. ಬೆಕರ್) ನಡೆಸಿದ್ದಾರೆ. ಹೀಗಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಆರ್ಥಿಕ ಪರಿಣಾಮಗಳನ್ನು ಇತ್ತೀಚಿನವರೆಗೂ ಅರ್ಥಶಾಸ್ತ್ರಜ್ಞರಾಗಲಿ ಅಥವಾ ಸಮಾಜಶಾಸ್ತ್ರಜ್ಞರಾಗಲಿ ಕೈಗೊಳ್ಳಲಿಲ್ಲ.[೨೩]

'ತಾಯಿಗೆ' ಪ್ರಥಮ ಸ್ಥಾನ. ಕುಟುಂಬದ ಹಿರಿಯಾಕೆ (ಅಜ್ಜಿ ಅಥವಾ ತಾಯಿ) ಮನೆಯ ಯಜಮಾನಿ ಆಗಿರುವಳು. ಇಲ್ಲಿ ಕುಟುಂಬದ ಯಜಮಾನಿಕೆಯು ಅಂದರೆ ಅಧಿಕಾರವು ಅಜ್ಜಿಯಿಂದ ಮಗಳಿಗೆ, ಮಗಳಿಂದ ಅವಳ ಮಗಳಿಗೆ (ಮೊಮ್ಮಗಳಿಗೆ) ವರ್ಗಾಯಿಸಲ್ಪಡುತ್ತದೆ. ಕುಟುಂಬದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಹೀಗೆ ಎಲ್ಲಾ ರೀತಿಯ ಆಗುಹೋಗುಗಳನ್ನು ಮನೆಯ 'ಹಿರಿಯಾಕೆಯೇ' ತೀರ್ಮಾನಿಸುವಳು. ಹೀಗಾಗಿ ಮಹಿಳಾ ಯಜಮಾನಿಕೆ ಸೂತ್ರದ ನೆಲೆಯಲ್ಲಿ ರೂಪುಗೊಂಡ ಕುಟುಂಬ ವ್ಯವಸ್ಥೆಯನ್ನು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಎಂದು ಸಮಾಜಶಾಸ್ತ್ರಜ್ಞರು ಕರೆದಿದ್ದಾರೆ.

ಮಾನವ ನಾಗರೀಕತೆಯ ಹುಟ್ಟು ಮತ್ತು ವಿಕಾಸದೊಂದಿಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಹುಟ್ಟು ಮತ್ತು ಬೆಳವಣಿಗೆ ಏರ್ಪಟ್ಟಿದೆ. ಹೀಗಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯು ಜಗತ್ತಿನ ಮೊತ್ತಮೊದಲ ಕುಟುಂಬ ವ್ಯವಸ್ಥೆ ಆಗಿದೆ ಎಂದು ಕೆಲವೊಮ್ಮೆ ವಾದಿಸಲಾಗುವುದು. ಮಹಿಳೆಯರು ಗರ್ಭಧರಿಸಿ, ಮಕ್ಕಳನ್ನು ಹೆತ್ತು, ಲಾಲನೆ ಪಾಲನೆ ಮಾಡಿ, ಸಂರಕ್ಷಿಸುವುದರಿಂದ ಬೆಳೆಸುವುದರಲ್ಲಿ ನಿರ್ಣಾಯಕ ಪಾತ್ರ ವಹಿಸುವುದರಿಂದ ಕುಟುಂಬದೊಳಗಿನ ಆಗುಹೋಗುಗಳಲ್ಲಿ ಮಹಿಳೆಯರದ್ದೇ ಮೇಲುಗೈಯಾಯಿತು. ಇದು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಹುಟ್ಟಿನ ಮೂಲವಾಗಿದೆ. ಹೀಗೆ ಮಹಿಳೆಯು ತನ್ನ ಪ್ರಜನನ ಸಾಮರ್ಥ್ಯ ಮತ್ತು ಕಾರ್ಯದ ಮೂಲಕ ಮಕ್ಕಳಿಗೆ ಉತ್ತರದಾಯಿಯಾದಳು. ಈ

ಜವಾಬ್ದಾರಿಯನ್ನು ತಾಯಿಯಾಗಿ ಮಹಿಳೆ ಯಶಸ್ವಿಯಾಗಿ ನಿರ್ವಹಿಸತೊಡಗಿದ್ದರಿಂದ ಸಹಜವಾಗಿ ಆಕೆಗೆ ಮಕ್ಕಳ ಮೇಲೆ, ತನ್ನ ಸುತ್ತಲಿನ ನೈಸರ್ಗಿಕ ಸಂಪನ್ಮೂಲಗಳ ಮೇಲೆ ನಿಯಂತ್ರಣ ಪ್ರಾಪ್ತವಾಯಿತು.[೨೪]

ಮಾನವ ನಾಗರಿಕತೆಯ ಪರಿವರ್ತನೆಯ ಹಂತದಲ್ಲಿ ಬೇಟೆಗಾರಿಕೆಯಿಂದ ಪಶುಸಂಗೋಪನೆಗೆ, ಪಶುಸಂಗೋಪನೆಯಿಂದ ಕೃಷಿಗೆ ಆಹಾರ ಸಂಗ್ರಹಕ್ಕಾಗಿ ಹೊರಗೆ ಹೋಗುವುದು; ಅಂತರ ಪಾಳೆಯ ಪಟ್ಟುಗಳು ಹುಟ್ಟಿಕೊಂಡು ರಾಜಪ್ರಭುತ್ವಗಳು ನೆಲೆಗೊಳ್ಳುವಾಗ ಯುದ್ಧಗಳಲ್ಲಿ ಪಾಲುಗೊಳ್ಳಲು ಪುರುಷರು ಕುಟುಂಬದಿಂದ ಹೊರಗಿರುತ್ತಿದ್ದರು. ಕೆಲವೊಮ್ಮೆ ವೃದ್ಧರು ಮತ್ತು ಬಾಲಕರನ್ನು ಹೊರತುಪಡಿಸಿ ಉಳಿದೆಲ್ಲಾ ಸದೃಢ ಗಂಡಸರು ಹೊರಗಿರುತ್ತಿದ್ದರು. ಇಂಥ ಸಂದರ್ಭಗಳಲ್ಲೆಲ್ಲಾ ಹೆಂಗಸರು ತಮಗಾಗಿ, ಮಕ್ಕಳಿಗಾಗಿ, ವೃದ್ಧರಿಗಾಗಿ ಆಹಾರ ಸಂಗ್ರಹಿಸಬೇಕಾಗುತ್ತಿತ್ತು. ಇಂಥ ಬಿಕ್ಕಟ್ಟು ನಿವಾರಣೆಯಲ್ಲಿ ಪಶುಸಂಗೋಪನೆ ಮತ್ತು ಕೃಷಿ ನಿಶ್ಚಿತ ಆಹಾರ ಪೂರೈಕೆ ಮೂಲಗಳಾಗಿ ತೋರಿಬಂದವು. ಹೀಗೆ ಮಹಿಳೆಯರು ಪಶುಸಂಗೋಪನೆ ಮತ್ತು ಕೃಷಿ ಕಲಿತರು; ಕೃಷಿ ವಿಧಾನಗಳನ್ನು, ಬೆಳೆಗಳನ್ನು ಆವಿಸಷ್ಕರಿಸಿದರು. ಪಶು ಸಂಪತ್ತು ಮತ್ತು ಭೂಮಿ ಮೇಲೆ ತಮ್ಮ ಹಿಡಿತ ಸಾಧಿಸಿದರು. ಈ ಹಿಡಿತವು ಕೃಷಿ ಸಂಪನ್ಮೂಲಗಳ ಮೇಲೆ ಮಹಿಳೆಯರು ಮಾಲೀಕತ್ವವನ್ನು ಸಾಧ್ಯವಾಗಿಸಿತು. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯು ಮಹಿಳೆ ಮತ್ತು ಕುಟುಂಬ ಕೇಂದ್ರಿತ ಕಾರ್ಮಿಕ ಕ್ರಿಯೆಯನ್ನು ಪ್ರತಿಪಾದಿಸುತ್ತದೆ.[೨೫]

ಈ ಮೇಲ್ಕಂಡ ಕಾರಣಗಳಿಂದಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಶೋಷಿತಳಾಗುವುದಿಲ್ಲ. ಆದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯು ಕೆಳಕಂಡ ಅನಾನುಕೂಲತೆಗಳನ್ನು ಅಥವಾ ಮಿತಿಗಳನ್ನು ಹೊಂದಿದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಪುರುಷನು ಸ್ತ್ರೀಗೆ ಅಧೀನನೂ ಮತ್ತು ಪರಾವಲಂಬಿಯೂ ಆಗುವನು. ಏಕೆಂದರೆ ಈ ಕುಟುಂಬ ವ್ಯವಸ್ಥೆಯಲ್ಲಿ ಪುರುಷನ ಹೆಸರಿನಲ್ಲಿ ವಿನಿಮಯ ಮೌಲ್ಯವುಳ್ಳ ಆಸ್ತಿಗಳು ನೋಂದಾಯಿಸಲ್ಪಟ್ಟಿರುವುದಿಲ್ಲ. ಹೀಗಾಗಿ 'ಅಳಿಯ ಕಟ್ಟು' ಪದ್ಧತಿಯಲ್ಲಿ ಪುರುಷನಿಗೆ ಆರ್ಥಿಕ ಸ್ವಾತಂತ್ರ್ಯವಿರುವುದಿಲ್ಲ. ಆದರೆ ಇಂದು ಮಾತೃಪ್ರಧಾನ ವ್ಯವಸ್ಥೆ ಕೇವಲ ಹೆಸರಿಗೆ ಮಾತ್ರ ಇದೆ. ಒಂದು ಕಾಲದಲ್ಲಿ ಶಕ್ತಿ ಕೇಂದ್ರವೆನಿಸಿದ್ದ ಇದು ಈಗ ಇತಿಹಾಸದ ಪುಟಗಳನ್ನು ಸೇರಿದೆ. ಮುಂದೆ ಕೂಡ ಅಂತಹ ಒಂದು ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಇಲ್ಲಿದೆ.

ಪಿತೃಪ್ರಧಾನತೆ (Patriarchy) ಕುರಿತಂತೆ ಝಿಲ್ಲಾ ಐಸೆನ್‌ಸ್ಟೈನ್ ಅವರು ಒಂದು ವೈಜ್ಞಾನಿಕ ತತ್ವ ನೀಡಿದ್ದಾರೆಂದು ನಂಬಲಾಗಿದೆ. ಈಕೆಯ 'ದಮನ' (Oppression) ಮತ್ತು 'ಶೋಷಣೆ' (Exploitation) ನಡುವಣ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಝಿಲ್ಲಾ ಅವರ ಪ್ರಕಾರ 'ಶೋಷಣೆಗೆ' ಆರ್ಥಿಕ ಆಯಾಮವಷ್ಟೇ ಇದೆ. ಆರ್ಥಿಕ ಲಾಭಗಳಿಗಾಗಿ ಬಂಡವಾಳಶಾಹಿಗಳು ಕಾರ್ಮಿಕರನ್ನು ಮತ್ತು ದುರ್ಬಲ ವರ್ಗಗಳನ್ನು ಶೋಷಿಸುವುದು. ಅಂದರೆ ಅದು ವರ್ಗ ಸಂಬಂಧಗಳಿಗೆ ಮತ್ತು ಅದರ ಪರಿಣಾಮವಾಗಿ ಏರ್ಪಡುವ ಕಾರ್ಮಿಕರನ್ನು ಬಂಡವಾಳಶಾಹಿಗಳು ಶೋಷಿಸುವುದನ್ನು ಚಿತ್ರಿಸುತ್ತದೆ. ಇದಕ್ಕೆ ವಿರುದ್ಧಾತ್ಮಕವಾಗಿ,

ಪಿತೃಪ್ರಧಾನ ಕುಟುಂಬ, ಜನಾಂಗಿಕ ಮತ್ತು ಬಂಡವಾಳಶಾಹಿ ಸಂಬಂಧಗಳೊಳಗೆ ಮಹಿಳೆ ಮತ್ತು ಇತರ ಅಲ್ಪಸಂಖ್ಯಾತರನ್ನು ದಿಗ್ಬಂಧನಗಳ ಮೂಲಕ ನಿತ್ರಾಣಗೊಳಿಸುವುದನ್ನು 'ದಮನ' ಎನ್ನಲಾಗುತ್ತದೆ. ಬಂಡವಾಳಷಾಹಿ ವ್ಯವಸ್ಥೆಯಲ್ಲಿ ಮಹಿಳೆ ಮತ್ತು ಪುರಷರನ್ನು ಕಾರ್ಮಿಕರೆಂಬ ನೆಲೆಯಲ್ಲಿ ಶೋಷಿಸಲಾಗುವುದು; ಆದರೆ ಮಹಿಳೆಯ ದಮನವು ಕುಟುಂಬದೊಳಗೆ ಪರಾಧೀನಳಾಗಿ ಮತ್ತು ಸಮಾಜ ಹಾಗೂ ಆರ್ಥಿಕತೆಯಲ್ಲಿ ಕೂಲಿಕಾರಳಾಗಿ, ಲಿಂಗ ಶ್ರೇಣೀಕರಣ ಆಧಾರದಲ್ಲಿ ಏರ್ಪಡುವುದು. ದಮನವೆಂದರೆ ನಿರ್ದಿಷ್ಟ ಜನರಿಗೆ ಮಾನವ ಹಕ್ಕುಗಳನ್ನು ನಿರಾಕರಿಸುವುದೆಂದರ್ಥ. ಅವರು ಮಾನವ ಹಕ್ಕುಗಳನ್ನು ನಿರಾಕರಿಸುವುದೆಂದರ್ಥ. ಅವರು ಮಾನವ ಹಕ್ಕುಗಳನ್ನು ಅನುಭವಿಸದಂತೆ ನಿಷೇಧಗಳನ್ನು ಹೇರಿ ಅವರಿಗೆ ನಿಕೃಷ್ಟ ಜೀವನ ಸ್ಥಿತಿ ನಿರ್ಮಿಸುವುದೆಂದರ್ಥ. ಹೀಗಾಗಿ ಶೋಷಣೆ ಮತ್ತು ದಮನ ಎರಡೂ ಒಂದೆ ಅಲ್ಲ. 'ದಮನ' ಪರಿಭಾವನೆಯು ವಿಸ್ತೃತವಾದುದಾಗಿದ್ದು, ಅದು ಶೋಷಣೆಯನ್ನೂ ಒಳಗೊಳ್ಳುವುದು.

ದಮನವು ಹೆಚ್ಚು ಸಂಕೀರ್ಣವಾದ ಸಾಮಾಜಿಕ ನೈಜತೆಯನ್ನು (ವಾಸ್ತವತೆಯನ್ನು) ಪ್ರತಿಪಾದಿಸುತ್ತದೆ. ಬಂಡವಾಳಶಾಹಿ ಸಮಾಜಗಳಲ್ಲಿ ಮಹಿಳೆಯ ದಮನವು ಆಕೆಯ ಪಾತ್ರದ ಕೂಲಿ ಕಾರ್ಮಿಕಳಾಗಿ, ತಾಯಿಯಾಗಿ, ಪತ್ನಿಯಾಗಿ, ಮನೆಗೆಲಸದಾಕೆಯಾಗಿ, ಮಕ್ಕಳನ್ನು ಹೆತ್ತು, ಲಾಲನೆ ಪಾಲನೆ ಮಾಡುವವಳಾಗಿ ಮೂಲಕ ಏರ್ಪಡುತ್ತದೆ.

ಕಾರ್ಲ್‌ಮಾರ್ಕ್ಸ್‌ರವರ ಬಂಡವಾಳಶಾಹಿ ತತ್ವದಲ್ಲಿ 'ವರ್ಗ'ವು ಕೇಂದ್ರ ಸ್ಥಾನದಲ್ಲಿದೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕಾರ್ಮಿಕರು ಅಪಾರವಾಗಿ ಶೋಷಿಸಲ್ಪಡುವರು; ಕಾರ್ಮಿಕರಲ್ಲಿ ಪುರುಷರೂ ಮತ್ತು ಮಹಿಳೆಯರೂ ಇದ್ದಾರೆ. ಹೀಗಾಗಿ ಕುಟುಂಬದಿಂದ ಹೊರಗೆ ಆರ್ಥಿಕತೆಯಲ್ಲಿ ಮಹಿಳೆ ಕಾರ್ಮಿಕಳಾಗಿ ಕೂಲಿ ಗುಲಾಮಳಾಗಿ ಶೋಷಿಸಲ್ಪಟ್ಟರೆ, ಮಹಿಳೆಯು ಕುಟುಂಬದೊಳಗೆ ಕೂಲಿಯೇತರ (ಕೂಲಿರಹಿತ) ಗುಲಾಮಳಾಗಿ ಶೋಷಿಸಲ್ಪಡುವಳು; ದಮನಿಸಲ್ಪಡುವಳು. ಅಂದರೆ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಮಹಿಳೆಯ ದಮನವು ದ್ವಿಮುಖ ದಮನವೇ ಆಗಿದೆ. ಅದು ಉತ್ಪಾದನೆ ಮತ್ತು ಪ್ರಜನನ ಕ್ರಿಯೆಗಳೆರಡರಿಂದಲೂ ಮೂಡಿಬರುತ್ತದೆ.[೨೬]

ಸಮಾಜವಾದಿ ಸ್ತ್ರೀವಾದದ ಪ್ರಕಾರ ಮಹಿಳಾ ಹೋರಾಟಗಳನ್ನು ಮುನ್ನಡೆಸಲು ಮಹಿಳೆಯರಿಗೆ ರಾಜಕೀಯ ಪ್ರಜ್ಞೆ ಅತ್ಯಂತ ಮಹತ್ವದ್ದೆಂದು ಭಾವಿಸುತ್ತದೆ. ಅದು ಉತ್ಪಾದನೆ, ಪ್ರಜನನ ಮತ್ತು ಅನುಭೋಗಗಳಲ್ಲಿ ಮಹಿಳೆಯ ದೈನಂದಿನ ಹೋರಾಟಗಳನ್ನು ಸಮಾಜವಾದಿ ಸ್ತ್ರೀವಾದವು ಕೇಂದ್ರವಾಗಿರಿಸಿಕೊಂಡಿದೆ.

ಮಹಿಳೆಯು ಆಧುನಿಕ ಆರ್ಥಿಕಾಭಿವೃದ್ಧಿಯಲ್ಲಿ ಪೂರ್ಣ ಪ್ರಮಾಣದಲ್ಲಿ ಪಾಲುಗೊಳ್ಳಲು ಹಾಗೂ ಅದರಿಂದ ಲಾಭಗಳನ್ನು ಪಡೆಯಲು ಹೆಚ್ಚಾಗಿ ಸಾಮಾಜಿಕ ಸಾಂಸ್ಕೃತಿಕ ತಾರತಮ್ಯಗಳು ಮತ್ತು ಅಡ್ಡಿ ಆತಂಕಗಳೇ ಕಾರಣವಾಗಿವೆ. ಇವುಗಳು ಕುಟುಂಬದೊಳಗೆ ಮತ್ತು ಹೊರಗೆ ವ್ಯವಸ್ಥೆಯಲ್ಲಿ ಆಳವಾಗಿ

ಬೇರೂರಿವೆ. ಇವುಗಳನ್ನು ಪರಿಹರಿಸುವುದರಿಂದ ಮಹಿಳೆಯ ಆರ್ಥಿಕ ಪಾಲುಗೊಳ್ಳುವಿಕೆಗೆ ಹಾದಿ ಸುಗಮವಾಗುವುದು. ಇನ್ನು ಆರ್ಥಿಕ ತಾರತಮ್ಯಗಳನ್ನು ಮಹಿಳೆಗೆ ಸಂರಕ್ಷಣೆ ನೀಡಿಕೆ ಮತ್ತು ಮಹಿಳೆಯ ಸ್ಪರ್ಧಾತ್ಮಕ ವೃದ್ಧಿ ಮೂಲಕ ಪರಿಹರಿಸಬಹುದಾಗಿದೆ. ಆಗ ಮಹಿಳೆಯು ಆರ್ಥಿಕಾಭಿವೃದ್ಧಿ ಕ್ರಿಯೆಯಲ್ಲಿ ಅರ್ಥಪೂರ್ಣವಾಗಿ ಭಾಗವಹಿಸುವುದು ಸಾಧ್ಯ. ವಾಸ್ತವದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಹಿಡಿತವನ್ನು ಸಡಿಲಗೊಳಿಸಿದರೆ, ಆಗ ಬಂಡವಾಳಷಾಹಿ ವ್ಯವಸ್ಥೆಯು ಮಹಿಳೆಯರ ಪಾಲಿಗೆ ಹೆಚ್ಚು ಕ್ರೂರವೇನೂ ಆಗುವುದಿಲ್ಲ. ಆದರದು ಮಹಿಳೆಯರಲ್ಲಿ ಪುರುಷರಿಗೆ ಸರಿಸಮಾನವಾದ ದಕ್ಷತೆಯನ್ನು, ಆರ್ಥಿಕ ಸಂಸ್ಕೃತಿಯನ್ನು ಅಪೇಕ್ಷಿಸುತ್ತದೆ ಅಷ್ಟೇ![೨೭]

### ೨.೧೪ ಇಲೆಕ್ಟ್ರಾನಿಕ್ ಮಾಧ್ಯಮ-ನಿರ್ಲಕ್ಷೆ

ಇಲೆಕ್ಟ್ರಾನಿಕ್ ಮತ್ತು ಇತರ ಸಮೂಹ ಮಾಧ್ಯಮಗಳಲ್ಲಿ ಲಿಂಗ ಪೂರ್ವಾಗ್ರಹವು ವಿಪರೀತವೂ ಮತ್ತು ವ್ಯಾಪಕವೂ ಆಗಿದೆ. ಇದನ್ನು ಕಡಿಮೆಗೊಳಿಸುವ ಪ್ರಯತ್ನಗಳನ್ನು ಆಯೋಗ ಮಾಡುತ್ತಿದೆ.

### ೨.೧೫ ಲಿಂಗ ಅಸಮಾನತೆ-ನಿರ್ಲಕ್ಷೆ

"ಪ್ರತಿಯೊಂದು ಸಮುದಾಯ, ರಾಷ್ಟ್ರೀಯತೆ ಮತ್ತು ವರ್ಗದೊಳಗೆ ಕಷ್ಟಕಾರ್ಪಣ್ಯಗಳ ಭಾರವು ಅಸಮಾನವಾಗಿ ಮಹಿಳೆಯರ ಮೇಲೆ ಬೀಳುತ್ತದೆ. ಇದು ಬಹಳ ಹಿಂದಿನಿಂದಲೂ ನಡೆದು ಬಂದಿದೆ. ನಾವು ಬದುಕುತ್ತಿರುವ ವಿಶ್ವವು ಸಂಕೀರ್ಣವಾಗಿದ್ದು, ಅನೇಕಾನೇಕ ಸಮಸ್ಯೆಗಳಿಂದ ಕೂಡಿದೆ. ಅದರ ಒಂದು ಅತ್ಯಂತ ಪ್ರಮುಖ ಲಕ್ಷಣವೆಂದರೆ ಕಷ್ಟಕಾರ್ಪಣ್ಯಗಳ ಭಾರವು ಪುರುಷ ಮತ್ತು ಮಹಿಳೆ ನಡುವಣ ಅಸಮಾನತೆಯು ಪ್ರಪಂಚದ ಬಹುತೇಕ ಭಾಗದಲ್ಲಿದೆ. ಅದು ಜಪಾನ್‌ನಿಂದ ಮೊರೊಕ್ಕೋದವರೆಗೆ; ಉಜೆಬೆಕಿಸ್ತಾನದಿಂದ ಅಮೆರಿಕಾ ಸಂಯುಕ್ತ ಸಂಸ್ಥಾನದವರೆಗೆ ವ್ಯಾಪಿಸಿದೆ. ಪುರುಷ ಮತ್ತು ಮಹಿಳೆ ನಡುವಣ ಅಸಮಾನತೆಯು ಅನೇಕ ವಿಭಿನ್ನ ರೂಪಗಳನ್ನು ತಳೆದಿದೆ. ವಾಸ್ತವದಲ್ಲಿ ಲಿಂಗ ಅಸಮಾನತೆಯು ಒಂದು ಏಕರೂಪದ ಅಂಶವೇನಲ್ಲ. ಆದರೆ ಅದು ವಿಭಿನ್ನವೂ, ದಮನಕಾರಿಯೂ ಮತ್ತು ಪರಸ್ಪರ ಬೆಸೆದುಕೊಂಡ ಸಮಸ್ಯೆಗಳಿಂದಲೂ ಕೂಡಿದ ಒಟ್ಟು ಸಂಚಯ ರೂಪವಾಗಿದೆ. (ಅಮರ್ತ್ಯ ಕೆ. ಸೇನ್, ೨೦೦೧, ಪು.೪)[೨೮]

### ೨.೧೬ ಮರಣ ಅಸಮಾನತೆ-ನಿರ್ಲಕ್ಷೆ

ಪ್ರಪಂಚದ ಕೆಲವು ಪ್ರದೇಶಗಳಲ್ಲಿ ಲಿಂಗ ಪೂರ್ವಾಗ್ರಹವು ತೀವ್ರವೂ ಮತ್ತು ವ್ಯಾಪಕವೂ ಆಗಿದೆ. ಹೀಗಾಗಿ ಪುರುಷ ಮತ್ತು ಮಹಿಳೆ ನಡುವೆ ಜೀವನ ಮತ್ತು ಮರಣ ವಿಷಯಗಳಲ್ಲೂ ಅಸಮಾನತೆಯು ಪ್ರತ್ಯಕ್ಷವಾಗಿದೆ. ಆದುದರಿಂದ ಈ ದೇಶಗಳಲ್ಲಿ ಪುರುಷರಿಗೆ ಹೋಲಿಸಿದಂತೆ ಮಹಿಳೆಯರ ಮರಣವು

ಅಧಿಕವಾಗಿದೆ. ಈ ಮೂಲಕ ದೇಶಗಳ ಒಟ್ಟು ಜನಸಂಖ್ಯೆಯಲ್ಲಿ ಪುರುಷರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಮಹಿಳೆಯರ ಆರೋಗ್ಯ ಮತ್ತು ಪೌಷ್ಟಿಕ ಆಹಾರ ಸ್ಥಿತಿ ಉತ್ತಮವಿರುವ ಮತ್ತು/ಅಥವಾ ಪುರುಷ ಪೂರ್ವಾಗ್ರಹವಿಲ್ಲದಿರುವ ದೇಶಗಳಲ್ಲಿ ಮಹಿಳೆಯರ ಮರಣ ಸಂಭಾವ್ಯತೆಯು ಕಡಿಮೆ ಇದೆ. ಮರಣ ಅಸಮಾನತೆಯನ್ನು ಚೀನಾ ಮತ್ತು ದಕ್ಷಿಣ ಏಷ್ಯಾ ಒಳಗೊಂಡಂತೆ, ಏಷ್ಯಾ ಮತ್ತು ಉತ್ತರ ಅಮೆರಿಕಾದಲ್ಲಿ ವ್ಯಾಪಕವಾಗಿ ಕಾಣಬಹುದಾಗಿದೆ.[೨೯]

### ೨.೧೭ ಭ್ರೂಣಾವಸ್ಥೆ ಅಸಮಾನತೆ–ನಿರ್ಲಕ್ಷ್ಯ

ಅನೇಕ ಪುರುಷ ಪ್ರಧಾನ ಸಮಾಜಗಳಲ್ಲಿ ಹೆಣ್ಣುಮಕ್ಕಳ ಬದಲಾಗಿ ಗಂಡು ಮಕ್ಕಳತ್ತ ದಂಪತಿಗಳ ಒಲವು ಅಪಾರವಾಗಿದೆ. ಹೀಗಾಗಿ ತಂದೆ ತಾಯಿಗಳು ಹೊಸದಾಗಿ ಜನಿಸುವ ಶಿಶುವು ಗಂಡಾಗಬೇಕೆಂದು ಹಂಬಲಿಸುವರು. ಈ ಮೂಲಕ ಮಗು ಭ್ರೂಣಾವಸ್ಥೆಯಲ್ಲಿರುವಾಗಲೇ ಲಿಂಗ ಅಸಮಾನತೆ ಭಾವನೆಯು ತಂದೆತಾಯಿಗಳಲ್ಲಿ ಮೊಳೆತು ಕ್ರಮೇಣ ಹೆಮ್ಮರವಾಗತೊಡಗುತ್ತದೆ. ಈ ಹಿಂದೆ ತಂದೆತಾಯಿಗಳು ಭ್ರೂಣದ ಲಿಂಗ ಕುರಿತು ಊಹಾಪೋಹಗಳಲ್ಲಿ, ಹಗಲುಗನಸು ಕಾಣುವುದರಲ್ಲಿ ತೊಡಗುತ್ತಿದ್ದರು. ಆದರೆ ಈಗ ಭ್ರೂಣದ ಲಿಂಗ ಪತ್ತೆ ಹಚ್ಚುವ ಆಧುನಿಕ ವೈದ್ಯಕೀಯ ತಂತ್ರಜ್ಞಾನ ಲಭ್ಯವಿದೆ. ಪರಿಣಾಮವಾಗಿ ಹುಟ್ಟಲಿರುವ ಮಗು ಹೆಣ್ಣೆಂದು ಖಚಿತವಾದ ಕೂಡಲೇ ತಂದೆತಾಯಿಗಳು ಲಿಂಗ ಆಯ್ಕೆ ಗರ್ಭಪಾತದ (Sex-Selective Abortion) ಮೊರೆ ಹೋಗತೊಡಗಿದ್ದಾರೆ. ಇದು ಇಂದು ಜಗತ್ತಿನ ಅನೇಕಾನೇಕ ದೇಶಗಳಲ್ಲಿ ಜಾರಿಗೆ ಬಂದಿದೆ. ಹೆಣ್ಣು ಶಿಶುವಿನ ಭ್ರೂಣ ಹತ್ಯೆಯು ಪೂರ್ವ ಏಷ್ಯಾದಲ್ಲಿ ಚೀನಾ ಮತ್ತು ದಕ್ಷಿಣ ಕೊರಿಯಾದಲ್ಲಲ್ಲದೆ, ಸಿಂಗಾಪುರ ಮತ್ತು ತೈವಾನ್‌ನಲ್ಲೂ ವ್ಯಾಪಕವಾಗಿದೆ. ಈ ಅಮಾನವೀಯ ವಿಪತ್ಕಾರಿ ಪ್ರವೃತ್ತಿಯು ಭಾರತ ಮತ್ತು ದಕ್ಷಿಣ ಏಷ್ಯಾದಲ್ಲೂ ಗಮನಾರ್ಹವಾಗಿ ಇತ್ತೀಚೆಗೆ ಹೆಚ್ಚುತ್ತಿದೆ. ಇದು ಹೈ–ಟೆಕ್ ಲಿಂಗ ತಾರತಮ್ಯವೇ ಆಗಿದೆ. (High-Tech Sexism)[೩೦]

### ೨.೧೮ ಮೂಲಭೂತ ಸೌಲಭ್ಯ ಅಸಮಾನತೆ–ನಿರ್ಲಕ್ಷ್ಯ

ದೇಶವೊಂದರ ಜನಸಂಖ್ಯಾ ಲಕ್ಷಣಗಳು ಗಣನೀಯವಾಗಿ ಅಥವಾ ಯಾವುದೇ ತೆರನಾದ ಮಹಿಳಾ ವಿರೋಧಿ ಪೂರ್ವಾಗ್ರಹಗಳನ್ನು ಪ್ರಕಟಪಡಿಸದಿದ್ದರೂ, ಮಹಿಳೆಯರ ವಿರುದ್ಧದ ತಾರತಮ್ಯಗಳನ್ನು ಅದು ಬೇರೆ ರೀತಿಗಳಲ್ಲಿ ಅನುಸರಿಸುವುದಿದೆ, ಉದಾ: ಆಫ್‌ಘಾನಿಸ್ಥಾನದ ಹಿಂದಿನ ತಾಲಿಬಾನ್ ಸರ್ಕಾರವು ಶಾಲೆಗಳಿಂದ ಹೆಣ್ಣುಮಕ್ಕಳನ್ನು ಹೊರತುಪಡಿಸಿದೆ. ಇಂಥ ಸರ್ಕಾರವು ಪ್ರಪಂಚದ ಬೇರೆ ಯಾವ ಭಾಗದಲ್ಲೂ ಇಲ್ಲ. ತಾಲಿಬಾನ್ ಆಡಳಿತದಲ್ಲಿ ಆಫ್‌ಘನ್ ಮಹಿಳೆಯರಿಗೆ ಎಲ್ಲಾ ಬಗೆಯ ನಾಗರೀಕ ಮಾನವ ಹಕ್ಕುಗಳನ್ನು ನಿರಾಕರಿಸಲಾಗಿತ್ತು. ಆದರೆ ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕಾದ ಅನೇಕ ದೇಶಗಳಲ್ಲಿ

ಹುಡುಗರಿಗಿಂತ ಹುಡುಗಿಯರಿಗೆ ಶಾಲಾ ಅವಕಾಶಗಳು ಕಡಿಮೆ ಇರುವುದುಂಟು. ಮಹಿಳೆಯರಿಗೆ ಲಭ್ಯವಿರುವ ಮೂಲಭೂತ ಸೌಲಭ್ಯಗಳಲ್ಲಿ ಅನೇಕ ಕೊರತೆಗಳಿವೆ. ಇವುಗಳು ವ್ಯಕ್ತಿಯ ಸಹಜ ಪ್ರತಿಭೆಗಳನ್ನು ಬೆಳೆಸುವುದರ ಉತ್ತೇಜನದಿಂದ ಹಿಡಿದು ಸಮುದಾಯದ ಸಾಮಾಜಿಕ ಕರ್ತವ್ಯಗಳಲ್ಲಿ ಪಾಲುಗೊಳ್ಳಲು ಇರುವ ಪ್ರತಿಫಲಗಳವರೆಗೆ ಹರಡಿಕೊಂಡಿವೆ.[೩೧]

### ೨.೧೯ ವಿಶೇಷ ಅವಕಾಶ ಅಸಮಾನತೆ-ನಿರ್ಲಕ್ಷೆ

ಶಾಲೆ ಸೇರಿದಂತೆ ಮೂಲಭೂತ ಸೌಲಭ್ಯಗಳಲ್ಲಿ ಅತ್ಯಲ್ಪ ವ್ಯತ್ಯಾಸವಿದ್ದರೂ ಕೂಡಾ, ಯುವ ಪುರುಷರಿಗೆ ಹೋಲಿಸಿದಂತೆ ಯುವ ಮಹಿಳೆಯರಿಗೆ ದೊರಕುವ ಉನ್ನತ ಶಿಕ್ಷಣ ಅವಕಾಶಗಳು ಅತ್ಯಲ್ಪವೇ ಆಗಿವೆ. ವಾಸ್ತವದಲ್ಲಿ ಪ್ರಪಂಚದ ಶ್ರೀಮಂತ ಯೂರೋಪಿಯನ್ ಮತ್ತು ವೃತ್ತಿಪರ ತರಬೇತಿಯಲ್ಲಿ ಲಿಂಗ ಪೂರ್ವಾಗ್ರಹವಿದೆ. ಇಂಥ ವಿಭಜನೆಗಳು ಕೆಲವೊಮ್ಮೆ ಪುರುಷ ಮತ್ತು ಮಹಿಳೆಯ ಕಾರ್ಯಕ್ಷೇತ್ರಗಳು ಅನುಕ್ರಮವಾಗಿ ವಿಭಿನ್ನ ಎಂಬ ಕೃತಕ ದೃಷ್ಟಿಕೋನವನ್ನು ಆಧರಿಸಿವೆ. ಈ ವಾದವನ್ನು ಶತಮಾನಗಳಾದ್ಯಂತ ವಿಭಿನ್ನ ರೂಪಗಳಲ್ಲಿ ಪ್ರತಿಪಾದಿಸಲಾಗುತ್ತಿದೆ. ಇದಕ್ಕೆ ಬಹುರಂಗವಾಗಿ ಮತ್ತು ಗುಪ್ತವಾಗಿ ಅಪಾರ ಅನುಯಾಯಿಗಳಿದ್ದಾರೆ ಮತ್ತು ಬೆಂಬಲಿಸುವವರು ಇಂದಿಗೂ ಇದ್ದಾರೆ. ರೆವೆರೆಂಡ್ ಜೇಮ್ಸ್ ಪೋರ್ಡ್ಸಸ್ ಎಂಬ ಲೇಖಕನು Sermon to young Women (೧೭೬೬) ಎಂಬ ಪುಸ್ತಕದಲ್ಲಿ ಪುರುಷರ ಕಲೆಗಳ(ವೃತ್ತಿ)ಕ್ಷೇತ್ರಕ್ಕೆ ಗಂಡುಬೀರಿಯರು ಪ್ರವೇಶಿಸಬಾರದೆಂದು ಹೇಳಿದ್ದಾನೆ. ಪುರುಷ ಕಲೆಗಳ ಕ್ಷೇತ್ರವು ಯುದ್ಧ, ವ್ಯಾಪಾರ, ರಾಜಕಾರಣ, ಬಲಪಡೆಯುವ ಅಂಗಸಾಧನೆಗಳು, ಈ ಕಲ್ಪನಾವಿಲಾಸದ ತತ್ವದರ್ಶನ, ವಿಜ್ಞಾನಗಳಾಗಿವೆ ಎನ್ನುವ ಜೇಮ್ಸ್ ಫೋರ್ಡೈಸನ. ಕೃತಿ ವಿರುದ್ಧ ಬ್ರಿಟಿಷ್ ರಾಣಿ ವಿಕೋರಿಯಾಗೆ ದೂರು ನೀಡುವ ೧೦೦ ವರ್ಷಗಳಿಗೂ ಮೊದಲೇ ಪ್ರಖ್ಯಾತ ಬ್ರಿಟಿಷ್ ಮಹಿಳಾವಾದಿ ಮೇರಿ ವೊಲ್‌ಸ್ಟೆನ್‌ಕ್ರಾಫ್ಟ್ ಪ್ರತಿಭಟಿಸಿದ್ದಾರೆ. ಈ ವಿಷಯದಲ್ಲಿ ಅವರ A Vindication of the Rights of Women ಮಹತ್ವದ ಕೃತಿಯಾಗಿದೆ. ಹೀಗೆ ಅನೇಕ ಶತಮಾನಗಳಿಂದಲೂ ಯುರೋಪು ಮತ್ತು ಉತ್ತರ ಅಮೆರಿಕಾ ಸೇರಿದಂತೆ ಅನೇಕಾನೇಕ ದೇಶಗಳಲ್ಲಿ ಶಿಕ್ಷಣ, ತರಬೇತಿ ಮತ್ತು ವೃತ್ತಿಪರ ದುಡಿಮೆ ಮುಂತಾದ ಹಲವು ಕ್ಷೇತ್ರಗಳಲ್ಲಿ ಲಿಂಗ ಅಸಮಾನತೆಗಳು ಮುಂದುವರಿದುಕೊಂಡು ಬಂದಿವೆ.[೩೨]

### ೨.೨೦ ವೃತ್ತಿಪರ ಅಸಮಾನತೆ-ನಿರ್ಲಕ್ಷೆ

ಉದ್ಯೋಗದ ಮತ್ತು ಪದೋನ್ನತಿ ದೃಷ್ಟಿಯಿಂದ, ದುಡಿಮೆ ಮತ್ತು ವೃತ್ತಿಯಲ್ಲಿ ಮಹಿಳೆಯರು ಪುರುಷರಿಗಿಂತ ಹೆಚ್ಚು ಸಂಕಷ್ಟಗಳನ್ನು ಅನುಭವಿಸುವರು. ಜಪಾನ್‌ನಂಥ ದೇಶವೊಂದು ಜನಸಂಖ್ಯೆ ಮತ್ತು ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವುದರಲ್ಲಿ, ಉನ್ನತ ಶಿಕ್ಷಣ ನೀಡುವುದರಲ್ಲಿ ಹೆಚ್ಚೆಚ್ಚು ಸಮಾನವಾಗಿ

ಉಭಯ ಲಿಂಗಿಗಳನ್ನು ಕಾಣುತ್ತಿರಬಹುದು. ಆದರೆ ಜಪಾನ್‌ನಲ್ಲೂ ಉದ್ಯೋಗ ಮತ್ತು ಪದೋನ್ನತಿ ವಿಷಯಕ್ಕೆ ಬಂದಾಗ ಮಹಿಳೆಯರು ಪುರುಷರಿಗಿಂತ ಹೆಚ್ಚು ತಾರತಮ್ಯಗಳನ್ನು ಕಷ್ಟಕಾರ್ಪಣ್ಯಗಳನ್ನು ಎದುರಿಸುತ್ತಿರುವುದುಂಟು.

ಅಭಿವೃದ್ಧಿ ದೇಶಗಳಲ್ಲಿ ವೃತ್ತಿಪರ ಅಸಮಾನತೆ ವಿವರಿಸಲು ಪ್ರೊ. ಅಮರ್ತ್ಯ ಸೇನ್ ಬ್ರಿಟನ್ನಿನಿಂದ ಒಂದು ಸ್ವಾರಸ್ಯಕರವಾದ ಉದಾಹರಣೆ ಕೊಟ್ಟಿದ್ದಾರೆ. ಎರಡು ದಶಕಗಳ ಹಿಂದೆ ಇಂಗ್ಲಿಷ್ ದೂರದರ್ಶನದಲ್ಲಿ ಎಸ್ ಮಿನಿಸ್ಟರ್ ಎನ್ನುವ ಹಾಸ್ಯಪ್ರಧಾನ ಕಥಾಮಾಲಿಕೆ ಪ್ರಸಾರವಾಗುತ್ತಿತ್ತು. ಸುಧಾರಣಾ ಮನೋಭಾವದಿಂದ ಮಂತ್ರಿಯು ತನ್ನ ಶಾಶ್ವತ ಕಾರ್ಯದರ್ಶಿ ಸರ್ ಹಂಫ್ರಿಯನ್ನು ಬ್ರಿಟಿಷ್ ನಾಗರಿಕ ಸೇವೆಯ ಹಿರಿಯ ಹುದ್ದೆಗಳಲ್ಲಿ ನಿಜವಾಗಿ ಎಷ್ಟು ಮಂದಿ ಮಹಿಳೆಯರಿದ್ದಾರೆಂದು ತಿಳಿಯಬಯಸುವರು. ಈ ವಿಷಯದಲ್ಲಿ ಸ್ಪಷ್ಟ ಸಂಖ್ಯೆ ನೀಡುವುದು ಕಷ್ಟ. ಅದಕ್ಕಾಗಿ ಕೂಲಂಕಷ ಪರಿಶೀಲನೆ ಆಗಬೇಕೆಂದು ಸರ್ ಹಂಫ್ರಿ ಉತ್ತರಿಸುತ್ತಾರೆ. ಆದರೆ ಮಂತ್ರಿಯು ತನ್ನ ಪ್ರಶ್ನೆಯನ್ನು ಒತ್ತಿ ಹೇಳುತ್ತ ಹಿರಿಯ ಹುದ್ದೆಗಳಲ್ಲಿರುವ ಸರಿಸುಮಾರು (Approximate) ಸಂಖ್ಯೆ ಎಷ್ಟೆಂದು ತಿಳಿಯಬಯಸುವರು. ಆಗ ಉಪಾಯ ಕಾಣದೆ ಸರ್ ಹಂಫ್ರಿಯು ಕೊನೆಯದಾಗಿ ಹೀಗೆ ಮರು ಉತ್ತರ ನೀಡುವರು 'ಸರಿಸುಮಾರು ಯಾರೂ ಇಲ್ಲ'.[೩೩]

### ೨.೨೧ ಮಾಲಿಕತ್ವ ಅಸಮಾನತೆ–ನಿರ್ಲಕ್ಷೆ

ಬಹುತೇಕ ಸಮಾಜಗಳಲ್ಲಿ ಆಸ್ತಿ ಮಾಲೀಕತ್ವ ಕೂಡಾ ಹೆಚ್ಚು ಅಸಮಾನವಾಗಿಯೇ ಇದೆ. ಮೂಲಭೂತ ಆಸ್ತಿಗಳಾದ ಮನೆ ಮತ್ತು ಭೂಮಿ ಕೂಡಾ ವ್ಯಾಪಕವಾಗಿ ಅಸಮಾನವಾಗಿ ಹಂಚಿಕೆಯಾಗಿವೆ. ಈ ಆಸ್ತಿಗಳಲ್ಲಿ ಮಹಿಳೆಗೆ ಪಾಲು ನಗಣ್ಯವೆನ್ನುವಂಥ ಪರಿಸ್ಥಿತಿಯಿದೆ. ಆಸ್ತಿ ಹಕ್ಕುಗಳಿಲ್ಲದಿರುವಿಕೆಯು ಮಹಿಳೆಯ ದನಿಯನ್ನು ದುರ್ಬಲಗೊಳಿಸಿ ಕಡಿಮೆ ಮಾಡುವುದಲ್ಲದೆ, ವಾಣಿಜ್ಯ, ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಮಹಿಳೆಯರು ಪ್ರವೇಶಿಸಿ, ಊರ್ಜಿತವಾಗುವುದನ್ನು ವಾಸ್ತವದಲ್ಲಿ ಕಠಿಣಗೊಳಿಸುತ್ತದೆ. ಈ ವಿಷಯದಲ್ಲಿ ಸ್ಥಳೀಯ ವ್ಯತ್ಯಾಸಗಳಿದ್ದರೂ ಮಹಿಳೆಗೆ ಆಸ್ತಿ ನಿರಾಕರಣೆ ಹಾಗೂ ಆಸ್ತಿ ಹಂಚಿಕೆ ಅಸಮಾನತೆಯು ವಿಶ್ವದಾದ್ಯಂತ ಬಹುಮಟ್ಟಿಗೆ ಅಸ್ತಿತ್ವದಲ್ಲಿತ್ತು ಮತ್ತು ಈಗಲೂ ಇದೆ. ಉದಾ: ಭಾರತದ ಬಹುತೇಕ ಕಡೆಗಳಲ್ಲಿ ಸಾಂಪ್ರದಾಯಿಕ ಆಸ್ತಿ ಹಕ್ಕುಗಳು ಪುರುಷರ ಪರವಾಗಿಯೇ ಇದೆ. ಆದರೆ ಕೇರಳ ರಾಜ್ಯದ ಪ್ರಭಾವಶಾಲಿ ಸಮುದಾಯದ ನಾಯರುಗಳಲ್ಲಿ ಆಸ್ತಿ ಹಕ್ಕು ಅನುವಂಶೀಯವಾಗಿ ಮಾತೃಪ್ರಧಾನವಾಗಿದ್ದು, ಮಹಿಳೆಗೆ ದೊರಕುತ್ತಿತ್ತು. ಇಂಥ ಮಹಿಳಾ ಆಸ್ತಿ ಹಕ್ಕು ಅನುವಂಶೀಯತೆಯನ್ನು ಕರ್ನಾಟಕ ರಾಜ್ಯದ ಇಂದಿನ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಬಂಟರು ಮತ್ತು ಪೂಜಾರಿ ಎಂಬ ಭೂಮಾಲೀಕ ಹಾಗೂ ಗೇಣೀದಾರ (ಹಿಂದೆ) ಸಾಮಾಜಿಕ ವರ್ಗಗಳಲ್ಲೂ ಕಾಣಬಹುದಾಗಿದೆ.[೩೪]

### ೨.೨೨ ಕುಟುಂಬ ಅಸಮಾನತೆ- ನಿರ್ಲಕ್ಷೆ

ಕುಟುಂಬದೊಳಗೆ ಲಿಂಗ ಸಂಬಂಧಗಳಲಿ ಮೂಲಭೂತ ಅಸಮಾನತೆಗಳು ಸರ್ವೇ ಸಾಮಾನ್ಯವಾಗಿದ್ದು, ಅವುಗಳು ಅನೇಕ ರೂಪ ತಳೆಯುತ್ತವೆ. ಶಿಶು ಬದುಕುಳಿಯುವ ಸಾಧ್ಯತೆ ಅಥವಾ ಪುತ್ರ ಒಲವು ಅಥವಾ ಶಿಕ್ಷಣ ಅಥವಾ ಉನ್ನತ ಎಕ್ಸಿಕ್ಯೂಟಿವ್ ಹುದ್ದೆಗಳಿಗೆ ಮಹಿಳೆಯರ ಪ್ರವೇಶ ಮುಂತಾದ ಮಹಿಳಾ ವಿರೋಧಿ ಪೂರ್ವಾಗ್ರಹವಿಲ್ಲದಿರುವೆಡೆಗಳಲ್ಲೂ, ಮನೆಗೆಲಸ ಮತ್ತು ಮಕ್ಕಳ ಲಾಲನೆಪಾಲನೆ ಜವಾಬ್ದಾರಿಗಳನ್ನು ಹಂಚಿಕೊಳ್ಳುವುದರಲ್ಲಿ ಅಸಮಾನತೆಗಳಿವೆ. ಅನೇಕ ಸಮಾಜಗಳಲ್ಲಿ ಪುರುಷನು ಕುಟುಂಬದ ಹೊರಗೆ ದುಡಿಯುವುದು ಹಾಗೂ ಮಹಿಳೆಯು ಸ್ವ ಇಚ್ಛೆಯಿಂದ ಹೊರಗೆ ದುಡಿಯುವುದನ್ನು ಹಾಗೂ ಎಂದೆಂದಿಗೂ ತಪ್ಪಿಸಿಕೊಳ್ಳಲಾಗದ ಮತ್ತು ಅಸಮಾನವಾಗಿ ಹಂಚಿಕೆಯಾದ ಕುಟುಂಬದ ಕರ್ತವ್ಯಗಳನ್ನು ನಿರ್ವಹಿಸುವುದಾದರೆ ಮಾತ್ರ, ಆಕೆ ಮಾಡಿಕೊಳ್ಳಬಹುದಾಗಿದೆ. ಇದನ್ನು ಕೆಲವೊಮ್ಮೆ ಶ್ರಮ ವಿಭಜನೆ ಎಂದು ಕರೆಯಲಾಗುತ್ತದೆ. ಆದರೆ ಇದನ್ನು ಮಹಿಳಾವಾದಿಗಳು "ಶ್ರಮದ ಸಂಚಯವೆಂದೇ"(Accumulation of Capital) ಕರೆಯುವರು. ಈ ಅಸಮಾನತೆಯು ಕುಟುಂಬದೊಳಗಿನ ಅಸಮಾನ ಸಂಬಂಧಗಳನ್ನು ಮಾತ್ರವಲ್ಲದೆ, ಅವುಗಳಿಂದ ಮೂಡಿಬರುವ ಉದ್ಯೋಗ ಮತ್ತು ಹೊರಗಿನ ವಿಶ್ವದ ಮಾನ್ಯತೆ ಅಸಮಾನತೆಗಳನ್ನೂ ಒಳಗೊಳ್ಳುವುದು. ಅಲ್ಲದೆ ಈ ಬಗೆಯ ಶ್ರಮ ವಿಭಜನೆ ಅಥವಾ ಸಂಚಯ ಕೂಡಾ ವೃತ್ತಿ ವರ್ತುಲಗಳಲ್ಲಿ ಮಹಿಳೆಯ ವಿಭಿನ್ನ ದುಡಿಮೆಗಳಿಗೆ ಸಂಬಂಧಿಸಿದ ಜ್ಞಾನ ಮತ್ತು ಗ್ರಹಿಕೆ ಬಗೆಗೆ ದೂರಗಾಮಿ ಪರಿಣಾಮಗಳನ್ನು ಉಂಟುಮಾಡುವುದು.[೩೫]

ಕಳೆದ ೫೫ವರ್ಷಗಳಿಂದೀಚೆಗೆ ಮಹಿಳೆಯರ ಸ್ಥಾನಮಾನದಲ್ಲಿ ಬದಲಾವಣೆಗಳನ್ನು ತರಲು ಸಿಮೋನ್ ದ ಬೇವೂರವರ ವಿಚಾರಗಳು ಸಮಂಜವಾಗಿದೆ (ಕ್ರಿ.ಶ. ೧೯೦೮-೧೯೮೬). ಈಕೆಯ The Second Sex (೧೯೪೯)ಗ್ರಂಥವು ಮಹಿಳೆಯಾಗುವ ದಿಸೆಯಲ್ಲಿ ಸಾಮಾಜೀಕರಣವು (Socialisation) ಬೀರುವ ಪ್ರಭಾವವನ್ನು ವಿವರಿಸುವುದು. ಈಕೆ ಪ್ರಸಿದ್ಧ ಫ್ರೆಂಚ್ ತತ್ವಜ್ಞಾನಿ ಮತ್ತು ಕಲಾವಿದ ಜೀನ್ ಪೌಲ್ ಸಾತ್ರೆಗೆ ನಿಕಟವರ್ತಿಯಾಗಿದ್ದಳು. ಹೀಗಾಗಿ ಬೇವೂರಳ ಮಹಿಳೆ ಕುರಿತ 'ಪುರುಷನ ಇನ್ನೊಂದು ಮುಖ ಭಾಗ' ('Woman' as the other of Man') ಎನ್ನುವ ಚಿಂತನೆಗಳು ಅಸ್ತಿತ್ವವಾದಿ ತತ್ವಶಾಸ್ತ್ರದ (Existentialist Philosophy) ಮಹಿಳೆಯರು ತಾವೇ ಪ್ರಶ್ನಿಸದೆಯೇ ಪುರುಷನಿಗೆ ಅಧೀನಗೊಳ್ಳುವ ಸ್ವರೂಪಗಳನ್ನು ಮುಂದುವರಿಸುತ್ತಾರೆಂದು ಮೊತ್ತಮೊದಲಿಗೆ ಹೇಳಿದವಳೇ Simone de Beauvor ಆಗಿದ್ದಾಳೆ. ಈಕೆ ರಾಜಕಾರಣದಲ್ಲಿ ಮಹಿಳೆ ಪಾತ್ರ ಕುರಿತಂತೆ ವಿವರಿಸಿದ್ದಾಳೆ. ಈ ವಿಚಾರವು ಮಹಿಳಾ ಉದ್ಧಾರದ ಸಂಘಟನೆಗಳಲ್ಲಿ ಮಹಿಳೆಯರ ಸಾಮೂಹಿಕತ್ವದ ಪಾತ್ರ ಮತ್ತು ಮಹತ್ವವನ್ನು ತಿಳಿಸುತ್ತದೆ.[೩೬]

ಸಿಮೋನ್‌ದ ಬೇವೂರ ಅವರ ಪ್ರಕಾರ ಪಿತೃಪ್ರಧಾನತೆಯಡಿಯಲ್ಲಿ ಮಹಿಳೆಯು 'ಇತರೆ'ಆಗುವಳು; "ಆದರೆ ಈ ಇತರೆ ಮಹಿಳೆಯಾಗಿ ಹುಟ್ಟಿದವಳಲ್ಲ; ಆದರೆ ಮಹಿಳೆಯು ರೂಪುಗೊಳ್ಳುವಳು".

ವಿಭಿನ್ನಲಿಂಗಗಳ ನಡುವಣ ಸಂಬಂಧದಲ್ಲಿ, ಮಹಿಳೆಯರು ಸಂರಚನಾ ಮತ್ತು ಗರಿಷ್ಠ ಅರ್ಥದಲ್ಲಿ 'ಇತರೆ' ಆಗುವರು. ಇದೇ ವೇಳೆ ಪುರುಷರು ಸ್ವಂತದ (Self) ಸ್ಥಾನಮಾನ ಪಡೆಯುವರು; ಆದ್ದರಿಂದ, ಪುರುಷರು ವ್ಯಕ್ತಿನಿಷ್ಠ (Subject)ಆಗುವರು. ಯಥಾಸ್ಥಿತಿಯನ್ನು ಮುಂದುವರೆಸಲು ಪುರುಷರು ಅಪಾರವಾದ ಅನುಕೂಲತೆ ಹೊಂದಿದ್ದಾರೆ; ಮತ್ತು ಬದಲಾವಣೆಗಾಗಿ ಸುದೀರ್ಘಕಾಲದಿಂದ ಕಾಯುತ್ತಿರುವ ಮಹಿಳೆಯರು ಏಕತೆ ಪ್ರದರ್ಶಿಸಬೇಕು. ಮಹಿಳೆಯೋರ್ವಳು ವ್ಯಕ್ತಿನಿಷ್ಠತೆಯನ್ನು ಚಲಾಯಿಸಲು ಆಕೆಯ ಸ್ತ್ರೀತ್ವವನ್ನು ನಿರಾಕರಿಸಬೇಕು, ಹೀಗಾಗಿ, ಸಿಮೋನ್ ದ ಬೇವೂರಳು ಮಹಿಳೆಯರು ಸಮಾಜವಾದದ ಪ್ರಕಾರ ವಸ್ತುನಿಷ್ಠ ಸ್ಥಿತಿಯಿಂದ ಮಹಿಳೆಯರು ಮುಕ್ತಗೊಳ್ಳಬೇಕು, ಆದರೆ ಸಮಾಜವಾದಿ ದೇಶಗಳಲ್ಲಿ ಮಹಿಳೆಯರ ಸ್ಥಿತಿಗತಿಯೇನೂ ಗಣನೀಯವಾಗಿ ಉತ್ತಮಗೊಂಡಿಲ್ಲ ಎನ್ನುವುದು ಬೇವೂರಳ ಆರೋಪ. ಈ ಕುರಿತು ಆಕೆಗೆ ನೋವಾಗಿತ್ತು. ಆದ್ದರಿಂದ ಮಹಿಳಾ ವಿಮೋಚನೆಯನ್ನು ಸಾಧಿಸಲು ಸ್ವತಂತ್ರವಾದ ರಾಜಕೀಯ–ಮಹಿಳಾವಾದಿ ಅಂದೋಳನ ಅಗತ್ಯವೆಂದು ಬೇವೂ ಪ್ರತಿಪಾದಿಸಿದ್ದಾರೆ.[೩೭]

**೨.೨೩ ಸಮಾಜವಾದಿ ತತ್ವದಲ್ಲಿ ಮಹಿಳೆ–ನಿರ್ಲಕ್ಷ್ಯ**

ಮಹಿಳಾ ಪರಾಧೀನತೆ ಸಮಸ್ಯೆಯು ಮತ್ತು ಮಹಿಳಾ ವಿಮೋಚನೆ ಅಗತ್ಯವನ್ನು ಹತ್ತೊಂಬತ್ತನೆಯ ಶತಮಾನದ ಎಲ್ಲಾ ಮಹಾನ್ ಸಮಾಜವಾದಿ ಚಿಂತಕರು ಮಾನ್ಯ ಮಾಡಿದ್ದಾರೆ. ಇದು ಕ್ರಾಂತಿಕಾರಿ ಆಂದೋಲನದ ಸಾಂಪ್ರದಾಯಿಕ ಪರಂಪರೆಯ ಭಾಗವಾಗಿದೆ. ಹೀಗಿದ್ದೂ ಇಂದು ಪಶ್ಚಿಮದಲ್ಲಿ ಸಮಾಜವಾದಿಗಳ ಕಾಳಜಿಗಳಲ್ಲಿ ಅದೃಶ್ಯಕಾರಿ ಅಂಶವಾಗುವುದು. ಆದರದು ಉಪ ಅಥವಾ ಅಧೀನ ಸಮಸ್ಯೆಯಾಗಿದೆ. ಈ ಸಮಸ್ಯೆಯನ್ನು ಮರೆಯಲು ಪಶ್ಚಿಮದ ಸಮಾಜಗಳು ಬಹಳ ಆಸಕ್ತಿ ತೋರಿವೆ. ಈ ಸಂಬಂಧದಲ್ಲಿ ಪೀಟರ್ ಟೌನ್‌ಸಂಡ್ ಅವರ ವಿಚಾರವು ಮಹತ್ವದ್ದಾಗಿದೆ.

"ಸಾಂಪ್ರದಾಯಿಕ ಸಮಾಜವಾದಿಗಳು ಕುಟುಂಬವನ್ನು ಉಪೇಕ್ಷಿಸಿದ್ದಾರೆ ಅಥವಾ ಅವರು ಕುಟುಂಬವನ್ನು ಉದ್ದೇಶವಾಗಿ ದುರ್ಬಲಗೊಳಿಸಲೆತ್ನಿಸಿದರು. ಈ ಕುರಿತು ಸಾಂಪ್ರದಾಯಿಕ ಸಮಾಜವಾದಿಗಳು ಸ್ವಸಂಬಂಧಿ ಮೋಹವನ್ನು ಮತ್ತು ನಿರ್ಬಂಧಗಳನ್ನು ವ್ಯಕ್ತಿಗತ ಕುಟುಂಬ ಸಂಬಂಧಗಳ ಮೇಲೆ ಆರೋಪಿಸಿದರು. ಕುಟುಂಬವನ್ನು ಹೊರತುಪಡಿಸಿದ ಸಮಾಜವನ್ನು ಸೃಷ್ಟಿಸುವ ಪ್ರಯತ್ನಗಳು ಅಸಹಜವಾಗಿದ್ದು ಗಂಭೀರವಾಗಿ ವಿಫಲವಾದವು. ಸಮಾಜವಾದಿಯೋರ್ವನು ತನ್ನ ಸಹೋದ್ಯೋಗಿಯನ್ನು "ಸಹೋದರನೆಂದು" ಸಂಬೋಧಿಸುವನು. ಮತ್ತು ಸಮತಾವಾದಿಯು "ಕಾಮ್ರೇಡ್" ಎಂಬ ಪದವನ್ನು ಬಳಸುತ್ತಾನೆ. ಜೀವನದಲ್ಲಿ ಸಂತೃಪ್ತಿಗೊಳಿಸಲು ವ್ಯಕ್ತಿಯು ಕುಟುಂಬದ ಸದಸ್ಯನಾಗಿರಬೇಕು ಮತ್ತು ಕುಟುಂಬದ ಪ್ರಜನನದಲ್ಲಿ ತೊಡಗಿರಬೇಕು. ಈ ಸತ್ಯವನ್ನು ಮರೆಮಾಚುವುದರಿಂದ ಏನೂ ಲಾಭವಿಲ್ಲ."

ದಲಿತ ಮಹಿಳೆಯರು ಭಾರತದ ಜಾತಿ, ವರ್ಗ ಮತ್ತು ಲಿಂಗ ಶ್ರೇಣೀಕರಣದಲ್ಲಿ ತಳಮಟ್ಟದಲ್ಲಿ ಸ್ಥಾನೀಕರಿಸಲ್ಪಟ್ಟಿದ್ದಾರೆ. ದಲಿತ ಮಹಿಳೆಯರು ಬಹುತೇಕವಾಗಿ ಅವಿದ್ಯಾವಂತರು ದಲಿತ ಮಹಿಳೆಯರಿಗೆ ದಲಿತ ಪುರುಷ ಕಾರ್ಮಿಕರಿಗಿಂತ ಕಡಿಮೆ ಕೂಲಿಯನ್ನು ಯಾವಾಗಲೂ ಪಾವತಿಸಲಾಗುವುದು. ದಲಿತ ಮಹಿಳೆಯರು ಭೂರಹಿತ ಕಾರ್ಮಿಕರ ಪೈಕಿ ಒಂದು ಅಲ್ಪಸಂಖ್ಯಾತ ವರ್ಗವಾಗಿದ್ದಾರೆ. ದಲಿತ ಮಹಿಳೆಯರಲ್ಲಿ ಕೆಲವರು ಝಾಡಮಾಲಿ (ನೈರ್ಮಲ್ಯ ಕಾರ್ಮಿಕರು)ಗಳಾಗಿದ್ದಾರೆ; ಅಲ್ಲದೆ ಸಾಕಷ್ಟು ಸಂಖ್ಯೆಯಲ್ಲಿ ದಲಿತ ಮಹಿಳೆಯರನ್ನು ಗ್ರಾಮೀಣ ಪ್ರದೇಶಗಳಲ್ಲಿ ವೈಭಿಚಾರಕ್ಕಿಳಿಸಲಾಗಿದೆ ಅಥವಾ ಅವರನ್ನು ನಗರಗಳ ವೇಶ್ಯಾವಾಟಿಕೆಗಳಿಗೆ ಮಾರಾಟ ಮಾಡಲಾಗಿದೆ. (Human Rights Watch, ೧೯೯೯, ೧೬೬).

ದಲಿತ ಮಹಿಳೆಯರನ್ನು ದಮನಿತರ ಪೈಕಿ ದಮನಿತರೆಂದು ಕರೆಯಲಾಗುವುದು. ಯಾವುದೇ ದಲಿತ ಮಹಿಳಾ ವೇದಿಕೆಯಲ್ಲಿ ಪದೇ ಪದೇ ಚರ್ಚಿಸಲ್ಪಡುತ್ತಿರುವ ವಿಷಯವೆಂದರೆ ಅವರು ಜಾತಿಯಿಂದ ಅಥವಾ ಲಿಂಗ ನೆಲೆಯಲ್ಲಿ ಶೋಷಿಸಲ್ಪಡುತ್ತಿರುವರೇ? ಎನ್ನುವುದಾಗಿದೆ. ಈ ಪ್ರಶ್ನೆಗೆ ದೊರಕುವ ಉತ್ತರವು ಅವರ ಸಂಘಟನೆಯ ಸ್ವರೂಪವನ್ನು ಪ್ರಭಾವಿಸುವುದು. ಜಾತಿ ಆಕ್ರಮಣಶೀಲತೆಯನ್ನು ಒತ್ತಿ ಹೇಳುವವರು ಜಾತಿ ವಿರೋಧಿ ಆಂದೋಳನಗಳು ಬೇಕೆನ್ನುವರು; ಈ ಜಾತಿ ವಿರೋಧಿ ಆಂದೋಲನಗಳಿಗೆ ಹೆಚ್ಚು ಸಮಾನವಾದ ಸಮಾಜಕ್ಕಾಗಿ ಹೋರಾಡುತ್ತಿರುವ ಎಲ್ಲಾ ತಳ ಜಾತಿಗಳ ಸದಸ್ಯರನ್ನೂ ಒಳಗೊಳ್ಳಬೇಕು. ತಮ್ಮ ಅಧೀನತೆಯನ್ನು ಲಿಂಗ ರೂಪಗಳಲ್ಲಿ ಪರಿಭಾವಿಸುವವರ ಪಾಲಿಗೆ ಪಿತೃಪ್ರಧಾನವಾದ ಪ್ರಾಧಿಕಾರ ಸಂರಚನೆಗಳನ್ನು ನಿರ್ಬಂಧಿಸಲು ಎಲ್ಲಾ ವಿಭಿನ್ನ ವರ್ಗಗಳ ಮತ್ತು ವಿಭಿನ್ನ ಜಾತಿ ಹೊಂದಾಣಿಕೆಗಳ ಮಹಿಳೆಯರನ್ನು ಒಟ್ಟುಸೇರಿಸಬೇಕು.[೩೮]

ದಲಿತರು ಸದಾಕಾಲ ಭಯದಲ್ಲಿ ಜೀವಿಸುವರು. ದಲಿತರಿಗೆ ಯಾವುದೇ ಪ್ರಾಧಿಕಾರವಿಲ್ಲ ಮತ್ತು ಅವರು ಸಂಪನ್ಮೂಲಗಳ ಕೊರತೆ ಎದುರಿಸುವರು. ದಲಿತರ ಬದುಕು ಬಹಳ ಸಂಕಷ್ಟಗಳಿಂದ ಕೂಡಿರುವುದು. ಅವುಗಳು ದಲಿತ ಮಹಿಳೆಯರ ಪಾಲಿಗೆ ಕೆಲವೊಮ್ಮೆ ಮಾರಣಾಂತಿಕವಾಗಿರುತ್ತವೆ. ಹೀಗಾಗಿ ದಲಿತರು ಗೊಣಗಿಕೊಂಡೇ ಅಭದ್ರ, ಅಪಮಾನಕಾರಿ ಸ್ಥಾನಮಾನವನ್ನು ಒಪ್ಪುವರು. ಹೀಗೆ ಜಾತಿ ನೆಲೆಯ ತಾರತಮ್ಯಗಳು ಮುಂದುವರಿಯುತ್ತವೆ.[೩೯]

ಸಾಮಾಜಿಕ ನಿಷೇಧಗಳು ದಲಿತ ಮಹಿಳೆಯರಿಗೆ ಅವರ ಶ್ರಮವನ್ನು ನಿರಾಕರಿಸುತ್ತವೆ. ಮತ್ತು ಮಕ್ಕಳನ್ನು ಮನೆಯಲ್ಲಿ ಉಳಿಯುವಂತೆ ಮಾಡುವುದು ಹಾಗೂ ಮಹಿಳೆಯರಿಗೆ ಸಿಹಿಯಾದ ಕುಡಿಯುವ ನೀರನ್ನು ಪಡೆಯುವುದು ಕೂಡಾ ಒಂದು ಹರಸಾಹಸವಾಗುವುದು. ಜಾತಿಗಳ ನಡುವಣ ವಿದ್ವೇಷವು ಮಹಿಳೆಯರಿಗೆ ಹೆಚ್ಚು ಭಯತರುವುದು. ಅವರು ಸದಾ ಕ್ರೌರ್ಯ ಮತ್ತು ಭಯದ ನೆರಳಿನಲ್ಲಿ ಬದುಕುವಂತೆ ಮಾಡುವುದು. ದಲಿತ ಮಹಿಳೆಯರು ಇತರೆ ಜಾತಿಗಳಿಗಾಗಿ ದುಡಿಯುವರು ಅಥವಾ ದಲಿತ ಮಹಿಳೆಯರು ಮನೆಯಲ್ಲಿ ದುಡಿಯುವಾಗ, ಅವರ ಪುರುಷರು ಬೇರೆಲ್ಲೋ ದುಡಿಯುತ್ತಿರುತ್ತಾರೆ. ಅತ್ಯಾಚಾರ ಮತ್ತು

ಲೈಂಗಿಕ ದೌರ್ಜನ್ಯಗಳಿಗೆ ಬಲಿಯಾಗುವ ಸಾಧ್ಯತೆಗಳು ಎಲ್ಲೆಡೆ, ಎಲ್ಲಾ ಕಾಲದಲ್ಲೂ ಇರುತ್ತವೆ. ದಲಿತ ಮಹಿಳೆಯರನ್ನು ದುಡಿಮೆ ಸ್ಥಳಗಳಲ್ಲಿ ಮಾಲೀಕರು ಶೋಷಿಸುತ್ತಾರೆ ಮತ್ತು ಕೆಟ್ಟದಾಗಿ ಬೈಯ್ಯುವರು ಈ ಅಸಮಾನತೆಗಳ ಪರಿಣಾಮವಾಗಿ, ದಲಿತ ಮಹಿಳೆಯರು ಸಮಾನತೆ ಸಮಾಜದ ಅಪೇಕ್ಷೆ ವ್ಯಕ್ತಪಡಿಸುವರು.

ಒಟ್ಟಿನಲ್ಲಿ ವರ್ಗ, ಜಾತಿ ಮತ್ತು ಲಿಂಗವು ದಮನದ ಸಾಧನಗಳೇ ಹೌದು. ಗಡಿಗಳನ್ನು ಜನರು ಜಾತಿವ್ಯವಸ್ಥೆ ಮೂಲಕ ಗುರುತಿಸಿಕೊಳ್ಳುವರು. ದಲಿತರು ಮತ್ತು ಮಹಿಳೆಯರು ಶೋಷಿತ ಕಾರ್ಮಿಕರೇ ಆಗಿದ್ದಾರೆ.[೪೦]

**೨.೨೪ ಪಿತೃಪ್ರಧಾನತೆ–ನಿರ್ಲಕ್ಷೆ**

ಪಿತೃಪ್ರಧಾನತೆ ಕುರಿತು ವ್ಯಾಲೆಮಟೈನ್ ಮೋಗ್ಧಮ್ (೧೯೯೨) , ಮನ್ (೧೯೮೬), ಲರ್ನರ್ (೧೯೮೬), ಕಾಲ್ಡ್‌ವೆಲ್ (೧೯೮೨), ಗಿಯೆಲೆ (೧೯೭೭) ಮತ್ತು ಕ್ಯಾಂಡಿಯೋತಿ (೧೯೮೮) ಮುಂತಾದವರು ಅಧ್ಯಯನ ನಡೆಸಿದ್ದಾರೆ. ಪಿತೃಪ್ರಧಾನತೆ ಕುರಿತು ಮನ್ ಅವರು ಐತಿಹಾಸಿಕ ಮತ್ತು ವಿಭಿನ್ನ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಅಭಿವೃದ್ಧಿ ಮತ್ತು ಮಹಿಳಾ ಸ್ಥಾನಮಾನ ನಡುವಣ ಸಂಬಂಧದ ಕುರಿತು ವಿಶ್ಲೇಷಿಸಿದ್ದಾರೆ. ಐದು ಬಗೆಯ ಸೂಕ್ಷ್ಮ ಘಟಕಗಳ ಅಂತರ್ ಸಂಬಂಧಗಳನ್ನು ಮನ್ ವಿಶ್ಲೇಷಿಸಿದ್ದಾರೆ; ಇತ್ತೀಚಿನ ವರ್ಷಗಳಲ್ಲಿ ಐದು ಸಾಮೂಹಿಕ Actors ಲಿಂಗ ಮತ್ತು ಶ್ರೇಣೀಕರಣ ಸಂಬಂಧಗಳ ಮೇಲೆ ಗಾಢ ಪ್ರಭಾವ ಬೀರಿವೆ. ಅವುಗಳಾವುವೆಂದರೆ ಸೂಕ್ಷ್ಮ 'ವ್ಯಕ್ತಿ' (ಇದು ಉದಾರವಾದಿ ಪಾಶ್ಚಿಮಾತ್ಯ ಸಮಾಜಕ್ಕೆ ಹೆಚ್ಚು ಸೂಕ್ತ); ಮನೆ/ಕುಟುಂಬ/ ವಂಶಪಾರಂಪರ್ಯತೆ ನಡುವಣ ಅಂತರ್ ಸಂಬಂಧಗಳ ಜಾಲ. ಲಿಂಗಗಳು (ಪುರುಷ ಮತ್ತು ಸ್ತ್ರೀಲಿಂಗಗಳಿಗೆ ಸಾಮಾಜಿಕ ಶಕ್ತಿ ಮಹತ್ವ ನೀಡಲಾಗುವುದು), ಸಾಮಾಜಿಕ ವರ್ಗಗಳು ಸಾಮಾಜಿಕ ವರ್ಗಗಳು ರಾಷ್ಟ್ರಗಳು ಮತ್ತು ರಾಷ್ಟ್ರೀಯ ಸರ್ಕಾರಗಳು. ಪಿತೃ ಪ್ರಧಾನ ಸಮಾಜದಲ್ಲಿ ಪ್ರಾಧಿಕಾರವನ್ನು ಕುಟುಂಬಗಳ ಪುರುಷ ಮುಖ್ಯಸ್ಥರು ಹೊಂದಿರುವರು. ಇಲ್ಲಿ ಜೀವನವನ್ನು ಸಾರ್ವಜನಿಕ ಮತ್ತು ಖಾಸಗಿ ವಲಯವೆಂದು ವರ್ಗೀಕರಿಸಲಾಗುತ್ತದೆ. ಸಾರ್ವಜನಿಕ ವಲಯದಲ್ಲಿ ಪ್ರಾಧಿಕಾರವು ಇತರೇ ಶ್ರೇಣೀಕರಣ ಸೂತ್ರಗಳು ಕಾರ್ಯಾಚರಣೆ ಮಾಡುವಾಗ ಪುರುಷ ಪಿತೃ ಪ್ರಧಾನರೇ ಹಂಚಿಕೊಳ್ಳುವರು. ಯಾವುದೇ ಮಹಿಳೆಯು ಸಾರ್ವಜನಿಕವಾಗಿ ಉನ್ನತ ಸ್ಥಾನವನ್ನು ಆರ್ಥಿಕ, ಆದರ್ಶತೆ, ಮಿಲಿಟರಿ ಅಥವಾ ರಾಜಕೀಯ ಸ್ಥಾನವನ್ನು ಅಲಂಕರಿಸಿಲ್ಲ. ವಾಸ್ತವದಲ್ಲಿ ಈ ಪ್ರಾಧಿಕಾರದ ಸಾರ್ವಜನಿಕ ವರ್ತುಲಕ್ಕೆ ಮಹಿಳೆಯನ್ನೂ ಪುರುಷರು ಸೇರಿಸುವುದಿಲ್ಲ. (ಅಂದರೆ ಹಿಂಸಾ ವಿಧಾನಗಳ ಮೇಲೆ ಪುರುಷರು ಏಕಸ್ವಾಮ್ಯ ಹೊಂದಿದ್ದಾರೆ. ಎನ್ನುವುದು ಪ್ರತ್ಯೇಕವಾಗಿ ಹೇಳಬೇಕಿಲ್ಲ). ಪುರುಷರು ಯಾವುದೇ ಮಹಿಳೆಗೆ ಔಪಚಾರಿಕವಾಗಿ ಪ್ರಾಧಿಕಾರ ಹೊಂದಲು ಬಿಡುವುದಿಲ್ಲ. ಆದ್ದರಿಂದ ಪುರುಷರು ತಮ್ಮ ಜೀವನದ ಆವರ್ತಗಳಲ್ಲಿ ಅಧಿಕಾರವನ್ನು ಮಹಿಳೆಯರಿಗೆ ಬಿಟ್ಟು ಕೊಡಲಿಚ್ಛಿಸುವುದಿಲ್ಲ. ಕುಟುಂಬದೊಳಗೆ ಮಹಿಳೆಯರು ಅನೌಪಚಾರಿಕವಾಗಿ ತಮ್ಮ

ಮಾತಾಪಿತೃಗಳ ಮೇಲೆ ಪ್ರಭಾವ ಬೀರಬಹುದು. ಆದರೆ ಇದು ಮಹಿಳೆಯರು ಅಧಿಕಾರಕ್ಕೆ ಪ್ರವೇಶ ಪಡೆಯಲು ಇರುವ ಏಕೈಕ ಸಾಧ್ಯತೆಯಾಗಿದೆ. ಪಿತೃಪ್ರಧಾನತೆಯೊಳಗೆ ಶ್ರೇಣೀಕರಣ ಕುರಿತಂತೆ ಎರಡು ಪ್ರಮುಖ ಘಟಗಳಿವೆ: ೧. ಕುಟುಂಬ/ಮನೆ/ ವಂಶಾವಳಿ ೨. ಪುರುಷ ಲಿಂಗದ ಆಕ್ರಮಣಶೀಲತೆ (Mann, ೧೯೮೬)

ಆದುದರಿಂದ ಸಾಮಾಜಿಕ ಶ್ರೇಣೀಕರಣವು ಎರಡು ಆಯಾಮದ್ದು ಆಗಿದೆ. ಮೊದಲ ಆಯಾಮವು ಎರಡು ಪುಟ್ಟ ಘಟಕಗಳನ್ನು ಅಂದರೆ ಕುಟುಂಬ/ಮನೆ/ವಂಶಾವಳಿ ಮತ್ತು ಪುರುಷ ಲಿಂಗದ ಆಕ್ರಮಣಶೀಲತೆಯನ್ನು ಒಳಗೊಳ್ಳುತ್ತದೆ. ಎರಡನೆಯ ಆಯಾಮವು ನಿರ್ದಿಷ್ಟ ಸಮಾಜವೊಂದರಲ್ಲಿ ಅಸ್ತಿತ್ವದಲ್ಲಿರುವ ಸಾರ್ವಜನಿಕ ಶ್ರೇಣೀಕರಣ ಘಟಕದ ಸಂಯೋಜನೆಯನ್ನು (ವರ್ಗಗಳು, ಸೇನಾ ಪ್ರತಿಷ್ಠಿತರು, ಇತ್ಯಾದಿ) ಈ ಪೈಕಿ ಎರಡನೆಯ ಆಯಾಮವು ಮೊದಲ ಆಯಾಮದೊಂದಿಗೆ ಬೆಸೆದಿವೆ. ಇಲ್ಲಿ ಸಾರ್ವಜನಿಕ–ಪ್ರಾಧಿಕಾರ ಗುಂಪುಗಳು ಕುಟುಂಬ/ಮನೆ/ವಂಶಾವಳಿ ಮುಖ್ಯಸ್ಥರ ಒಟ್ಟು/ಸಮಗ್ರ ಮೊತ್ತವನ್ನು ಪ್ರತಿನಿಧಿಸುತ್ತದೆ. ಆದರೆ ಈ ಸಂಗತಿಯ ಹೊರತಾಗಿ ಎರಡೂ ಆಯಾಮಗಳನ್ನು ಪರಸ್ಪರ ಪ್ರತ್ಯೇಕಿಸಬಹುದು.[೪೧]

### ೨.೨೫ ಅಲಕ್ಷಿತರ (ನಿರ್ಲಕ್ಷಿತರ) ಪರಿಕಲ್ಪನೆ ಮತ್ತು ವ್ಯಾಖ್ಯೆ

"ಸಮಾಜದ ಒಂದು ಗುಂಪು ಯಾವುದಾದರೂ ಕಾಣಗಳಿಂದಾಗಿ ಸಮಾಜದ ಅಂಚಿಗೆ ತಳ್ಳಲ್ಪಡುವ ಸಂದರ್ಭವನ್ನು ಅಲಕ್ಷೀಕರಣ ಎಂದು ಕರೆಯಬಹುದು" ವ್ಯಕ್ತಿಗಳ ಗುಣಾತ್ಮಕ ಬದುಕಿನ ಎಲ್ಲಾ ವಿಷಯಗಳಲ್ಲಿ ಅಲಕ್ಷೀಕರಣವು ಒಂದು ದುರಂತವಾಗಿ ಬಂದು ಅಪ್ಪಳಿಸುತ್ತದೆ. ಅಂತೆಯೇ ಸಮುದಾಯಗಳಿಗೆ ಇದೂ ಕೂಡ ಒಮದು ದುರಂತ. ಅಲಕ್ಷೀಕರಣವು ವಿವಿಧ ಸಮುದಾಯಗಳ ನಡುವೆ ಸಾಮಾಜಿಕ ಕಂದಕವನ್ನುಂಟುಮಾಡಿ ಸಾಮಾಜಿಕ ಐಕ್ಯತೆಗೆ ಧಕ್ಕೆ ತರುತ್ತದೆ. ಇದರಿಂದಾಗಿ ಸಾಮಾಜಿಕ ಸಮಗ್ರತೆಗೆ ಧಕ್ಕೆಯುಂಟಾಗುತ್ತದೆ. ಪರಿಣಾಮವಾಗಿ ಸಮುದಾಯಗಳು ಪರಸ್ಪರ ಸಹಕರಿಸದೆ ವಿರುದ್ಧ ದಿಕ್ಕಿನಲ್ಲಿ ಪ್ರತಿಕ್ರಿಯಿಸುತ್ತವೆ. ಇದರಿಂದಾಗಿ ಮಾನವ ಹಕ್ಕುಗಳ ಉಲ್ಲಂಘನೆಯಾದಂತಾಗಿ ಅವರ ಹಕ್ಕುಗಳನ್ನು ತೃಪ್ತಿಕರವಾಗಿ ಗೌರವಿಸಿದಂತಾಗುವುದಿಲ್ಲ. ಜೊತೆಗೆ ಸಮಾನತೆಯ ಅಸ್ಥಿತ್ವಕ್ಕೆ ಧಕ್ಕೆ ಬಂದು ಸಮಾಜ ಒಡೆದು ಚೂರು ಚೂರಾಗುವ ಸಂಭವವಿದ್ದು, ಜನರು ಬಡತನ ಮತ್ತು ಅಭದ್ರತೆಯಿಂದ ಬಳಲುವ ಸಂದರ್ಭವನ್ನು ಅಲಕ್ಷೀಕರಣದ ಜೊತೆ ಗುರುತಿಸಲಾಗಿದೆ.[೪೨]

#### ಅಲಕ್ಷೀಕರಣದ ಪ್ರಕ್ರಿಯೆ

ಅಲಕ್ಷೀಕರಣವು ಒಂದು ಸಾಮಾಜಿಕ ಪ್ರಕ್ರಿಯೆಯಾಗಿದೆ. ಇದು ಐತಿಹಾಸಿಕ ತಪ್ಪುಗಳಿಂದ ಉಂಟಾದ ಒಂದು ವಿದ್ಯಮಾನವಾಗಿದೆ. ಅಲಕ್ಷೀಕರಣದ ಪ್ರಕ್ರಿಯೆಯನ್ನು ಹೆಚ್ಚಿನದಾಗಿ ಅಸಮಾನತೆಗಳಿಂದ ಕೂಡಿದ

ಸಮಾಜಗಳಲ್ಲಿ ನೋಡುತ್ತೇವೆ. ಇಂತಹ ಅಸಮಾನತೆಗಳಿಂದ ಕೂಡಿದ ಸಮಾಜವು ಏಣಿ ಶ್ರೇಣಿಯ ಸಾಮಾಜಿಕ ಗುಂಪುಗಳನ್ನು ಕಡಿದಾದ ಅಥವಾ ತುಂಬಾ ಆಳವಾದ ರಚನೆಯಲ್ಲಿ ಜನರನ್ನು ಒಡೆದು, ಶಕ್ತರು ಮತ್ತು ಅಶಕ್ತರು ಎಂಬುದಾಗಿ ವಿಭಾಗಿಸುತ್ತದೆ. ಕಡಿಮೆ ಸಂಖ್ಯೆಯಲ್ಲಿರುವ ಶಕ್ತರು ತಮ್ಮ ಸರ್ವ ವಿಧದ ಬಲದಿಂದಾಗಿ ಮುಖ್ಯವಾಹಿನಿಯ ಅಥವಾ ಮುಖ್ಯ ಸಮಾಜದ ರಾಜಕೀಯ ಮತ್ತು ಆರ್ಥಿಕತೆಯನ್ನು ನಿರ್ಧರಿಸುತ್ತಾರೆ. ಇನ್ನೊಂದೆಡೆ ಇದೇ ರಚನೆ ಅಥವಾ ಏಣಿ ಶ್ರೇಣಿಯ ಮತ್ತು ಆರ್ಥಿಕತೆಯನ್ನು ನಿರ್ಧರಿಸುತ್ತಾರೆ. ಇನ್ನೊಂದೆಡೆ ಇದೇ ರಚನೆ ಅಥವಾ ಏಣಿ ಶ್ರೇಣಿಯ ಅತ್ಯಂತ ಕೆಳಸ್ಥರದಲ್ಲಿ ಬರುವ ಬಹುಸಂಖ್ಯಾತ ಅಧಿಕಾರ ವಂಚಿತರು, ಅಶಕ್ತರಾಗಿಯೇ ಸಾಮಾಜಿಕ ಮತ್ತು ಆರ್ಥಿಕವಾಗಿ ಕೆಳಸ್ಥರದಲ್ಲೇ ಉಳಿದುಬಿಡುತ್ತಾರೆ. ಸಾಮಾಜಿಕ ಕ್ರಮದ ಅಥವಾ ಶ್ರೇಣಿಯ ಅಂಚಿನಲ್ಲಿ ಬದುಕುಳಿದ ಇವರು ಸಹಜವಾಗಿ ಬದಕಲು ಹರಸಾಹಸ ಮಾಡುತ್ತಾರೆ.

ಈ ಒಂದು ಅಸಮಾನ ಅಧಿಕರದ ಹಂಚಿಕೆಯ ಪ್ರಕ್ರಿಯೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸಾಂಪ್ರದಾಯಿಕ ಮೌಲ್ಯಗಳು ಮತ್ತು ಆದರ್ಶ ತತ್ವಗಳು ಜೊತೆಗೆ ಇತರೆ ವೈಚಾರಿಕ, ಸಮಾಜದ ನ್ಯಾಯ ರಚನೆಯಿಂದ ಸಮ್ಮತಿಸಲ್ಪಟ್ಟಿದೆ. ಅಸಮಾನ ಅಧಿಕಾರದ ಹಂಚಿಕೆ ಮತ್ತು ಅಸಮಾನ ಪಾಲು ಪದ್ಧತಿ ನ್ಯಾಯ ಸಮ್ಮತಿಯನ್ನು ಪಡೆದುದರ ಜೊತೆಗೆ, ಬಹುಸಂಖ್ಯಾತ ಜನರು ತಮ್ಮ ಇರುವಿಕೆಯನ್ನು ಅಂದರೆ ಅಧೀನತೆಯ (subordination)ನ್ನು ಸಹಜ ಎಂದು ಒಪ್ಪಿಕೊಳ್ಳುವಂತೆ ಸಮರ್ಥನೆ ಅಥವಾ ಸಮಜಾಯಿಷಿಯನ್ನು ನೀಡಿದೆ. ಇದಲ್ಲದೆ ಈ ರೀತಿಯ ಸರ್ವ ವಿಧದ ಅಸಮಾನತೆಯನ್ನು ಪುನರ್ ನಿರೂಪಿಸಿ, ವಿಸ್ತರಿಸಿ, ಜೀವಂತವಾಗಿರಿಸಲು ಮತ್ತು ಅಲಕ್ಷೀಕರಣದ ಸಾಮಾಜಿಕ ನಿರ್ಮಾಣಕ್ಕೆ (Social Construction of Marginalization) ಅಸಮಾನತೆಯನ್ನು ಸಮರ್ಥಿಸುವ ಕೊಡುಗೆ ನೀಡಿದೆ. ಸಮಾಜದಲ್ಲಿ ಅಲಕ್ಷೀಕರಣ ನಿರ್ಮಾಣವಾಗಲು ಸಾಧ್ಯವಾಗಿದೆ. ಅಸಮಾನತೆಗೆ ಕಾರಣವಾದ, ಸಾಂಪ್ರದಾಯಿಕ ಮೌಲ್ಯಗಳು ವೈಚಾರಿಕವಾದವುಗಳೆಂದು ಭ್ರಮಿಸುವ ಮನಸ್ಸುಗಳು, ಸಿದ್ಧಾಂತಗಳು ಮತ್ತು ಕೆಲವು ಸಮರ್ಥನೆಗಳು ಸಮಾಜದಲ್ಲಿ ಕಂದಕವನ್ನು ನಿರ್ಮಿಸಿವೆ ಸಾಮಾಜಿಕ ಗುಂಪುಗಳನ್ನು ಎಂದೂ ಒಂದುಗೂಡದ ಹಾಗೆ ಮಾಡಿ, ಈ ಗುಂಪುಗಳ ಅಥವಾ ಸಂಸ್ಕೃತಿಗಳ ಮಧ್ಯೆ ಗೆರೆ ಅಥವಾ ಅಂಚನ್ನು ನಿರ್ಮಾಣ ಮಾಡಿ ಅವುಗಳು ಭದ್ರವಾಗುವಂತೆ ಮಾಡಿದೆ. ಗೆರೆ ಅಥವಾ ಅಂಚನ್ನು ದಾಟುವಾಗ ವ್ಯಕ್ತಿಗಳು ಅಥವಾ ಗುಂಪುಗಳು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅಸಮಾನತೆಯಿಂದ ಕೂಡಿದ ಎಲ್ಲಾ ತರಹದ ಅಧಿಕಾರವನ್ನು ಸಮರ್ಥಿಸುವ ಸಾಂಪ್ರದಾಯಿಕ ಸಮರ್ಥನೆ ಸಮಾಜದಲ್ಲಿ ಅಂಚನ್ನು ಅಥವಾ ಗೆರೆಯನ್ನು ಜೀವಂತವಾಗಿರಿಸಿ ಶಾಶ್ವತಪಡಿಸಲು ಯಾವಾಗಲೂ ಪ್ರಯತ್ನಿಸುತ್ತಿರುತ್ತದೆ. ಜೊತೆಗೆ ಅಲಕ್ಷೀಕರಣ ಒಂದು ಸಹಜ ಪ್ರಕ್ರಿಯೆ ಎಂದು ತನ್ನ ಆದರ್ಶವಾದದ ಮೂಲಕ ಪ್ರಚುರಪಡಿಸುತ್ತದೆ. ಇದರಿಂದಾಗಿ ಸಮಾಜದಲ್ಲಿ ವಿಭಿನ್ನ ಸಾಂಸ್ಕೃತಿಕ ಹಿನ್ನಲೆಯುಳ್ಳ ಸಾಮಾಜಿಕ ಗುಂಪುಗಳು ಸಮಾಜದ ಅಂಚಿನಿಂದ ಹೊರಗೆ

ಇರಬೇಕಾಗದ ಸಂದಿಗ್ಧ ಪರಿಸ್ಥಿತಿ ಉಂಟಾಗುತ್ತದೆ. ಯಾವುದೇ ಒಂದು ಸಮಾಜದ ಇತಿಹಾಸವನ್ನು ಬಗೆದು ನೋಡಿದರೆ ಅಸಮಾನತೆಯಿಂದ ಕೂಡಿದ ವ್ಯವಸ್ಥೆ ಕಂಡುಬರುತ್ತದೆ. ಜ್ವಲಂತ ನಿದರ್ಶನವೆಂದರೆ ಭಾರತೀಯ ಸಮಾಜದ ಜಾತಿ ಪದ್ಧತಿ.

**ಭಾರತದ ಸಂದರ್ಭದಲ್ಲಿ ಅಲಕ್ಷೀಕರಣ ಪ್ರಕ್ರಿಯೆ**

ಭಾರತದ ಸಂದರ್ಭದಲ್ಲಿ ಅಲಕ್ಷೀಕರಣ ಪ್ರಕ್ರಿಯೆ ಇತಿಹಾಸದುದ್ದಕ್ಕೂ ನಡೆದಿದೆ. ಇಲ್ಲಿನ ಅಲಕ್ಷೀಕರಣ ಪ್ರಕ್ರಿಯೆಯನ್ನು ಪ್ರಪಂಚದ ಇತರೆ ಯಾವುದೇ ಸಮಾಜಕ್ಕೆ ಹೋಲಿಸಲಾಗುವುದಿಲ್ಲ. ಅಂದರೆ ಭಾರತದಲ್ಲಿ ವ್ಯಕ್ತಿಗಳ ಮತ್ತು ಸಾಮಾಜಿಕ ಗುಂಪುಗಳ ಮೇಲೆ ಅಲಕ್ಷೀಕರಣ ಪ್ರಕ್ರಿಯೆಯ ಪ್ರಭಾವ ಅಪಾರವಾದುದು. ಭಾರತೀಯ ಸಮಾಜದಲ್ಲಿ ನಾವು ವಿಭಿನ್ನ ಸಂಸ್ಕೃತಿಯನ್ನು ಕಾಣುತ್ತೇವೆ. ಗ್ರಾಮೀಣ ಮತ್ತು ನಗರ ಸಂಸ್ಕೃತಿಯೆಂಬ ಎರಡು ವಿಭಿನ್ನ ಸಂಸ್ಕೃತಿಯೊಂದಿಗೆ ಬುಡಕಟ್ಟು ಮತ್ತು ದಲಿತ ಸಮಾಜ ಅಥವಾ ಸಂಸ್ಕೃತಿಯನ್ನು ಪ್ರತ್ಯೇಕವಾಗಿ ಗುರುತಿಸುತ್ತೇವೆ. ಇದಕ್ಕಿಂತ ಮುಖ್ಯವಾಗಿ ಭಾರತೀಯ ಸಮಾಜದಲ್ಲಿ ಅಸಮಾನತೆಯಿಂದ ಕೂಡಿದ ಅನಿಷ್ಠ ಸಾಮಾಜಿಕ ರಚನಾ ಪದ್ಧತಿಯಿದೆ. ಅದರಲ್ಲಿಯೂ ಇಲ್ಲಿನ ವರ್ಣ ಪದ್ಧತಿಯ ಕಲ್ಪನೆ ಮತ್ತು ಜಾತಿ ಪದ್ಧತಿ ಪ್ರಪಂಚದ ಯಾವ ಭಾಗದಲ್ಲಿಯೂ ಕಂಡುಬರದಂತಹ ಸಾಮಾಜಿಕ ಕ್ರಮವನ್ನು ಹೊಂದಿದೆ. ಇಲ್ಲಿನ ಸಾಮಾಜಿಕ ರಚನೆ ಜಾತಿ ಪದ್ಧತಿಯಿಂದ ಕೂಡಿದುದಾಗಿದೆ. ಇಂತಹ ಒಂದು ಸಾಮಾಜಿಕ ಪ್ರಕ್ರಮದಲ್ಲಿ (Social Order) ನಾವು ಸಾಮಾಜಿಕ ಅಂಶಗಳನ್ನು ಗುರುತಿಸಬಹುದು. ಭಾರತೀಯ ಸಮಾಜದ ರಚನೆಯು ಅಥವಾ ಕ್ರಮ ಅಸಮಾನತೆಯಿಂದ ಕೂಡಿದ್ದು, ಬಲಿಷ್ಠ ಮತ್ತು ಅಧೀನ ಸಂರಚನೆಯಿಂದ ಕೂಡಿದೆ. ಇದಲ್ಲದೆ ಈ ರಚನೆಯಲ್ಲಿ ಏಣಿಶ್ರೇಣಿಯ (Hierarchy) ಕ್ರಮವೂ ಕಂಡುಬರುತ್ತದೆ. ಇದು ಕೇವಲ ಒಂದು ಸರಳವಾದ ಏಣಿಶ್ರೇಣಿಯಾಗಿರದೆ, ಇಲ್ಲಿ ಈ ರೀತಿಯ ಅಸಮಾನ ಹಂಚಿಕೆಯ ಪದ್ಧತಿಯನ್ನು ನ್ಯಾಯ ಸಮ್ಮತವೆಂದು ಸಾಮಾಜಿಕ ಏಣಿಶ್ರೇಣಿಯಲ್ಲಿ ತುಟ್ಟ ತುದಿಯಲ್ಲಿ ಬರುವ ಸಾಮಾಜಿಕ ಗುಂಪು ಪ್ರತಿಪಾದಿಸುತ್ತದೆ. ಅಂದರೆ ನಾವು ಏಣಿಶ್ರೇಣಿಯ, ರೀತಿಯ ಸಾಮಾಜಿಕ ರಚನೆಯನ್ನು ಕಾಣಬಹುದು. ಇಂತಹ ಏಣಿಶ್ರೇಣಿಯ ಅತ್ಯಂತ ತುದಿಯಲ್ಲಿ ಬ್ರಾಹ್ಮಣ ವರ್ಗವನ್ನು ಪ್ರತಿನಿಧಿಸುವ ಸಾಮಾಜಿಕ ಗುಂಪು ಕಂಡುಬಂದರೆ ಅತ್ಯಂತ ಕೆಳಸ್ಥರದಲ್ಲಿ ಅಸ್ಪೃಶ್ಯರು ಮತ್ತು ಶೂದ್ರರು ಎಂಬ ಸಾಮಾಜಿಕ ಗುಂಪುಗಳು ಕಂಡುಬರುತ್ತವೆ. ಇವುಗಳ ಮಧ್ಯೆ ವೈಶ್ಯರು ಮತ್ತು ಕ್ಷತ್ರಿಯರು ಎಂಬ ಗುಂಪುಗಳನ್ನು ಸೃಷ್ಠಿಸಲಾಗಿದೆ. ಇಲ್ಲಿ ಅಲಕ್ಷೀಕರಣದ ಸಂದರ್ಭದಲ್ಲಿ ಮಧ್ಯಸ್ಥರದಲ್ಲಿ ಬರುವ ಕೆಲವು ಸಾಮಾಜಿಕ ಸಮೂಹಗಳು ಗೌಣವಾಗುತ್ತವೆ. ಆದರೆ ಎರಡು ತುದಿಯಲ್ಲಿ ಬರುವ ಸಾಮಾಜಿಕ ಗುಂಪುಗಳ ನಡುವೆ ಸಾಮಾಜಿಕ ಕಂದಕವಿರುತ್ತದೆ. ಈ ಎರಡು ಗುಂಪುಗಳ ನಡುವಿನ ವ್ಯತ್ಯಾಸದಿಂದಾಗಿಯೇ ಎರಡು ವಿಭಿನ್ನ

ಸಂಸ್ಕೃತಿಗಳು ರೂಪುಗೊಂಡಿವೆ. ಯಾವುದೇ ಕಾರಣಕ್ಕೂ ಈ ಎರಡು ಸಂಸ್ಕೃತಿಗಳ ನಡುವೆ ಸ್ಪಂದನವಿರುವುದಿಲ್ಲ.[೬೩]

ನಿರ್ಲಕ್ಷೆ ಎಂಬುದಕ್ಕೆ ವಿವಿಧ ಅಧ್ಯಯನ ಕ್ರಮಗಳಲ್ಲಿ ಇರಬಹುದಾದ ಅರ್ಥವಿವರಣೆಗಳನ್ನು ಈವರೆಗೆ ಗಮನಿಸಿದ್ದೇವೆ. ಸಂಸ್ಕೃತಿ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ಲಿಂಗರಾಜಕಾರಣ ಹೀಗೆ ಅನೇಕ ಶಿಸ್ತುಗಳ ದೃಷ್ಟಿಕೋನಗಳಲ್ಲಿ ನಿರ್ಲಕ್ಷೆಗೆ ವ್ಯಕ್ತಿ, ಗುಂಪು, ಸಮುದಾಯ ಹೇಗೆ ಒಳಪಡುವ ಸಂದರ್ಭ ಉದ್ಭವಿಸುತ್ತದೆ ಎಂಬುದನ್ನು ಸುದೀರ್ಘವಾಗಿ ಚರ್ಚಿಸಲಾಗಿದೆ. ಮಹಿಳಾ ಶೋಷಣೆ, ಮಹಿಳಾ ದಮನ, ಮಹಿಳೆಯರ ವಿರುದ್ಧದ ತಾರತಮ್ಯಗಳು, ಮಹಿಳೆಯ ಅಧೀನತೆ ಮತ್ತು ಪರಾವಲಂಬಿತನ, ನಿರಾಕರಣೆಗಳು, ಬಡತನದ ಮಹಿಳಾಕರಣ, ಮಹಿಳಾ ಪ್ರತ್ಯೇಕಿಸುವಿಕೆ, ಮಹಿಳಾ ಸಬಲೀಕರಣ, ಮಾತೃಪ್ರಧಾನ ಕುಟುಂಬ ವ್ಯವಸ್ಥೆ, ಮಹಿಳೆಯರ ರಾಜಕೀಯ ಪಾಲುಗೊಳ್ಳುವಿಕೆ, ಲಿಂಗ ಅಸಮಾನತೆ, ಮರಣ ಅಸಮಾನತೆ, ಭ್ರೂಣಾವಸ್ಥೆಯ ಅಸಮಾನತೆ, ವಿಶೇಷ ಅವಕಾಶ ಅಸಮಾನತೆ, ಮಾಲೀಕತ್ವ ಅಸಮಾನತೆ, ವೃತ್ತಿಪರ ಅಸಮಾನತೆ, ಪಿತೃಪ್ರಧಾನತೆ ಹಾಗೂ ಅಲಕ್ಷೀಕರಣದ ಪರಿಕಲ್ಪನೆ ಮುಂತಾದ ವಿಷಯಗಳ ವ್ಯಾಖ್ಯಾನ ಹಾಗೂ ವಿವರಣೆಗಳನ್ನು ಮೂಲದಲ್ಲಿರುವಂತೆಯೇ ನಮೂದಿಸಲಾಗಿದೆ. ಸ್ತ್ರೀತಾರತಮ್ಯ, ಅಸಮಾನತೆ, ಪ್ರತ್ಯೇಕಿಸುವಿಕೆ, ನಿರಾಕರಣೆಗಳು ಯಾವ ಕಾರಣಗಳಿಂದಾಗಿ ಉಂಟಾಗುತ್ತವೆ ಎಂಬುದನ್ನು ಗಮನಿಸುವ ಉದ್ದೇಶದಿಂದ ಅವುಗಳನ್ನು ಒಂದೆಡೆ ದಾಖಲಿಸಲಾಗಿದೆ. ಮೇಲಾಗಿ ಸ್ತ್ರೀಯರ ಪ್ರಸ್ತುತ ಸ್ಥಿತಿಗತಿಯನ್ನು ಅವು ದಾಖಲಿಸುವುದರ ಜೊತೆಗೆ ನಮ್ಮ ಮುಂದಿನ ಚರ್ಚೆಗೆ ಪೀಠಿಕೆ ಸ್ವರೂಪದಲ್ಲಿವೆ. ನಮ್ಮ ಅಧ್ಯಯನ ಸಾಗುವ ರೀತಿಯನ್ನು ಅವು ಸಾಂಕೇತಿಕವಾಗಿ ಸೂಚಿಸುತ್ತವೆ. ಅಂತಹ ಸ್ಥಾಪಿತ ವ್ಯಾಖ್ಯಾನ ವಿವರಣೆಗಳು ಸ್ವಯಂವೇದ್ಯವಾಗಿವೆ, ಅವುಗಳನ್ನು ಪುನಃ ವಿವರಣೆಗಳ ಮೂಲಕ ಸಮರ್ಥಿಸುವ ಅಗತ್ಯ ಕಂಡುಬರುವುದಿಲ್ಲ. ಸ್ತ್ರೀಯರು ಎಲ್ಲ ಕ್ಷೇತ್ರಗಳಲ್ಲೂ ಎರಡನೆಯ ಸ್ಥಾನದಲ್ಲಿ ಅಥವಾ ಪ್ರತಿನಿಧೀಕರಣವೇ ಇಲ್ಲದಂತಹ ಸಂಗತಿಗಳು ಇದರಿಂದ ನಮಗೆ ವೇದ್ಯವಾಗುತ್ತದೆ. ಮಹಿಳೆಯರ ಸಮಸ್ಯೆ ಒಂದೆಡೆಯಾದರೆ ದಲಿತ ಮಹಿಳೆಯ ಸ್ಥಿತಿ ಮತ್ತೂ ದುಸ್ತರ. ಅವರ ಮೇಲಾಗುವ ಲೈಂಗಿಕ ಶೋಷಣೆ, ಗುಲಾಮರಂತೆ ನಡೆಸಿಕೊಳ್ಳುವ ರೀತಿ, ಅಸ್ಪೃಷ್ಯತೆಯಂಥ ಘೋರ ಅವಮಾನ ಎಲ್ಲವನ್ನೂ ಮೇಲಿನ ವ್ಯಾಖ್ಯಾನಗಳು ಸವಿವರವಾಗಿ ಅನಾವರಣಗೊಳಿಸುತ್ತವೆ.

### ೨.೨೬ ಲಿಂಗರಾಜಕಾರಣ- ನಿರ್ಲಕ್ಷೆ

ರಾಜಕಾರಣವೆನ್ನುವುದು ಅಧಿಕಾರ-ಅನಧಿಕಾರಗಳ ನಡುವಣ ಸಂಬಂಧದ ನಿರ್ವಚನ ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗದ ನಡುವೆ ಇರುವ ಸಂಬಂಧವನ್ನು ರಾಜಕಾರಣವು ವ್ಯಾಖ್ಯಾನಿಸುತ್ತದೆ. ಒಂದು ಗುಂಪು ಮತ್ತೊಂದು ಗುಂಪಿನ ಮೇಲೆ, ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಮೇಲೆ ಹಿಡಿತ

ಸಾಧಿಸುವುದನ್ನು ರಾಜಕಾರಣವು ಚರ್ಚಿಸುತ್ತದೆ. ಈ ಸಂಗತಿಗಳ ಹಿಂದಿರುವ ನ್ಯಾಯ ಮತ್ತು ಕಾನೂನನ್ನು ಅದು ವಿವೇಚಿಸಲು ಪ್ರಯತ್ನಿಸುತ್ತದೆ. ಲೈಂಗಿಕ ರಾಜಕಾರಣವೆಂದರೆ ಲೈಂಗಿಕ ವ್ಯತ್ಯಾಸದ ಕಾರಣದಿಂದಲೇ ಒಬ್ಬರ ಮೇಲೆ ಮತ್ತೊಬ್ಬರು ಅಧಿಕಾರ ನಡೆಸುವುದು. ಇದರಿಂದ ಒಂದು ವರ್ಗವು (ಅಧಿಕಾರಕ್ಕೆ ಒಳಗಾದ ವರ್ಗ) ಮಾನಸಿಕ ಒತ್ತಡಕ್ಕೆ ಗುರಿಯಾಗುತ್ತದೆ. ಈ ದೃಷ್ಟಿಯಿಂದಲೇ ಅಧಿಕಾರದ ಸಂರಚನೆಗೂ ಲೈಂಗಿಕ ವ್ಯತ್ಯಾಸಕ್ಕೂ ಸಂಬಂಧವಿದೆ. "ಲೈಂಗಿಕ ರಾಜಕಾರಣವು ಲೈಂಗಿಕ ಯಜಮಾನಿಕೆಯ ಅಂಶವನ್ನು ಒಳಗೊಂಡಿದ್ದು, ಅದು ಮೂಲಭೂತವಾದ ಅಧಿಕಾರದ ಪರಿಕಲ್ಪನೆಯಾಗಿದೆ" ಎಂದು ಕೇಟ್ ಮಿಲ್ಲೆಟ್ ಹೇಳುತ್ತಾನೆ. ಫುಕೋ ಕೂಡ ಒಂದು ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ. "ಲೈಂಗಿಕ ವ್ಯತ್ಯಾಸವು ಅಧಿಕಾರದ ವರ್ಗಾವಣೆಯ ಪ್ರಮುಖ ಅಂಶಗಳಲ್ಲಿ ಒಂದು ಅಧಿಕಾರವೆನ್ನುವುದು ಗಂಡು, ಹೆಣ್ಣು, ಯುವಕರು, ಮುದುಕರು, ಪಾಲಕರು ಮತ್ತು ಮಕ್ಕಳು. ಆಡಳಿತ ವರ್ಗ ಮತ್ತು ಸಾಮಾನ್ಯ ಜನತೆಯ ನಡುವೆ ಹರಿಹಂಚಾಗಿ ಹೋಗುತ್ತದೆ. ಈ ದೃಷ್ಟಿಯಿಂದಲೇ ಗಂಡು ಅಧಿಕಾರದ ಸಂಕೇತವಾದರೆ, ಹೆಣ್ಣು ಶೋಷಿತ ವರ್ಗದ ಪ್ರತಿನಿಧಿಯಾಗಿರುತ್ತಾಳೆ. ಗಂಡು ಮತ್ತು ಹೆಣ್ಣಿನ ನಡುವೆ ಇರುವ ರಾಜಕಾರಣವು ಕೂಡ ದೃಶ್ಯ ಮತ್ತು ಭಾವನಾತ್ಮಕ ಸಂಗತಿಗಳ ನಡುವೆ ರೂಪುಗೊಂಡಿರುತ್ತದೆ. ಪಿತೃರೂಪಿ ಸಂಸ್ಕೃತಿಯು ಸ್ತ್ರೀ ವರ್ಗದ ಮೇಲೆ ಅಧಿಕಾರವನ್ನು ಸ್ಥಾಪಿಸಿಕೊಳ್ಳುತ್ತದೆ. ಮತ್ತು ಸ್ತ್ರೀಯು ಗುಲಾಮ ಶಕ್ತಿ (Labour Power)ಯ ಪ್ರಾತಿನಿಧಿಕ ರೂಪವಾಗಿದ್ದಾಳೆ. ಲೈಂಗಿಕ ವ್ಯತ್ಯಾಸವೆನ್ನುವುದನ್ನು ಕಾಲಾಂತರದಲ್ಲಿ ಅಧಿಕಾರ ಮತ್ತು ಅನಧಿಕಾರಗಳ ವ್ಯತ್ಯಾಸವೆಂಬಂತೆ ಬಳಸಲಾಯಿತು. ಸ್ತ್ರೀವಾದದ ಪ್ರಕಾರ ಬಂಡವಾಳಶಾಹಿ ಜಗತ್ತು ಮತ್ತು ಪಿತೃರೂಪಿ ಸಂಸ್ಕೃತಿಯ ಜಗತ್ತು ಎರಡೂ ಬೇರೆ ಬೇರೆ ರೀತಿಯ ಮಾನಸಿಕ ಒತ್ತಡಗಳನ್ನು ನಿರ್ಮಿಸುತ್ತವೆ. ಪಿತೃರೂಪಿ ಸಂಸ್ಕೃತಿಯಲ್ಲಿ ಪುರುಷನನ್ನು ಉನ್ನತ ದರ್ಜೆಯವನೆಂದು ಸ್ತ್ರೀಯನ್ನು ಕೆಳದರ್ಜೆಯವಳೆಂದು ಅಂಗೀಕರಿಸಲಾಗುತ್ತದೆ. ಇದರಿಂದಲೇ ತಾರತಮ್ಯ ವ್ಯತ್ಯಾಸಗಳು ಉಂಟಾಗುತ್ತವೆ. ಈ ರೀತಿಯ ತಾರತಮ್ಯಗಳಲ್ಲಿ ಅನೇಕ ಮಾದರಿಯ ನಿರ್ವಾತಗಳಿರುತ್ತವೆ."[೪೪]

ಪಿತೃ ಸಂಸ್ಕೃತಿಯ ಒತ್ತಡಗಳಿಂದ ಅಧೀನಸ್ಥ ಸ್ಥಿತಿಗೆ ತಲುಪಿದ್ದ ಮಹಿಳೆ ಬಂಡವಾಳಶಾಹಿ ಜಗತ್ತಿನಿಂದಲೂ ಗುಲಾಮಳೆಂದು ಪರಿಗಣಿಸಲ್ಪಟ್ಟಿದ್ದು ಲಿಂಗರಾಜಕಾರಣದ ಪ್ರಭಾವದಿಂದಲೇ. ಪುರುಷ ಪ್ರಾಧಾನ್ಯತೆಯಿಂದಾಗಿ ಶಿಕ್ಷಣದಿಂದ ವಂಚಿತಳಾದ ಸ್ತ್ರೀಯು ಬಂಡವಾಳಶಾಹಿ ಜಗತ್ತಿನಲ್ಲಿ ಅಧಿಕಾರ ಸ್ಥಾನವನ್ನು ಹಿಡಿಯಲು ಅಸಮರ್ಥಳಾದಳು. ಶತಮಾನಗಳಿಂದಲೂ ಯಜಮಾನಿಕೆಯನ್ನು ನಡೆಸುತ್ತಾ ಬಂದ ಪುರುಷ ಆಕೆ ತನ್ನ ನಿಯಂತ್ರಣ ಹಾಗೂ ಅಧೀನದಲ್ಲೇ ಇರುವಂತೆ ನೋಡಿಕೊಂಡ, ಅದಕ್ಕಾಗಿ ತನ್ನದೇ ಆದ ಅನೇಕ ಜ್ಞಾನವಲಯಗಳನ್ನು ಸೃಷ್ಟಿಸಿದ. ಅನೇಕ ಮಾದರಿಗಳನ್ನು ಕಟ್ಟಿದ. ಇದರ ಪರಿಣಾಮವಾಗಿ ಆಕೆ ಸೇವಕಿಯಾಗಿಯೇ ಮುಂದುವರಿಯುವಂತಹ ಸ್ಥಿತಿ ಬಂದೊದಗಿತು. ಅದರಿಂದಾಗಿ ಎಲ್ಲ ಹಂತಗಳಲ್ಲೂ ಮಹಿಳೆಯರು ಪುರುಷನಿಂದ ನಿರ್ಲಕ್ಷ್ಯಕ್ಕೆ ಒಳಗಾದರೂ. ಪ್ರಸ್ತುತ ಸಂದರ್ಭದಲ್ಲಿ ಪುರುಷನ ಇಂತಹ

ಹುನ್ನಾರಗಳು ಆಕೆಯ ಅರಿವಿಗೆ ಬಂದಿವೆ. ಅವುಗಳಿಂದ ಹೊರಬರಲು ಆಕೆ ನಿರಂತರವಾಗಿ ಪ್ರಯತ್ನಿಸುತ್ತಲೇ ಇದ್ದಾಳೆ.

### ೨.೨೭ ಅಸ್ಪೃಶ್ಯತೆ- ನಿರ್ಲಕ್ಷೆ

ಭಾರತೀಯ ಸಂಸ್ಕೃತಿಯಲ್ಲಿ ಬಹಳ ಮುಖ್ಯವಾಗಿ ನಮಗೆ ಕಂಡುಬರುವುದು ಜಾತಿ ವ್ಯವಸ್ಥೆಯಿಂದಾಗಿ ನಿರ್ಮಾಣಗೊಂಡಿರುವ ಅಸ್ಪೃಶ್ಯತೆ. ಇದು ಎಷ್ಟರಮಟ್ಟಿಗೆ ಇದೇ ಎಂದರೆ ದಲಿತರು ಇಂದಿಗೂ ಇದರ ಪರಿಣಾಮಗಳಿಂದ ಹೊರಬರಲು ಸಾಧ್ಯವಾಗಿಲ್ಲ. ವಿದ್ಯಾವಂತ ಸಮಾಜದಲ್ಲೂ ಇಂದಿಗೂ ಇದು ಆಚರಣೆಯಲ್ಲಿದೆ. ಗಾಂಧೀ, ಅಂಬೇಡ್ಕರ್ ಅಂತಹವರು ಇಂತಹ ಅವಮಾನಗಳಿಂದ ಸ್ಫೋಟಗೊಂಡು ಅದರ ನಿವಾರಣೆಗೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಆದರೂ ಅಸ್ಪೃಶ್ಯತೆ ಈ ಸಮಾಜದಿಂದ ತೊಲಗಲಿಲ್ಲ. ಇಂದಿಗೂ ಊರುಗಳಲ್ಲಿ ಹೊಲಗೇರಿಗಳಿವೆ. ಪ್ರತ್ಯೇಕ ಮನೆಗಳಿವೆ, ಪ್ರತ್ಯೇಕ ಕಾಲೋನಿಗಳಿವೆ, ಇತ್ತೀಚಿನ ಪ್ರಕರಣ ಉದಾಹರಿಸಬಹುದಾದರೆ ನ್ಯಾಯಬೆಲೆ ಅಂಗಡಿ ದಲಿತರ ಓಣಿಯಲ್ಲಿದೆ ಎಂದು ಸವರ್ಣೀಯರೆಂದು ಕರೆಯಲ್ಪಡುವ ಬಡವರೂ ಅಕ್ಕಿ, ಬೇಳೆ ಪಡೆಯಲು ಹಿಂದೇಟು ಹಾಕಿದರು. ಅಲ್ಲಿ ಖರೀದಿ ಮಾಡಬಾರದೆಂದು ಊರಿನ ಪ್ರಮುಖರು ಬಹಿಷ್ಕಾರ ಹಾಕಿದರು. ಕುಣಿಗಲ್‌ನ ಅನೇಕ ಗ್ರಾಮಗಳಲ್ಲಿ ಇಂದಿಗೂ ಹೊಟೇಲ್‌ಗಳಲ್ಲಿ ದಲಿತರಿಗೆ ಹೊರಗೆ ಪ್ರತ್ಯೇಕ ಕಾಫಿ ಲೋಟಗಳನ್ನು ಇರಿಸಿರುತ್ತಾರೆ. ಪ್ರತ್ಯೇಕ ಕುಡಿಯುವ ನೀರನ್ನು ಇರಿಸಿರುತ್ತಾರೆ. ಹಣಕೊಟ್ಟು ಕಾಫಿ/ಟೀ ಕುಡಿದರೂ ಲೋಟ ತೊಳೆದು ಅದರ ಜಾಗದಲ್ಲೇ ಇಡಬೇಕಾದ ಜವಾಬ್ದಾರಿ ದಲಿತರದ್ದೇ. ದಲಿತರದ್ದು ಇಂತಹ ಪರಿಸ್ಥಿತಿ ಇದ್ದರೆ, ಮಹಿಳೆಯರದ್ದು ಅದಕ್ಕಿಂತಲೂ ಹೀನಾಯ. ಪೋಲಂಕಿ ರಾಮಮೂರ್ತಿ ಅವರು ಇದನ್ನು ಮಹಿಳೆಯರ ಅಸ್ಪೃಶ್ಯತೆ ಎಂದು ಕರೆಯುತ್ತಾರೆ. ಅವರ ಪ್ರಕಾರ ಹೆಣ್ಣು ಈ ಸಂಸ್ಕೃತಿಯಲ್ಲಿ ಅವಳ ಜೀವನದುದ್ದಕ್ಕೂ ಕೆಲವು ಕ್ಲುಪ್ತ ಕಾಲಗಳಲ್ಲಿ ಅಸ್ಪೃಶ್ಯಳು. ಅವಳು ಮೈನೆರೆದಾಗ, ಪ್ರತಿ ತಿಂಗಳು ಮುಟ್ಟಾದಾಗ, ಪ್ರತಿ ಸಾರಿ ಹೆತ್ತಾಗ, ವಿಧವೆಯಾದಾಗ ಅಸ್ಪೃಶ್ಯಳು. ವಿಧವೆಯಾದಾಗ ಹೆಣ್ಣು ತನ್ನ ನಿತ್ಯದ ಮಡಿ ಪ್ರಪಂಚದಲ್ಲಿ ಅಸ್ಪೃಶ್ಯಳಷ್ಟೇ ಅಲ್ಲ. ನೋಡಲು ಅಮಂಗಲೆಯೂ, ಅಪಶಕುನಳೂ, ದುರ್ದೇಶೆ ತರುವವಳೂ ಆದ್ದರಿಂದ, ಹರಿಜನರಿಗಿಂತಲೂ 'ಅದೃಶ್ಯ'ಳು[೪೫] ಇಂತಹ ಅನೇಕ ನಿರ್ಬಂಧಗಳನ್ನು ಹೇರಿ ಅವಳ ಮಾನಸಿಕ ಸ್ಥೈರ್ಯವನ್ನು ಕುಗ್ಗಿಸಿ ಕೀಳರಿಮೆಯಿಂದ ಪುರುಷನಿಗೆ ಅಧೀನಳಾಗಿ ಬದುಕುವಂತೆ ಮಾಡಲಾಗುತ್ತದೆ. ಪ್ರಕೃತಿ ಸಹಜವಾದ ದೈಹಿಕ ಬದಲಾವಣೆಗಳನ್ನು ಆಧಾರವಾಗಿಟ್ಟುಕೊಂಡು ಆಕೆಯನ್ನು ಕಡೆಗಣಿಸಲಾಗುತ್ತದೆ ಅಥವಾ ನಿರ್ಲಕ್ಷಿಸಲಾಗುತ್ತದೆ. ಆದರೆ ಇದೇ ಪುರೋಹಿತಶಾಹಿ ದೇವದಾಸಿಯರನ್ನು, ಸೂಳೆಯರನ್ನು ಯಾವುದೇ ಮಡಿ ಮೈಲಿಗೆ ಎನ್ನದೆ ಸೇರಬಹುದು. ಅದಕ್ಕೆ ಯಾವ ವೇದ, ಪುರಾಣ, ಧರ್ಮ, ಸಂಸ್ಕೃತಿ ಅಡ್ಡಿ ಬರುವುದಿಲ್ಲ.

ಮೇಲೆ ವಿವರಿಸಿದಂತೆ ನಾನಾ ಕಾರಣಗಳಿಗೆ ನಿರ್ಲಕ್ಷೆಗೆ ಒಳಗಾದ ಜಾತಿ, ಸಮುದಾಯ, ವ್ಯವಸ್ಥೆ, ವರ್ಗಗಳನ್ನು ನಾವು ಗಮನಿಸಿದ್ದೇವೆ. ಅದಕ್ಕೆ ಅಧಿಕಾರಿಶಾಹಿ, ಪುರೋಹಿತಶಾಹಿ, ಊಳಿಗಮಾನ್ಯ ಪದ್ಧತಿ, ಪಿತೃಪ್ರಧಾನ ಸಂಸ್ಕೃತಿ ಇವು ನಿರಂತರವಾಗಿ ತಮ್ಮ ಅಂಕುಶಗಳ ಮೂಲಕ ದಬ್ಬಾಳಿಕೆ ಮಾಡುತ್ತಾ ತಮ್ಮ ಅನುಕೂಲಕ್ಕೆ ಹೇಗೆ ಬೇಕೋ ಹಾಗೆ ದುರ್ಬಲ ಮನುಷ್ಯರನ್ನು ಬಳಸಿಕೊಳ್ಳುತ್ತಿರುವುದು ಶತಮಾನಗಳಿಂದ ನಡೆದು ಬಂದಿರುವಂತಹದ್ದು.



ಸಂಸ್ಕೃತಿಯ ಪ್ರಾತಿನಿಧಿಕ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳು ಇಂತಹ ಸ್ಥಾಪಿತ ಮೌಲ್ಯಗಳನ್ನು ಪ್ರತಿಪಾದಿಸುವ ಕೆಲಸವನ್ನು ನಿರಂತರವಾಗಿ ಮಾಡುತ್ತಾ ಬಂದಿವೆ. ಜಾತಿ ಹುಟ್ಟಿನ ಹಿನ್ನೆಲೆಯಲ್ಲಿ ತಿರಸ್ಕಾರಕ್ಕೆ ನಿರ್ಲಕ್ಷೆಗೆ ಒಳಗಾದ ಪಾತ್ರಗಳೂ ಸೃಷ್ಟಿಗೊಂಡಿವೆ. ಉದಾಹರಣೆಗೆ ಕರ್ಣನ ಪಾತ್ರ, ಬೇಡದ ದೈವಗಳಿಗೆ, ಶೂರರಿಗೆ ರಾಕ್ಷಸತ್ವವನ್ನು ಆರೋಪಿಸಲಾಗಿದೆ. ಅವರನ್ನು ಸಮಾಜ ಸದಾ ದುಷ್ಟರು ಎಂದೇ ಪರಿಭಾವಿಸುವಂತೆ ಮಾಡಲಾಗಿದೆ. ಪುರುಷನಿಗೆ ಸವಾಲಾಗಿದ್ದ, ಎಲ್ಲದರಲ್ಲೂ ಸರಿಸಮಾನಳಾಗಬಹುದಾಗಿದ್ದ ಮಹಿಳೆಯನ್ನು ಕಾವ್ಯ ಪುರಾಣಗಳ ಪಾತ್ರ ಮಾದರಿಗಳ ಮೂಲಕ ನಿಯಂತ್ರಿಸಿ ಹದ್ದುಬಸ್ತಿನಲ್ಲಿಡಲಾಗಿದೆ. ಈ ನಿರ್ಬಂಧಗಳನ್ನು ಒಟ್ಟು ಸಮಾಜದ ಹಿತಕ್ಕಾಗಿ ಮಾಡಲಾಗಿದೆ ಎಂದು ಬಿಂಬಿಸುತ್ತಾ ಅದನ್ನು ಪ್ರಶ್ನಿಸುವುದು ಅಪರಾಧ ಎಂಬಂತೆ ನಂಬಿಸಲಾಗಿದೆ. ಇವೆಲ್ಲವನ್ನು ಮೀರಿ ಮಹಿಳೆ ಸ್ವತಂತ್ರವಾಗಿ ಬದುಕಬಯಸಿದರೆ ಸೀತೆ, ಕುಂತಿ, ಶಕುಂತಲೆ, ಅಹಲ್ಯೆ, ಶೂರ್ಪನಖಿಗೆ ಆದ ಸ್ಥಿತಿ ನಿಮಗೂ ಆಗುತ್ತದೆ ಹಾಗೂ ನಿಮ್ಮ ಜೀವನ ದುರಂತಮಯವಾಗುತ್ತದೆ ಎಂದು ಹೆದರಿಸಲಾಗಿದೆ.

ಇಂತಹ ಹುನ್ನಾರ ದುರುದ್ದೇಶಗಳನ್ನು ಅರ್ಥಮಾಡಿಕೊಂಡು ಸ್ವಾಭಿಮಾನಿಯಾಗಿ, ಸ್ವತಂತ್ರವಾಗಿ, ಪುರುಷನಿಗೆ ಸಮಾನವಾಗಿ ಬದುಕಿ ಬೆಳೆಯಬೇಕಾದ ಅಗತ್ಯತೆ ಹಿಂದೆಂದಿಗಿಂತಲೂ ಇಂದು ಸ್ತ್ರೀಯರಿಗಿದೆ. ಆ ನಿಟ್ಟಿನಲ್ಲಿ ಮುಂದಿನ ಅಧ್ಯಾಯಗಳನ್ನು ಸ್ಥಾಪಿತ ಮಾದರಿ ಪಾತ್ರಗಳ ಚಿತ್ರಣ, ಸ್ಥಿತಿ, ಅವು ಎದುರಿಸುವ ಸಂದರ್ಭಗಳನ್ನು ಮೂಲದಲ್ಲಿದ್ದಂತೆ ಪರಿಚಯಿಸುತ್ತಾ ಅವುಗಳಿಂದ ಬಿಡುಗಡೆ ಪಡೆಯುವುದು ಹೇಗೆ ಎಂಬ ಬಗ್ಗೆ ಚರ್ಚಿಸಲಾಗಿದೆ.

**ಟಿಪ್ಪಣಿಗಳು**

೧. ಕನ್ನಡ ನಿಘಂಟು– ೫ನೆಯ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು.

೨. ಇಂಗ್ಲಿಷ್–ಕನ್ನಡ ನಿಘಂಟು– ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಪ್ರೊ. ಎಂ.ಎಸ್. ಪಾಟೀಲ, ಪಾಶ್ಚಿಮಾತ್ಯ ರಾಜಕೀಯ ಚಿಂತನೆ, ಪ್ರತಿಭಾ ಪ್ರಕಾಶನ, ತಾಳಿಕೋಟಿ, ಪುಟ–೭೨.

೪. Encyclopedia of Social Sciences, Editor in Chief, Edusn RA Setigman, Volume-II, Part-7, Cosmo Publications, New Delhi, 2006, 368P.

೫. ಬಿ.ವಿ. ವೀರಭದ್ರಪ್ಪ, ಸಂಪಾದಕರು, ದೇವರನ್ನು ಕುರಿತು ಒಂದು ಬಹುಮುಖಿ ನೋಟ, ಪ್ರಧಾನ ಸಂಪಾದಕರು, ಶ್ರೀ ಚಿ. ಶ್ರೀನಿವಾಸರಾಜು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೧೧.

೬. ಅದೇ ಪುಟ–೧೨.

೭. The Foundation of Social Anthropology by S.F. Nadel.

೮. Herskavits, Cultural Anthrology.

೯. ಬರಗೂರು ರಾಮಚಂದ್ರಪ್ಪ; ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೧, ಪುಟ–೧೬೪.

೧೦. (Herskoits, Cultural Anthropology) ಅದೇ–ಪುಟ–೧೬೫.

೧೧. ಅದೇ ಪುಟ–೧೬೫.

೧೨. ಶ್ರೀ ಒಡೆಯರ್ ಡಿ. ಹೆಗಡೆ, ಎನ್. ಅನ್ನಪೂರ್ಣೇಶ್ವರಿ, ಮಹಿಳಾ ಅಧ್ಯಯನಗಳು, ಮುತ್ತು ಎಂಟರ್ ಪ್ರೈಸಸ್, ಮೈಸೂರು–೨೦೧೦, ಪುಟ–೧೨.

೧೩. ಅದೇ, ಪುಟ–೧೨.

೧೪. ಅದೇ, ಪುಟ–೧೨–೧೩.

೧೫. ಅದೇ, ಪುಟ–೧೩.

೧೬. ಅದೇ, ಪುಟ–೧೩.

೧೭. ಅದೇ, ಪುಟ–೧೩.

೧೮. ಅದೇ, ಪುಟ–೧೪–೧೫.

೧೯. ಅದೇ, ಪುಟ–೧೫.

೨೦. ಅದೇ, ಪುಟ–೧೬.

೨೧. ಅದೇ, ಪುಟ–೧೬.

೨೨. ಅದೇ, ಪುಟ–೧೭.

೨೩. ಅದೇ, ಪುಟ–೧೮.

೨೪. ಅದೇ, ಪುಟ-೧೮.

೨೫. ಅದೇ, ಪುಟ-೧೯.

೨೬. ಅದೇ, ಪುಟ-೨೬-೨೭.

೨೭. ಅದೇ, ಪುಟ-೨೮.

೨೮. ಅದೇ, ಪುಟ-೧೭೬.

೨೯. ಅದೇ, ಪುಟ-೧೭೭.

೩೦. ಅದೇ, ಪುಟ-೧೭೭.

೩೧. ಅದೇ, ಪುಟ-೧೭೮.

೩೨. ಅದೇ, ಪುಟ-೧೭೮.

೩೩. ಅದೇ, ಪುಟ-೧೭೮-೧೭೯.

೩೪. ಅದೇ, ಪುಟ-೧೭೯.

೩೫. ಅದೇ, ಪುಟ-೧೮೦.

೩೬. ಅದೇ, ಪುಟ-೧೯೪.

೩೭. ಅದೇ, ಪುಟ-೨೧೪.

೩೮. ಅದೇ, ಪುಟ-೩೩೭ ಮತ್ತು ೪೭೭.

೩೯. ಅದೇ, ಪುಟ-೪೯೨.

೪೦. ಅದೇ, ಪುಟ-೪೯೨.

೪೧. ಅದೇ, ಪುಟ-೫೦೭.

೪೨. Debal K Singh Roy, Social Development and Empowerement of Marginalized Groups Sage Publishing House, New Delhi-2001.

೪೩. ಕನ್ನಡ ವಿಶ್ವವಿದ್ಯಾಲಯದ ದೂರಶಿಕ್ಷಣ ಕೇಂದ್ರದ ಸ್ನಾತಕೋತ್ತರ ಪದವಿಯ ಸಿದ್ಧಪತ್ಯ- ಗುರುಲಿಂಗಯ್ಯ ಎಂ. ಅಂಚೇಕೃತ ಗುಂಪುಗಳು, ಪ್ರಸಾರಾಂಗ, ಮಂಗಳೂರು, ೨೦೦೮.

೪೪. ಡಾ. ಕೇಶವಶರ್ಮಾ, ಲಿಂಗರಾಜಕಾರಣ ಮತ್ತು ಮಹಿಳಾ ವಿಮರ್ಶೆ, ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ. ಡಾ. ವಿಜಯಶ್ರೀ ಸಬರದ, ಪ್ರಸಾರಾಂಗ, ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ, ೨೦೧೨, ಪುಟ-೩೩೭-೩೩೮.

೪೫. ಡಾ. ಪೋಲಂಕಿ ರಾಮಮೂರ್ತಿ, ಸೀತಾಯಣ, ವಿಚಾರಿ ಪ್ರಕಾಶನ, ಶಿವಮೊಗ್ಗ-೨, ೧೯೮೪, ಪುಟ-೧೦೪.

## ಅಧ್ಯಾಯ-೩

## ರಾಮಾಯಣಗಳಲ್ಲಿ ಸ್ತ್ರೀ ಪಾತ್ರಗಳ ನಿರ್ವಚನ

### ೩.೧ ರಾಮಾಯಣಗಳ ಪರಂಪರೆ

ಭಾರತೀಯ ಸಮಾಜ ಇಡಿಯಾಗಿ ರಾಮಾಯಣ, ಮಹಾಭಾರತದ ಕಥೆಗಳ ಆಧಾರದ ಮೇಲೆಯೇ ಬೆಳೆದಿದೆ ಎಂಬ ಭಾವನೆಯಿದೆ. ಏಕೆಂದರೆ ಭಾರತೀಯ ಮನಸ್ಸುಗಳು ರಾಮಾಯಣ, ಭಾರತಗಳ ಪಾತ್ರಗಳಲ್ಲಿ ಲೀನವಾಗಿವೆ. ಹೀಗಾಗಿ ಪ್ರತಿಯೊಂದು ಸಂಬಂಧಗಳಲ್ಲೂ ಅವೇ ಪಾತ್ರಗಳ ಗುಣಗಳನ್ನು ನಿರೀಕ್ಷಿಸುವುದು ಸಹಜವೇ ಆಗಿಹೋಗಿದೆ. ಇದು ಭಾರತದ ಎಲ್ಲ ಕ್ಷೇತ್ರಗಳ ಮೇಲೂ ಪರಿಣಾಮ ಬೀರಿದೆ. ಮೂಲ ರಾಮಾಯಣದ ಕಥೆ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದೆ. ಆದರೆ ಇದು ಎಲ್ಲ ಭಾರತೀಯ ಭಾಷೆಗಳಲ್ಲೂ ಅನುವಾದಿತವಾಗಿ ಹರಡಿಕೊಂಡಿದೆ. ಭಾಷೆ, ಲಿಪಿ, ಕಾವ್ಯಗಳಾಗಿ ನಿಲ್ಲದೆ ನಿತ್ಯದ ಬದುಕಿನಲ್ಲಿ ಹಾಸುಹೊಕ್ಕಾಗಿ ಸಮಾಜವನ್ನು ಬೆಸೆಯುವಲ್ಲಿ ಪ್ರಧಾನ ಪಾತ್ರವಹಿಸಿವೆ. ಸಂಸ್ಕೃತ ಭಾಷೆ ಮೃತಭಾಷೆ ಎಂಬುದಾಗಿ ಇಂದು ಹೇಳಿದರೂ ಸಾಹಿತ್ಯದ ದೃಷ್ಟಿಯಿಂದ, ಕಥೆಯ ದೃಷ್ಟಿಯಿಂದ ರಾಮಾಯಣದ ವಿಚಾರ ಬಂದಾಗ ಇದು ಸುಳ್ಳು ಎನ್ನುವಷ್ಟರ ಮಟ್ಟಿಗೆ ಪ್ರಭಾವ ಬೀರಿದೆ.

ಭಾಷೆಗಳು ಬೆಳೆದಂತೆ ರಾಮಾಯಣಗಳೂ ಬೆಳೆದವು. ಒಂದೇ ಭಾಷೆಯಲ್ಲಿ ಹಲವಾರು ರಾಮಾಯಣಗಳು ಸೃಷ್ಟಿಯಾದವು. ಇವುಗಳಲ್ಲಿ ಕೆಲವು ಭಾಷಾಂತರ, ಕೆಲವು ಭಾವಾನುವಾದ, ಕೆಲವು ಪಾತ್ರ, ಸನ್ನಿವೇಶಗಳಲ್ಲಿ ಮೂಲಕ್ಕಿಂತ ಬದಲಾದ ರೀತಿಯಲ್ಲಿ ಅಭಿವ್ಯಕ್ತಗೊಂಡವು. ಕೆಲವೊಮ್ಮೆ, ಕೆಲವು ಧರ್ಮ ಮತ್ತು ಆಶ್ರಿತ ರಾಜರನ್ನು ಸಮೀಕರಿಸಿ ಕಾವ್ಯವನ್ನು ಬೆಳೆಸುವ ಪರಿಪಾಠದಿಂದಾಗಿ ಹಲವಾರು ಬದಲಾವಣೆಗಳು ಕಂಡುಬಂದವು. ಇದು ಕೇವಲ ಭಾಷೆ, ಕಥೆಗಳ ಬೆಳವಣಿಗೆಯಲ್ಲ. ಜೈನ, ಬೌದ್ಧ ಧರ್ಮಗಳಲ್ಲೂ ರಾಮಾಯಣ ಕಥೆಗಳು ರಚನೆಯಾದವು. ವಿಶೇಷವೆಂದರೆ ಆಯಾ ಧರ್ಮಗಳ ಅನುಸಾರವಾಗಿ ಕಥಾ ರಚನೆಯಲ್ಲೂ ಭಿನ್ನತೆಗಳು ಬಂದವು. ಉದಾಹರಣೆ ಜೈನ ರಾಮಾಯಣದಲ್ಲಿ ರಾಮನು ರಾವಣ ವಧೆ ಮಾಡದೆ ಲಕ್ಷ್ಮಣನಿಂದ ವಧೆ ಮಾಡಿಸಲ್ಪಟ್ಟಿರುವುದನ್ನು ಕಂಡಾಗ ಅಹಿಂಸಾತತ್ವವನ್ನು ಎತ್ತಿಹಿಡಿಯುವುದಕ್ಕಾಗಿ ಈ ಬದಲಾವಣೆಯನ್ನು ಮಾಡಿಕೊಳ್ಳಲಾಗಿದೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆದರೂ ಸ್ತ್ರೀ ಪಾತ್ರಗಳಿಗೆ ನ್ಯಾಯ ಒದಗಿಸುವ ನಿಟ್ಟಿನಲ್ಲಿ ಇಂತಹ ಪ್ರಯತ್ನಗಳು ಬಹಳ ಕಡಿಮೆ.

### ೩.೨ ವೈದಿಕ ಪರಂಪರೆಯ ರಾಮಾಯಣಗಳು

ವಾಲ್ಮೀಕಿ ರಾಮಾಯಣ ವೈದಿಕ ಪರಂಪರೆಯ ರಾಮಾಯಣದ ಕಾಲವನ್ನು ನಿರ್ಧರಿಸುವಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ, ಸ್ಪಷ್ಟತೆಯಿಲ್ಲ. ಆದರೂ ಬಹಳಷ್ಟು ವಿದ್ವಾಂಸರು ಒಪ್ಪಿರುವಂತೆ ಕ್ರಿಸ್ತಪೂರ್ವ ಆರನೆಯ ಶತಮಾನದ ಹೊತ್ತಿಗೆ ರಾಮಾಯಣವು ರಚಿತವಾಗಿದೆ. ಇಲ್ಲಿಯೂ ಒಂದು ಮುಖ್ಯ

ವಿಚಾರವೆಂದರೆ ಇತಿಹಾಸಕಾರರು ಎಂದು ಹೇಳುವ ಜೈನ ತೀರ್ಥಂಕರರ ಕಾಲ ಗಣನೆಯ ಆಧಾರದಿಂದ ರಾಮಾಯಣದ ಕಾಲವನ್ನೂ ಇನ್ನೂ ಹಿಂದಕ್ಕೆ ಒಯ್ಯಬಹುದಾಗಿದೆ. ಏಕೆಂದರೆ ಜೈನರ ನಂಬಿಕೆಯಂತೆ ಆದಿತೀರ್ಥಂಕರನು ರಾಮಾಯಣದ ಕಥೆಯನ್ನು ಹೇಳುತ್ತಾನೆ. ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ಪಾರ್ಶ್ವನಾಥ ಮಹಾವೀರನಿಗಿಂತ ೨೫೦ ವರ್ಷಗಳಷ್ಟು ಹಿಂದಿನವನು. ಅಂದರೆ ಈತ ಕ್ರಿ.ಪೂ ಒಂಬತ್ತನೆಯ ಶತಮಾನದಲ್ಲಿದ್ದವ. ಇನ್ನೂ ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನು ಕ್ರಿ.ಪೂ ೧೧೦೦ ರಲ್ಲಿದ್ದವನು. ಏಕೆಂದರೆ ನೇಮಿನಾಥನು ಮಹಾಭಾರತದ ಕೃಷ್ಣನ ಸೋದರ ಸಂಬಂಧಿ ಎಂದು ವೈದಿಕ ಮತ್ತು ಜೈನಧರ್ಮಗಳವರು ಒಪ್ಪುತ್ತಾರೆ. ನೇಮಿನಾಥನ ಕಾಲವು ಮಹಾಭಾರತದ ಕಾಲವೇ ಎಂದು ಎಲ್ಲರೂ ಒಪ್ಪಿರುವುದರಿಂದ ರಾಮಾಯಣ ರಚನಾ ಕಾಲವನ್ನು ಇನ್ನೂ ಹಿಂದಕ್ಕೆ ಒಯ್ಯಬಹುದಾಗಿದೆ.

ಇನ್ನೂ ಒಂದು ಗಮನಾರ್ಹ ಅಂಶವೆಂದರೆ ಮಹಾಭಾರತದ ಕುರುಕ್ಷೇತ್ರದ ಯುದ್ಧಕಾಲವನ್ನು ಕ್ರಿ.ಪೂ. ೩೧೦೦ ಎಂದು ನಿರ್ಣಯಿಸಿದ್ದಾರೆ. ಅದರ ಆಧಾರದಿಂದ ನೋಡಿದರಂತೂ ರಾಮಾಯಣದ ಕಾಲ. ಇನ್ನೂ ಹಿಂದಕ್ಕೆ ಹೋಗುತ್ತದೆ. ಹೀಗಾಗಿ ರಾಮಯಣದ ಕಾಲವನ್ನು ಕ್ರಿ.ಪೂ ೩೬೦೦ ಕ್ಕೂ ಹಿಂದೆಯೆಂದು ಹೇಳಬಹುದು. ರಾಮಾಯಣದ ಕಥೆಗಳು, ವ್ಯಾಖ್ಯಾನಗಳು, ಪಾತ್ರಗಳು ಜನಮಾನಸದಲ್ಲಿ ನೆಲೆಸಿ ಬೆರೆತುಹೋಗಿವೆ. ಹಾಗಾಗಿ ಲೌಕಿಕ ಸಂಸ್ಕೃತ ಸಾಹಿತ್ಯದ ಒಂದು ಭಾಗವನ್ನು ರಾಮಾಯಣವು ಇಡಿಯಾಗಿ ಆಕ್ರಮಿಸಿಕೊಂಡಿದೆ ಎಂದು ನಿರ್ವಿವಾದವಾಗಿ ಹೇಳಬಹುದಾಗಿದೆ. ಸಂಸ್ಕೃತ ಕಾವ್ಯಪದ್ಧತಿಯಲ್ಲಿ ಹರಡಿರುವ ರಾಮಾಯಣವು ಸಹಜವಾಗಿಯೇ ಇತರ ಭಾರತೀಯ ಭಾಷೆಗಳ ಸಾಹಿತ್ಯದ ಮೇಲೆ ಅಷ್ಟೇ ಏಕೆ ಭಾರತೇತರ ರಾಷ್ಟ್ರಗಳಲ್ಲಿ ಅಂದರೆ ದಕ್ಷಿಣ ಏಷ್ಯಾದ ರಾಷ್ಟ್ರಗಳ ಸಾಹಿತ್ಯದಲ್ಲೂ ರಾಮಾಯಣದ ಕಥೆಯು ತನ್ನ ಸ್ಥಾನವನ್ನು ಭದ್ರವಾಗಿರಿಸಿಕೊಂಡಿರುವುದೇ ಇದಕ್ಕೆ ಸಾಕ್ಷಿ. ಏ.ಕೆ. ರಾಮಾನುಜನ್ ಅವರು ತಮ್ಮ ಪ್ರಸಿದ್ಧ ಮನ್ನೂರು ರಾಮಾಯಣಗಳು (Three Hundred Ramayanas...) ಎಂಬ ಲೇಖನದಲ್ಲಿ ಹೇಳಿರುವಂತೆ ಭಾರತೀಯ ಮತ್ತು ಭಾರತೀಯೇತರ ಭಾಷೆಗಳ ಲಿಖಿತ–ಮೌಖಿಕ ರಾಮಾಯಣಗಳನ್ನು ಪರಿಗಣಿಸಿದರೆ ಆ ಸಂಖ್ಯೆ ಸಾವಿರಕ್ಕಿಂತಲೂ ಹೆಚ್ಚಾಗಬಹುದು.[೧] ವಾಲ್ಮೀಕಿ ರಾಮಾಯಣವು ಭಾರತೀಯ ನಂಬಿಕೆಗಳಲ್ಲಿ ಮೂಲ ರಾಮಾಯಣವೆಂದೇ ಭಾವಿಸಲ್ಪಟ್ಟಿದೆ. ಪ್ರಸ್ತುತ ವಾಲ್ಮೀಕಿ ರಾಮಾಯಣದ ಸ್ಥೂಲ ಕಥೆಯನ್ನು ಸಹ ನಾವಿಲ್ಲಿ ಪ್ರಸ್ತಾಪಿಸಿಲ್ಲ.

**೩.೩ ಆಧ್ಯಾತ್ಮ ರಾಮಾಯಣ**

ಆಧ್ಯಾತ್ಮ ರಾಮಾಯಣವು ಹೆಸರೇ ಸೂಚಿಸುವಂತೆ ಆಧ್ಯಾತ್ಮಿಕತೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದೆ. ಒಂದು ರೀತಿಯ ಪುರಾಣ ಕಾವ್ಯವೆಂದರೂ ಸರಿಯೆ. ಕಥೆಯ ನಿರೂಪಣೆ ಮತ್ತು ಧ್ಯೇಯ ಈ ಎರಡರಲ್ಲೂ ವಿಶೇಷತೆ ಮತ್ತು ಭಿನ್ನತೆಗಳಿಂದ ಕೂಡಿದೆ. ಈ ರಾಮಾಯಣವು ಪಾರ್ವತೀ ಪರಮೇಶ್ವರರ ಸಂಭಾಷಣೆಯ

ರೂಪದಲ್ಲಿದೆ. ಶಿವನು ತಾನು ರಾಮನಿಂದಲೇ ಕೇಳಿದ ರಾಮಚರಿತ್ರೆಯನ್ನು ಪಾರ್ವತಿಗೆ ಹೇಳುತ್ತಾನೆ. ೪೨೦೦ ಶ್ಲೋಕಗಳು, ೬೪ ಸರ್ಗಗಳು, ಏಳು ಕಾಂಡಗಳಿಂದ ಆಧ್ಯಾತ್ಮ ರಾಮಾಯಣವು ಬೆಳೆದಿದೆ.

ಇದರಲ್ಲಿ ರಾಮ ಆದರ್ಶಮಾನವನಾದರೂ ಮಾನವ ಸಹಜ ದೌರ್ಬಲ್ಯಗಳಿಂದ ತಪ್ಪಿಸಿಕೊಳ್ಳಲಾಗಿಲ್ಲ. ಇಲ್ಲಿ ಬ್ರಹ್ಮನ ಪ್ರಾರ್ಥನೆಯಂತೆ ಭೂಭಾರಹರಣಕ್ಕಾಗಿ ರಾಮಾವತಾರವಾಗುತ್ತದೆ. ಅವನ ಪರಿವಾರವೂ ದೇವಾನುದೇವತೆಗಳೆ, ಲಕ್ಷ್ಮಣ ಆದಿಶೇಷನಾದರೆ, ಭರತ ಶತ್ರುಘ್ನರು ಶಂಖಚಕ್ರಾಂಶ ಸಂಭೂತರು. ಸೀತೆಯು ಆದಿಮಾಯೆ. ಅವಳು ಯಾವ ತಪ್ಪನ್ನು ಮಾಡಲಾರಳು. ಅವಳಿಗೆ ಯಾರೂ ಕೆಡುಕನ್ನು ಮಾಡಲು ಸಾಧ್ಯವಿಲ್ಲ. ಇಲ್ಲಿನ ಪಾತ್ರಗಳೆಲ್ಲ ಮೊದಲೇ ತಿಳಿದಿದ್ದು ರಾಮನ ಕಾರ್ಯಸಾಧನೆಗಾಗಿ ಆಯಾ ವಿಘ್ನಗಳನ್ನು ತಂದೊಡ್ಡುತ್ತಾರೆ. ಇದಕ್ಕೆ ಮಂಥರೆ, ರಾವಣರೂ ಹೊರತಲ್ಲ. ರಾಮನು ಜನಿಸುವಾಗಲೇ ಶಂಖ ಚಕ್ರಗದಾಪಾಣಿಯಾಗಿ ಕೌಸಲ್ಯೆಗೆ ಕಾಣಿಸಿ ಕೊಳ್ಳುತ್ತಾನೆ. ನಂತರ ಅವಳ ಪ್ರಾರ್ಥನೆಯಂತೆ ಮನುಷ್ಯರೂಪನಾಗುತ್ತಾನೆ.

ತಾಟಕಿಯ ವಧೆಯಾದ ಮೇಲೆ ಆಕೆಯು ಶಾಪಮುಕ್ತಳಾಗಿ ತೋಜೋಮಯಳಾಗಿ ರಾಮನ ಶರೀರದಲ್ಲಿ ಸೇರಿಹೋಗುತ್ತಾಳೆ. ಬಾಲಕಾಂಡದಲ್ಲಿ ಬರುವ ಅನೇಕ ಕಥೆಗಳಲ್ಲಿ ಅಹಲ್ಯಾ ಶಾಪವಿಮೋಚನೆಯನ್ನು ಬಿಟ್ಟು ಮತ್ಯಾವುದೇ ಪ್ರಸಂಗಗಳು ಇಲ್ಲಿಲ್ಲ. ಇಲ್ಲಿನ ಕಥೆಯ ಪ್ರಕಾರ ಅಹಲ್ಯೆಯು ರಾಮನ ಪಾದಸ್ಪರ್ಶವಾಗುವವರೆಗೆ ಕಲ್ಲಾಗಿಯೇ ಗೌತಮಾಶ್ರಮದಲ್ಲಿರುತ್ತಾಳೆ. ಸೀತಾಸ್ವಯಂವರ ಸಂಕ್ಷಿಪ್ತವಾಗಿದೆ. ಸರಸ್ವತಿಯು ಮಂಥರೆ ಮತ್ತು ಕೈಕೇಯಿಯರನ್ನು ಪ್ರೇರೇಪಿಸಿ ಪಟ್ಟಾಭಿಷೇಕಕ್ಕೆ ವಿಘ್ನವನ್ನುಂಟುಮಾಡುತ್ತಾಳೆ. ಶೂರ್ಪನಖಿಯು ನೇರವಾಗಿ ರಾವಣನ ಬಳಿಯೇ ಹೋಗಿ ಅವನನ್ನು ಸೀತಾಪಹರಣಕ್ಕಾಗಿ ಪ್ರಚೋದಿಸುತ್ತಾಳೆ. ಅಕಂಪನನ ಪ್ರವೇಶವಿಲ್ಲ.

ರಾಮನು ಸೀತೆಗೆ ರಾವಣನು ಅಪಹರಿಸಲು ಬರುವ ವಿಷಯವನ್ನು ತಿಳಿಸಿ ನೀನು ಅಗ್ನಿಯಲ್ಲಿ ಅದೃಶ್ಯರೂಪದಿಂದ ಸೇರಿಕೊಂಡು ನಿನ್ನ ಛಾಯಾರೂಪವಾದ ಮಾಯಾಸೀತೆಯನ್ನು ಗುಡಿಸಿಲಿನಲ್ಲಿರಿಸು ಎನ್ನುತ್ತಾನೆ. ಈ ವಿಚಾರ ಲಕ್ಷ್ಮಣನಿಗೂ ತಿಳಿದಿರುವುದಿಲ್ಲ. ಮುಂದೆ ಉತ್ತರಕಾಂಡದಲ್ಲಿ ಸೀತೆಯು ತಾವು ವೈಕುಂಠಕ್ಕೆ ಹೊರಡಬೇಕಾದ ವಿಷಯವನ್ನು ನೆನಪಿಸುತ್ತಾಳೆ. ಆಗ ರಾಮನು ಲೋಕಾಪವಾದದ ನೆಪದಲ್ಲಿ ಅವಳನ್ನು ತ್ಯಜಿಸುವುದಾಗಿ ತಿಳಿಸುತ್ತಾನೆ. ಆವರೆಗೆ ಅವಳು ವಾಲ್ಮೀಕಿಯ ಆಶ್ರಮದಲ್ಲಿರಬೇಕೆಂದೂ ಆಕೆಗೆ ಪುತ್ರದ್ವಯವು ತನ್ನಂಶದಿಂದ ಜನಿಸುವರು ಎಂದು ವಿವರಿಸಿ, ಲೋಕಪ್ರತ್ಯಯಾರ್ಥವಾಗಿ ಸೀತೆಯು ಭೂವಿವರವನ್ನು ಪ್ರವೇಶಿಸಿ ವೈಕುಂಠಕ್ಕೆ ತೆರಳಲು ಸೂಚಿಸುತ್ತಾನೆ.

ಅಧ್ಯಾತ್ಮರಾಮಾಯಣದ ಕಾಲವನ್ನು ಗ್ರಂಥದ ಆಧಾರದಿಂದ ಹೇಳಲು ಸಾಧ್ಯವಿಲ್ಲ. ಅನೇಕ ಭಾರತೀಯ ಭಾಷೆಗಳಲ್ಲಿರುವ ರಾಮಾಯಣಗಳು ಇದರಿಂದ ಪ್ರಭಾವಿತವಾಗಿವೆ. ತಮಿಳಿನ ಕಂಬರಾಮಾಯಣದ ಮೇಲೆಯೂ ಇದರ ಪ್ರಭಾವವಿರುವುದರಿಂದ ಇದನ್ನು ಹತ್ತನೆಯ ಶತಮಾನಕ್ಕಿಂತಲೂ

ಹಿಂದಿನ ಕಾಲಕ್ಕೆ ಸೇರಿಸಬಹುದು. ಇದರ ನಂತರ ಆನಂದ ರಾಮಾಯಣವನ್ನು ಹೆಸರಿಸಬಹುದು. ಅದೇ ರೀತಿ ಅದ್ಭುತ ರಾಮಾಯಣವನ್ನೂ ಹೆಸರಿಸಬಹುದು. ಇಲ್ಲಿ ಬರುವ ತಾಟಕಿಯ ವಧೆ ಸ್ತ್ರೀ ಹತ್ಯೆಯಲ್ಲ, ಸೀತೆಗೆ ವನವಾಸವಿಲ್ಲ ಛಾಯಾ ರೂಪದ ಮಾಯಾಸೀತೆ ಇರುತ್ತಾಳೆ. ಲೋಕಾಪವಾದವು ಸೂರಣದಿಂದೇ ಆಗಿದೆ. ಸೀತೆಯ ಅಗ್ನಿ ಪ್ರವೇಶವೂ ವೈಕುಂಠಕ್ಕೆ ತೆರಳುವ ಪೂರ್ವದ ಕ್ರಮ. ಪೂರ್ವ ನಿರ್ಧಾರಿತ ಮೌಲ್ಯಗಳ ಸ್ಥಾಪನೆಗೆ ರಾಮಾವತಾರದ ಲೇಪ ಹಚ್ಚಿ ಉಳಿದ ಪಾತ್ರಗಳು ರಾಮ ಪಾತ್ರದ ಪೋಷಣೆಯ ತಮ್ಮ ಪರಮಗುರಿ ಎಂಬಂತೆ ನಿರೂಪಿಸಲಾಗಿದೆ.

**೩.೪ ಆನಂದ ರಾಮಾಯಣ ಮತ್ತು ಅದ್ಭುತ ರಾಮಾಯಣ**

ಆನಂದ ರಾಮಾಯಣದಲ್ಲಿ ಸೀತೆಯೆಂದರೆ ಆನಂದವೆಂದು ವಿವರಿಸಲಾಗಿದೆ. ಈ ಕೃತಿ ಶಿವ ಪಾರ್ವತಿಯ ಸಂವಾದದಲ್ಲಿದೆ. ಆನಂದ ರಾಮಾಯಣದ ಕಥೆಯಲ್ಲಿ ಲಕ್ಷ್ಮಿಯೇ ಸೀತಾರೂಪದಲ್ಲಿ ಜನಿಸುತ್ತಾಳೆ. ಅದ್ಭುತ ರಾಮಾಯಣದಲ್ಲಿ ನಾರದರು ಲಕ್ಷ್ಮಿಗೆ ಕೊಟ್ಟ ಶಾಪದ ಫಲವಾಗಿ ಸೀತೆಯ ಜನನವಾಗುತ್ತದೆ. ರಾವಣನನ್ನು ಕೊಂದೆನೆಂದ ರಾಮನಿಗೆ ಸಾವಿರ ತಲೆಗಳ ರಾವಣನ ಸೋದರ ಇನ್ನೊಬ್ಬ ರಾವಣನ ಬಗ್ಗೆ ತಿಳಿಸುತ್ತಾಳೆ. ಅವನನ್ನು ಕೊಲ್ಲಲು ಹೋದ ರಾಮನು ಮೂರ್ಛಿತನಾದಾಗ ಸೀತೆಯೇ ಅವನನ್ನು ಕೊಲ್ಲುತ್ತಾಳೆ. ಹನ್ನೆರಡನೆಯ ಶತಮಾನದಲ್ಲಿ ರಚಿಸಲ್ಪಟ್ಟ ಅದ್ಭುತ ರಾಮಾಯಣವು ಮಾತ್ರ ಸೀತೆಯನ್ನು ಭಿನ್ನವಾಗಿ ಚಿತ್ರಿಸುತ್ತದೆ. ಕಾಶ್ಮೀರದ ಶಾಕ್ತ ಪಂಥದಿಂದ ಪ್ರಭಾವಿತವಾದ ಈ ರಾಮಾಯಣದಲ್ಲಿ ರಾವಣ-ಮಂಡೋದರಿಯರ ಮಗಳಾದ ಸೀತೆ ಭದ್ರಕಾಳಿಯ ರೂಪು ತಾಳಿ ರಾವಣನನ್ನು ಕೊಲ್ಲುತ್ತಾಳೆ ಡಾ. ಸಿ.ಎನ್. ರಾಮಚಂದ್ರನ್ ಅವರ ಅಭಿಪ್ರಾಯದ ಪ್ರಕಾರ ವಿದ್ವಾಂಸರು ಹೇಳುವಂತೆ ಹತ್ತನೆಯ ಶತಮಾನದ ಅಭಿನಂದನ ಸಂಸ್ಕೃತದ ರಾಮ ಚರಿತದಲ್ಲಿಯೂ ಶಾಕ್ತ ಪಂಥಗಳೊಡನೆ ರಾಮಕಥೆಯನ್ನು ಸೇರಿಸಲಾಗಿದೆ; ಮತ್ತು ಒರಿಯಾ ಭಾಷೆಯ ಸರಳದಾಸನ ರಾಮಾಯಣವೂ ಸೀತೆಯ ಪಾತ್ರ ಚಿತ್ರಣದಲ್ಲಿ ಅದ್ಭುತ ರಾಮಾಯಣ ಪರಂಪರೆಯನ್ನು ಅನುಸರಿಸುತ್ತದೆ. ಪ್ರಾಯಃ ರಾಮಾಯಣಗಳಿಗಿಂತ ಒಂದು ಸಹಸ್ರಮಾನಕ್ಕು ಹಿಂದಿನಿಂದಲೇ ಕೃಷಿ-ಫಲವಂತಿಕೆಯ ದೇವತೆಯೆಂದು ಸೀತೆಯು ಪೂಜಿಸಲ್ಪಡುತ್ತಿದ್ದಳು; ಮತ್ತು ಆ ಕಾರಣದಿಂದಲೇ ಅವಳ ಜನ್ಮ ಮತ್ತು ಮರಣ ಎರಡೂ ಭೂಮಿಯಲ್ಲಿಯೇ ಆಗುತ್ತದೆ. "ಕೌಣಿಕ ಸೂತ್ರ"ವು ಅವಳನ್ನು ಎಲ್ಲಾ ದೇವತೆಗಳ, ಮಾನವರ ಹಾಗೂ ಪ್ರಾಣಿಗಳ ತಾಯಿ ಎಂದು ವರ್ಣಿಸುತ್ತದೆ. ಎ.ಕೆ. ರಾಮಾನುಜನ್ ಅವರು ಹೇಳುವಂತೆ ೧೮ನೆಯ ಶತಮಾನದಲ್ಲಿ ಬರೆಯಲ್ಪಟ್ಟ ರಾಮಾಕೀನ್ ಎಂಬ ಥಾಯ್ ರಾಮಾಯಣದಲ್ಲಿಯೂ ಸೀತೆ ರಾವಣ-ಮಂಡೋದರಿಯರ ಮಗಳು.[೨] ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ಸೀತೆ ರಾವಣನ ಮಗಳು ಎಂಬುದನ್ನು ಅನೇಕ ರಾಮಾಯಣಗಳು ಹಾಗೂ ಜನಪದ ರಾಮಾಯಣಗಳು ಪ್ರತಿಪಾದಿಸುತ್ತವೆ. ಸೀತೆಯು ರಾವಣಾತ್ಮಜೆ ಎಂಬುದನ್ನು ಶಿಷ್ಟ ರಾಮಾಯಣಗಳು

ಹೇಳದಿರುವುದಕ್ಕೆ ಅಥವಾ ಅದರ ಬಗ್ಗೆ ಮೌನವಾಗಿರುವುದಕ್ಕೆ ಕಾರಣವೇನು ಎಂಬ ಪ್ರಶ್ನೆ ಎತ್ತುತ್ತಾ ವೈದಿಕ ಚಿಂತನೆಯ ಅಗಮ್ಯಗಮನದ ಬಗ್ಗೆ ಇದ್ದ ಭೀತಿ ಮತ್ತು ಅದು ಘೋರಪಾತಕವೆಂಬ ನಿಲುವನ್ನು ಕಾರಣವಿರಬಹುದೆಂದು ಸಿ.ಎನ್.ಆರ್. ಪ್ರತಿಪಾದಿಸುತ್ತಾರೆ. ಅಗಮ್ಯಗಮನದ ಭೀತಿ ಆರ್ಷೇಯ ಹಿಂದೂ ಸಮಾಜದಲ್ಲಿ ಎಷ್ಟಿತ್ತೆಂದರೆ, ಸ್ಮೃತಿಯೊಂದು ಸ್ತ್ರೀ ತನ್ನ ತಂದೆ-ಸಹೋದರ-ಮೈದುನ ಅಥವಾ ವಯಸ್ಸಿಗೆ ಬಂದ ಮಗ ಇವರಲ್ಲಿ ಯಾರೊಬ್ಬರೊಡನೆಯೂ ಏಕಾಂತದಲ್ಲಿರಬಾರದೆಂದು ವಿಧಿಸಿತು.[೩] ಒಟ್ಟಾರೆ (ಭಾರತೀಯ) ಮಹಾಕಾವ್ಯಗಳ ಜಗತ್ತು ಸಂಪೂರ್ಣವಾಗಿ ಪುರುಷ ಜಗತ್ತು; ಮತ್ತು ಈ ಜಗತ್ತಿನಲ್ಲಿ ಪುರುಷರು ಸ್ತ್ರೀಯರ ಬಗ್ಗೆ ಇರುವ ತಮ್ಮ ಉತ್ಕಟ ಲೈಂಗಿಕ ಭೀತಿಯನ್ನು ಮತ್ತೆ ಮತ್ತೆ ವ್ಯಕ್ತಪಡಿಸುತ್ತಾರೆ' ಎಂಬ ಜಾನ್ ಸ್ಮಿತ್‌ನ ಅಭಿಪ್ರಾಯ ಸತ್ಯವೆನಿಸುತ್ತದೆ.[೪]

### ೩.೫ ತೊರವೆ ರಾಮಾಯಣ

ಕನ್ನಡದಲ್ಲಿ ಹದಿನಾರನೆಯ ಶತಮಾನದಲ್ಲಿ ರಚಿತವಾದ ತೊರವೆ ರಾಮಾಯಣವೇ ಮೊದಲ ಲಭ್ಯ ವೈದಿಕ ರಾಮಾಯಣವಾಗಿದೆ. ಕನ್ನಡ ಭಾಷೆಯು ದ್ರಾವಿಡ ಭಾಷೆಗಳಲ್ಲಿ ಒಂದಾದರೂ, ಆರ್ಯ ಭಾಷೆಯ ರಾಮಾಯಣ ತನ್ನ ಪ್ರಭಾವವನ್ನು, ಆಕರ್ಷಣೆಯನ್ನು ಬಿಟ್ಟಿಲ್ಲ. ದಕ್ಷಿಣದ ಎಲ್ಲ ಭಾಷೆಗಳಲ್ಲೂ ರಾಮಾಯಣ ಕಾವ್ಯವು ರಚಿತವಾಗಿದೆ. ಭಾಷಿಕ ಹಿನ್ನಲೆಯಲ್ಲಿ ನೋಡಿದಾಗಲೂ ಪ್ರಾಯಶಃ ಕನ್ನಡ ಭಾಷೆಯು ಒಂದು ಸ್ಥಿತಿಯಲ್ಲಿದ್ದಾಗಿನಿಂದಲೇ ಈ ಕಾವ್ಯವು ಕನ್ನಡದಲ್ಲಿ ರಚಿತವಾಗಿರಲು ಸಾಧ್ಯ ಎಂದು ಊಹಿಸಬಹುದಾಗಿದೆ. ಆದರೂ ಲಭ್ಯ ಕೃತಿಯು ತೊರವೆ ರಾಮಾಯಣವಾಗಿರುವುದರಿಂದ ಪ್ರಸ್ತುತ ವಿಚಾರದಲ್ಲಿ ಹೆಚ್ಚಿನ ಚರ್ಚೆಯ ಸಾಧ್ಯವಾಗಿಲ್ಲ. ಆದರೆ ಇದಕ್ಕೂ ಮೊದಲು ಇದ್ದಿರುವ ಅದು ಮುಂದೆ ಲಭಿಸುವ ಸಾಧ್ಯತೆಗಳನ್ನೂ ಅಲ್ಲಗಳೆಯಲು ಸಾಧ್ಯವಿಲ್ಲ. ಇದರಲ್ಲಿ ಸ್ತ್ರೀ ಪಾತ್ರಗಳ ಚಿತ್ರಣವೂ ವೈದಿಕ ರಾಮಾಯಣಗಳ ಪರಂಪರೆಯಲ್ಲೇ ಸಾಗಿದೆ.

### ೩.೬ ಬೌದ್ಧ ಪರಂಪರೆಯ ರಾಮಾಯಣಗಳು

'ದಶರಥ ಜಾತಕ', 'ಅನಾಮಿಕ ಜಾತಕ', ಮತ್ತು 'ದಶರಥ ಕಥಾನಹಂ' ಎನ್ನುವ ಜಾತಕ ಕಥೆಗಳಲ್ಲಿ ಈ ಜಾತಕ ಹೇಳಲಾಗಿದೆ. 'ಸಾಮಜಾತಕ', 'ವ್ಯಸಂತರ ಜಾತಕ', 'ಸಂಬುಲ ಜಾತಕ' ಮೊದಲಾದ ಜಾತಕಗಳು ರಾಮಾಯಣದ ಇತರ ಕಥೆಗಳನ್ನು ಹೇಳುತ್ತವೆ. ಹಲವು ವಿದ್ವಾಂಸರು ಬೌದ್ಧರಾಮಾಯಣ ಪರಂಪರೆಯೇ ಪ್ರಾಚೀನ ಎಂದಿದ್ದಾರೆ. ಆದರೆ ಬೌದ್ಧ ಧರ್ಮದ ಕಾಲ ಮತ್ತು ವೈದಿಕ ಧರ್ಮದ ಕಾಲ ಮತ್ತು ಜೈನಧರ್ಮದ ಕಾಲವನ್ನು ಪರಸ್ಪರ ಹೋಲಿಸಿದಾಗ ವಿದ್ವಾಂಸರ ವಾದಗಳಿಗೆ ಹೆಚ್ಚಿನ ಬಲವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದರೂ ರಾಮಾಯಣ ಕಥೆಗೆ ಜಾನಪದವೇ ಮೂಲವಿರಬಹುದೆಂಬ

ಅಂಶವನ್ನು ಅಲ್ಲಗೆಳೆಯುವಂತಿಲ್ಲ. ಜಾನಪದ ಕಥೆಗೂ ಆಧಾರವಾಗಿ ಕೆಲವು ವ್ಯಕ್ತಿಗಳು ಇರಬೇಕಲ್ಲವೇ? ಈ ಜಾತಕಗಳು ಮೊದಲು ಶ್ರುತಿ ರೂಪದಲ್ಲಿದ್ದು ನಂತರ ಕ್ರಿ.ಪೂ. ೩ನೆಯ ಶತಮಾನದ ಹೊತ್ತಿಗೆ ಬರವಣಿಗೆಯ ರೂಪ ಕಂಡಿತು ಎಂದು ಹೇಳಲಾಗಿದೆ.

ಪಾಲೀ ಭಾಷೆಯ 'ಜಾತಕ ಕಥಾವಣ್ಣನ'ದಲ್ಲಿ ಸಂಕ್ಷಿಪ್ತ ರಾಮಕಥೆಯಿದೆ. 'ಅನಾಮಿಕ ಜಾತಕಂ'ನಲ್ಲೂ ರಾಮಾಯಣದ ಕಥೆಗಳಿವೆ. ಹಾಗಾಗಿ ಬೌದ್ಧ ಧರ್ಮದಲ್ಲಿಯೂ ರಾಮಾಯಣವು ಜನಪ್ರಿಯವಾಗಿತ್ತು ಎಂದು ಹೇಳಬಹುದಾಗಿದೆ. ಬೌದ್ಧ ಮತ್ತು ಜೈನ ರಾಮಾಯಣಗಳು ಮೂಲಕಥೆಯನ್ನು ತಮ್ಮ ಧರ್ಮಾನುಸಾರ ಅಲ್ಪ ಸ್ವಲ್ಪ ಬದಲಾವಣೆಯನ್ನು ಮಾಡಿಕೊಂಡಿರುವುದು ಕಂಡು ಬಂದಿದೆ. ಕನ್ನಡದಲ್ಲಿ ಬೌದ್ಧ ರಾಮಾಯಣಗಳು ಲಭ್ಯವಾಗಿಲ್ಲ. ಎ.ಕೆ. ರಾಮಾನುಜನ್ ಅವರು ಜೈನ ವಕ್ತವ್ಯಗಳ ಬಗ್ಗೆ ಚರ್ಚಿಸುತ್ತಾ ಇಲ್ಲಿನ ರಾಮಕಥೆಯು ಹಿಂದೂ ಮೌಲ್ಯಗಳಿಗೆ ವ್ಯತಿರಿಕ್ತವಾಗಿವೆ ಹಾಗೂ ಹಿಂದೂಗಳು ರಾವಣನ ಮುಖಕ್ಕೆ ಮಸಿ ಬಳಿದು ಅವನನ್ನು ದುಷ್ಟನನ್ನಾಗಿ ಚಿತ್ರಿಸಿದ್ದಾರೆ ಎಂಬ ಭಾವನೆ ಇದೆ ಎಂದು ಅಭಿಪ್ರಾಯ ಪಡುತ್ತಾರೆ.

**೩.೭ ಬೌದ್ಧ ರಾಮಾಯಣ**

ಬೌದ್ಧ ರಾಮಾಯಣಗಳಲ್ಲಿ ಬೌದ್ಧಮತ ವಿಶೇಷವಾಗಿ ಪ್ರಭಾವವನ್ನು ಬೀರಿದೆ. ದಶರಥ ಜಾತಕದಲ್ಲಿ ರಾಮಾಯಣದ ಕಥೆಗೆ ಸಿಗುತ್ತದೆ. ವಿಶೇಷವೆಂದರೆ ಇದರಲ್ಲಿ ರಾವಣನ ಪ್ರಸ್ತಾವವೇ ಇಲ್ಲ. ಸೀತಾಪಹರಣವಂತೂ ಇಲ್ಲವೇ ಇಲ್ಲ! ರಾಮ, ಲಕ್ಷ್ಮಣ, ಸೀತೆ ಈ ಮೂವರೂ ಅಣ್ಣತಂಗಿಯರು. ಒಂದೇ ತಾಯಿಯ ಮಕ್ಕಳು. ದಶರಥನಿಗಿದ್ದ ಹದಿನಾರು ಸಾವಿರ ಹೆಂಡತಿಯರಲ್ಲಿ ಪ್ರಧಾನಳಾದ ಒಬ್ಬ ರಾಣಿಯ ಮಗ ಭರತ. ಈ ರಾಣಿಗೆ ದಶರಥನು ಎಂದೋ ಒಂದು ವರವನ್ನು ಕೊಟ್ಟಿರುತ್ತಾನೆ. ಅದು ರಾಮನ ಪಟ್ಟಾಭಿಷೇಕಕ್ಕೆ ಅಡ್ಡಿಯಾಯಿತು. ರಾಮ, ಲಕ್ಷ್ಮಣ, ಸೀತೆಯರು ಕಾಡಿಗೆ ಹೋಗಬೇಕಾಯಿತು. ಭರತನು ಕಾಡಿಗೆ ಹೋಗಿ ಅವನನ್ನು ಹಿಂದಿರುಗುವಂತೆ ಪ್ರಾರ್ಥಿಸುವಾಗ ರಾಮನು ಒಪ್ಪುವುದಿಲ್ಲ. ಅವಧಿ ಮುಗಿದ ಬಳಿಕವೇ ಹಿಂದಿರುಗುತ್ತಾನೆ. ಮರಳಿದ ಮೇಲೆ ಸೀತೆಯನ್ನು ಮದುವೆ ಮಾಡಿಕೊಂಡು ಸುಖವಾಗಿ ರಾಜ್ಯಭಾರ ಮಾಡುತ್ತಾನೆ. ಬೌದ್ಧರ ಪ್ರಕಾರ ರಾಮಪಂಡಿತನು ಸತ್ವಗುಣ ಪ್ರಧಾನನಾಗಿದ್ದು ಬುದ್ಧನಿಗೆ ಸರಿಸಾಟಿಯಾಗಿದ್ದಾನೆ. ಬುದ್ಧನು ತನ್ನ ಹಿಂದಿನ ಜನ್ಮಗಳಲ್ಲಿ ರಾಮನಾಗಿ ಹುಟ್ಟಿದ್ದೂ ಒಂದು ಜನ್ಮ ಈತ ಪರಮಸಾಧು, ವೈರಾಗ್ಯನಿಧಿ.

**೩.೮ ಜೈನರಾಮಾಯಣ ಪರಂಪರೆ**

ಜೈನರಲ್ಲಿ ಮೂರು ರಾಮಾಯಣ ಪರಂಪರೆಗಳಿವೆ. ಅವುಗಳೆಂದರೆ ವಿಮಲಸೂರಿಯ ಸಂಪ್ರದಾಯ, ಸಂಘದಾಸ ಮತ್ತು ಹರಿಷೇಣರ ಸಂಪ್ರದಾಯ ಮತ್ತು ಗುಣಭದ್ರನ ಸಂಪ್ರದಾಯ. ಇವರೂ ತಮ್ಮ ಮತಧರ್ಮಕ್ಕನುಗುಣವಾಗಿ ರಾಮಾಯಣ ಕಥೆಯನ್ನು ಮಾರ್ಪಡಿಸಿಕೊಂಡಿದ್ದಾರೆ.

ವಿಮಲಸೂರಿಯ ಸಂಪ್ರದಾಯದಲ್ಲಿ ಲಭ್ಯವಿರುವ ರಾಮಾಯಣ ಗ್ರಂಥವೆಂದರೆ ಪ್ರಾಕೃತದಲ್ಲಿರುವ ವಿಮಲಸೂರಿಯ 'ಪಉಮಚರಿಯ'. ಈ ಪರಂಪರೆಯು ಮಹಾವೀರ, ಇಂದ್ರಭೂತಿ, ಗೌತಮ, ಸಾಧುಗಳು, ರಾಹು, ವಿಜಯ ಮುಂತಾದವರ ಮೂಲಕ ಸಾಗಿಬಂದಿದೆಯೆಂದು ವಿಮಲಸೂರಿಯು ಹೇಳಿದ್ದಾನೆ. ಇದರಿಂದ ಜೈನರಾಮಾಯಣದ ಶ್ರುತಿಪರಂಪರೆಯೊಂದು ಇದ್ದಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ. ರವಿಷೇಣನ ಪದ್ಮಪುರಾಣ, ಸ್ವಯಂಭುವಿನ ಅಪಭ್ರಂಶದ ಪಉಚರಿಯ, ಶೀಲಾಚಾರ್ಯನ ಚಉಪ್ಪನ್ನ ಮಹಾಪುರಿಸ ಚರಿಯಂ ಇವುಗಳು ಪ್ರಮುಖ ರಾಮಾಯಣ ಕೃತಿಗಳಾಗಿವೆ.

**ಅ. ಸಂಘದಾಸ ಮತ್ತು ಹರಿಷೇಣರ ಸಂಪ್ರದಾಯ**

ಸಂಘದಾಸ ಮತ್ತು ಹರಿಷೇಣರ ಸಂಪ್ರದಾಯದಲ್ಲಿ ಬಹುಪಾಲು ವೈದಿಕ ಸಂಪ್ರದಾಯದ ಪ್ರಭಾವವಿದೆ. ಮಂಥರೆಯ ಪಾತ್ರ, ಪಾದುಕಾ ಪ್ರಸಂಗ, ಶೂರ್ಪನಖಿಯ ಪ್ರಸಂಗ, ಮಾಯಾಮೃಗದ ವೃತ್ತಾಂತಗಳೆಲ್ಲ ವೈದಿಕದ್ದೇ ಆಗಿವೆ. ವಿಮಲಸೂರಿ ಮತ್ತು ಸಂಘದಾಸರದ್ದು ಶ್ವೇತಾಂಬರ ಸಂಪ್ರದಾಯದ ಧೋರಣೆಯನ್ನು ಹೊಂದಿವೆ. ಗುಣಭದ್ರನದು ದಿಗಂಬರ ಸಂಪ್ರದಾಯದ ಧೋರಣೆಯಾಗಿದೆ. ಇದನ್ನು ಸ್ಥೂಲವಾಗಿ ಉತ್ತರ ದಿಗಂಬರ ಸಂಪ್ರದಾಯದ ಧೋರಣೆಯಾಗಿದೆ. ಇದನ್ನು ಸ್ಥೂಲವಾಗಿ ಉತ್ತರ ಭಾರತ ಮತ್ತು ದಕ್ಷಿಣ ಭಾರತದ ರಾಮಾಯಣದ ಸಂಪ್ರದಾಯಗಳೆಂದು ಗುರುತಿಸಲಾಗುತ್ತದೆ.

**ಆ. ಗುಣಭದ್ರನ ಸಂಪ್ರದಾಯ**

ಗುಣಭದ್ರನು ಉತ್ತರ ಪುರಾಣದಲ್ಲಿ ೧೨೯ ಶ್ಲೋಕಗಳಲ್ಲಿ ರಾಮಕಥೆಯನ್ನು ವಿವರಿಸಿದ್ದಾನೆ. ಗುಣಭದ್ರನ ಪರಂಪರೆಯು ಕ್ರಿ.ಶ. ೧೬ನೆಯ ಶತಮಾನದವರೆಗೆ ತನ್ನ ಪ್ರಭಾವವನ್ನು ಉಳಿಸಿಕೊಂಡಿತ್ತು. ಚಾವುಂಡರಾಯ ಪುರಾಣ, ಜೀವಸಂಬೋಧನೆ, ಪುಣ್ಯಾಸ್ರವ, ರಾಮವಿಜಯ ಕಾವ್ಯ, ಮುಂತಾದವುಗಳಲ್ಲಿ ಇದನ್ನು ಕಾಣಬಹುದು. ಜೈನ ರಾಮಾಯಣಕ್ಕೆ 'ಪದ್ಮಚರಿತ'ವೆಂದು ಹೆಸರು. ರಾಮನ ಪೂರ್ವಭವ ಹಾಗೂ ಪುನರ್ಭವಗಳ ದೃಷ್ಟಿಯಿಂದ ಕಥೆಯನ್ನು ವಿವರಿಸಲಾಗಿದೆ. ತ್ರಿಷಷ್ಠಿಶಲಾಕಾಪುರುಷ (ಚರಿತ್ರೆಯಲ್ಲಿ ರಾಮ ಅಥವಾ ಪದ್ಮ ಲಕ್ಷ್ಮಣರೂ, ರಾವಣನೂ ಶಲಾಕಾಪುರುಷರಲ್ಲಿ) ಪುರಾಣ ಪುರುಷರಾಗಿದ್ದಾರೆ. ಎಂಟನೆಯ ಬಲದೇವ, ವಾಸುದೇವ, ಪ್ರತಿವಾಸುದೇವರಾಗಿ ರೂಪಗೊಂಡಿದ್ದಾರೆ. ಇವರು ಆಧ್ಯಾತ್ಮಿಕ ಜೀವನದಲ್ಲಿ ಅದ್ಭುತ ಉತ್ಕ್ರಾಂತಿಯನ್ನು ಸಾಧಿಸಿದ ಮಹಾಪುರುಷರುಗಳಾಗಿದ್ದಾರೆ. ಈ ರಾಮಾಯಣಗಳು ಭಾರತೀಯ ಸಂಸ್ಕೃತಿಯ ಮತ್ತೊಂದು ಮುಖವನ್ನು ಪ್ರಕಟಿಸುತ್ತವೆ. ಇಲ್ಲಿಯ ರಾಮ ಬಲದೇವ. ಇವನು ಬಲಭದ್ರನೂ ಅಹುದು. ಲಕ್ಷ್ಮಣನೇ ವಾಸುದೇವ-ನಾರಾಯಣ. ಲಕ್ಷ್ಮಣನು ಅಣ್ಣನ ಸಹಾಯದಿಂದ ಪ್ರತಿವಾಸುದೇವನಾದ ರಾವಣನನ್ನು ಕೊಲ್ಲುವನು. ಮುಂದೆ ದಿಗ್ವಿಜಯಕ್ಕೆ ಹೊರಟು ಭಾರತದ ಮೂರು ಖಂಡಗಳನ್ನು ಜಯಿಸಿ

ಚಕ್ರವರ್ತಿಯಾಗುತ್ತಾನೆ. ಮರಣಾನಂತರ ಲಕ್ಷ್ಮಣನಿಗೆ ನರಕ ಪ್ರಾಪ್ತಿಯಾಗುತ್ತದೆ. ಇದರಿಂದ ವ್ಯಾಕುಲಿತನಾದ ರಾಮನು ಜಿನದೀಕ್ಷಿತನಾಗಿ ಮೋಕ್ಷಹೊಂದುತ್ತಾನೆ. ವಿಮಲಸೂರಿಗೆ ವಾಲ್ಮೀಕಿ ರಾಮಾಯಣದ ಪರಿಚಯವಿತ್ತು. 'ಪಉಮಚರಿಯ'ದಲ್ಲಿ ಏಳು ಕಾಂಡಗಳಿವೆ. ಇವು ಕ್ರಮವಾಗಿ ವಿದ್ಯಾಧರಕಾಂಡ, ಭೂಮಿಗೋಚರ ಕಾಂಡ, ದೇಶಾಟನಕಾಂಡ, ಸಿದ್ಧಶಿಲಾಕಾಂಡ, ಯುದ್ಧಕಾಂಡ, ಉತ್ತರಕಾಂಡ, ನಿರ್ವಾಣಕಾಂಡಗಳಾಗಿವೆ.

ರಾವಣಕಥೆಯೆಂದಲೇ ಕಥೆಯು ಪ್ರಾರಂಭವಾಗುತ್ತದೆ. ರಾವಣನು ಗರ್ಭದಲ್ಲಿರುವಾಗಲೇ ಕ್ರೂರಭಾಗಗಳು ತಲೆದೋರುತ್ತವೆ. ಕನ್ನಡಿಯನ್ನು ನೋಡುವುದಕ್ಕೆ ಬದಲಾಗಿ ಖಡ್ಗದಲ್ಲಿಯೇ ಮುಖನೋಡುತ್ತ ಬೆಳೆಯುತ್ತಾನೆ. ಮುಂದೆ ವಿದ್ಯಾಸಾಧಕನಾಗಿ, ದಿಗ್ವಿಜಯಿಯಾಗಿ, ವೀರಯೋಧನಾಗಿ, ವ್ರತನಿಷ್ಠನಾಗಿ ಬಾಳಿಬೆಳೆಯುತ್ತಾನೆ. ಮಂಡೋದರಿಯನ್ನು ಲಗ್ನವಾಗುತ್ತಾನೆ. ದುರ್ಲಂಘ್ಯಪುರದ ರಾಣಿಯಾದ ಉಪರಂಭೆಯು ತಾನೇ ಒಲಿದು ಬಂದರೂ ತಿರಸ್ಕರಿಸಿ ಪತಿಯೊಡನೆ ಬಾಳುವ ಹಾಗೆ ಮಾಡಿ ತನ್ನ ಸಂಯಮವನ್ನು ತೋರಿಸುತ್ತಾನೆ. ಇಲ್ಲಿ ಹನುಮಂತನು ರಾವಣನ ಸ್ನೇಹಿತ.

ಉತ್ತರಕಾಂಡದಲ್ಲಿ ಚೊಚ್ಚಲುಬಸುರಿಯಾದ ಸೀತೆಯನ್ನು ರಾಜ್ಯದ ಮಹಾಜನರ ಅಭಿಪ್ರಾಯಕ್ಕೆ ಮಣಿದು ಕಾಡಿನಲ್ಲಿ ತ್ಯಜಿಸುತ್ತಾನೆ. ಸೀತೆಯು ಅರಣ್ಯದಿಂದ ಪುಂಡರೀಕಪುರವನ್ನು ಸೇರುತ್ತಾಳೆ. ರಾಮನಿಗೂ ಪಶ್ಚಾತ್ತಾಪವಾಗುತ್ತದೆ. ಸೀತೆಗೆ ಅಗ್ನಿದಿವ್ಯ ನಡೆದು ಯಶಸ್ವಿಯಾದ ಅವಳು ದೀಕ್ಷೆಯನ್ನು ಸ್ವೀಕರಿಸಿ ತಪಸ್ಸಿಗೆ ಹೋಗುತ್ತಾಳೆ. ಸೀತೆಯು ತಪಸ್ಸಿನಿಂದ ಪರಿಶುದ್ಧಳಾಗಿ ಸೀತೇಂದ್ರಳಾಗಿ ಹುಟ್ಟುತ್ತಾಳೆ. ನರಕದಲ್ಲಿದ್ದ ಲಕ್ಷ್ಮಣನನ್ನು ಉದ್ಧರಿಸುತ್ತಾಳೆ. ಇಲ್ಲಿ ಊರ್ಮಿಳೆಯ ಪಾತ್ರದ ಬಗ್ಗೆ ವಿಶೇಷ ಉಲ್ಲೇಖಗಳಿಲ್ಲ.

ಜೈನರಾಮಾಯಣದಲ್ಲಿ ಮೂರು ಪರಂಪರೆಗಳು ಕಂಡುಬರುತ್ತವೆ. ಜೈನಧರ್ಮದಲ್ಲಿ ರಾಮಾಯಣವನ್ನು ಪವಿತ್ರ ಪುರಾಣವೆಂದು ಭಾವಿಸಲಾಗಿದೆ. ಇಲ್ಲಿ ರಾಮಾಯಣವು ಅತ್ಯಂತ ಪ್ರಾಚೀನವಾಗಿದ್ದು ಆದಿತೀರ್ಥಂಕರನಾದ ಪುರುದೇವನ್ನು ಮಗನಾದ ಭರತನಿಗೆ ರಾಮಾಯಣದ ಕಥೆಯನ್ನು ಹೇಳಿದನೆಂದೂ ಅದು ಪರಂಪರೆಯಂತೆ ಎಲ್ಲ ತೀರ್ಥಂಕರರಿಂದಲೂ ಮುಂದುವರಿದುಕೊಂಡು ಬಂದಿತೆಂದು ಹೇಳಲಾಗುತ್ತದೆ. ಕೊನೆಯಲ್ಲಿ ಮಹಾವೀರನಿಂದ ಶ್ರೇಣಿಕನಿಗೂ ಮತ್ತು ಈತನಿಂದ ಗುಣಭದ್ರ ಮುನಿ ಮತ್ತು ವಿಮಲಸೂರಿಗೂ ಹೇಳಲ್ಪಟ್ಟಿತು. ಈ ಇಬ್ಬರಿಂದ ಜಗತ್ತಿಗೆ ಪರಿಚಯವಾಯಿತೆಂಬುದಾಗಿ ಜೈನಧರ್ಮದ ಹಿನ್ನಲೆಯಿಂದ ಹೇಳಲಾಗಿದೆ. ಆದರೆ ಇವರಿಬ್ಬರೂ ಕಥೆಯನ್ನು ನಿರೂಪಿಸಿರುವ ರೀತಿ ಭಿನ್ನವಾಗಿದೆ. ವಿಮಲಸೂರಿಯ ಪರಂಪರೆ ಜನಪ್ರಿಯವಾಗಿದ್ದು ರಾಮಚಂದ್ರ ಚರಿತ ಪುರಾಣವು ಈ ಪರಂಪರೆಯನ್ನು ಆಧರಿಸಿದೆ. ಕನ್ನಡದಲ್ಲಿ 'ತೊರವೆ ರಾಮಾಯಣ'ಕ್ಕೆ ಮುಂಚಿನ ಲಭ್ಯ ರಾಮಾಯಣವೆಂದರೆ 'ರಾಮಚಂದ್ರ ಪುರಾಣ'ವೇ ಆಗಿದೆ.

ಜೈನರಾಮಾಯಣ ಕಥೆ ವಿಚಿತ್ರವಾಗಿದ್ದು ನಾಗಚಂದ್ರನ ರಾಮಚಂದ್ರ ಚರಿತ ಪುರಾಣದಲ್ಲಿ ಸ್ಪಷ್ಟವಾಗಿ ನೀಡಲಾಗಿದೆ. ಇದರ ಪ್ರಕಾರ ಕಥೆಯನ್ನು ವಿವರಿಸುವುದಾದರೆ, ದಶರಥನಿಗೆ ಮೂವರಲ್ಲ ನಾಲ್ವರು ಹೆಂಡತಿಯರು ಇರುತ್ತಾರೆ. ಕೌಸಲ್ಯೆಯ ಪ್ರಸ್ತಾಪ ಇದರಲಿಲ್ಲ. ಅಪರಾಜಿತೆಯು ರಾಮನ ತಾಯಿ, ಸುಮಿತ್ರೆ ಲಕ್ಷ್ಮಣನ ತಾಯಿ. ಕೈಕೇಯಿ ಭರತನ ತಾಯಿ ಮತ್ತು ಸುಭದ್ರೆಯು ಶತ್ರುಘ್ನನ ತಾಯಿಯಾಗಿರುತ್ತಾಳೆ. ಪುತ್ರಕಾಮೇಷ್ಟಿ ಯಾಗ, ಪಾಯಸ ನೀಡುವ ಪ್ರಸಂಗಗಳು ಈ ಕಥೆಯಲ್ಲಿಲ್ಲ. ನಾಲ್ವರು ಮಕ್ಕಳೂ ಸಹಜವಾಗಿಯೇ ಜನಿಸಿರುತ್ತಾರೆ. ಅದೇ ರೀತಿ ಸೀತೆಯು ಜನಕರಾಜನ ಸ್ವಂತ ಮಗಳಾಗಿರುತ್ತಾಳೆ. ಈಕೆಗೆ ಪ್ರಭಾಮಂಡಲನೆಂಬ ಅಣ್ಣನಿರುತ್ತಾನೆ. ಮಾಯಾ ಜಿಂಕೆಯ ಪ್ರಸಂಗದ ಬದಲು ಬೇರೆಯ ಕಥೆಯನ್ನು ಹೇಳಲಾಗಿದೆ.

ಚಂದ್ರನಖಿಯ ಮಗನಾದ ಶಂಭೂಕನು ತಪಸ್ಸು ಮಾಡುತ್ತಿದ್ದು, ಈತನ ಸುತ್ತ ಹುತ್ತವು ಬೆಳೆದಿರುತ್ತದೆ. ದೇವತೆಗಳು ಈತನ ತಪಸ್ಸಿಗೆ ಮೆಚ್ಚಿ ಈತನ ಕೋರಿಕೆಯಾದ 'ಸೂರ್ಯಹಾಸ'ವೆಂಬ ಕತ್ತಿಯನ್ನು ಹುತ್ತದ ಮೇಲಿಟ್ಟು ಹೋಗಿರುತ್ತಾರೆ. ಖರದೂಷಣರೊಂದಿಗೆ ಯುದ್ಧ ಮುಗಿಸಿ ಬಂದ ಲಕ್ಷ್ಮಣನು ಅ ಕತ್ತಿಯನ್ನು ಹಿಡಿದು ಬೀಸಿದಾಗ ಹುತ್ತದಲ್ಲಿದ್ದ ಶಂಭುಕನು ಮರಣಹೊಂದುತ್ತಾನೆ. ಇದರಿಂದ ಕುಪಿತಳಾದ ಚಂದ್ರನಖಿಯು ರಾವಣನಿಗೆ ಸೀತೆಯನ್ನು ಅಪಹರಿಸುವಂತೆ ಆಗ್ರಹಿಸುತ್ತಾಳೆ. ರಾವಣನು ಸೀತಾಹರಣಕ್ಕೆ ಬಂದಾಗ ಲಕ್ಷ್ಮಣನು ಯುದ್ಧಕ್ಕೆ ಹೋಗುತ್ತಾನೆ. ಅವಲೋಕಿನೀ ವಿದ್ಯೆಯ ಮೂಲಕ 'ಲಕ್ಷ್ಮಣ'ನ ಕೈಸೋಲುತ್ತದೆ. ತನ್ನ ಸಿಂಹನಾದವನ್ನು ಕೇಳಿ ನೀನು ಸಹಾಯಕ್ಕೆ ಬರಬೇಕೆಂಬ' ಸೂಚನೆಯನ್ನು ರಾಮನಿಗೆ ನೀಡುತ್ತೇನೆಂದು ಮೊದಲೇ ತಿಳಿಸಿರುತ್ತಾನೆ. ಅದರಂತೆಯೇ ಇದನ್ನು ಕೇಳಿದ ರಾಮನು ಸಹಾಯಕ್ಕೆ ಬರಬೇಕೆಂದು ಹೇಳಿರುತ್ತಾನೆ. ಲಕ್ಷ್ಮಣನು ಈ ರೀತಿ ಸೂಚನೆ ನೀಡಿರುವುದನ್ನು ಗ್ರಹಿಸಿದ ರಾವಣನು ಅವಲೋಕಿನೀ ವಿದ್ಯೆಯ ಸಹಾಯದಿಂದಲೇ ಲಕ್ಷ್ಮಣನಂತೆ ಸಿಂಹನಾದವನ್ನು ಮಾಡಿಸಿ ರಾಮನು ಸೀತೆಯ ಬಳಿಯಿಂದ ಹೋಗುವಂತೆ ಮಾಡುತ್ತಾನೆ. ರಾಮನು ಹೋದಮೇಲೆ ರಾವಣನು ಸೀತಾಪಹರಣವನ್ನು ಮಾಡುತ್ತಾನೆ.

ಕಥೆಯು ಮುಂದುವರಿದು ರಾವಣನ ದಿಗ್ವಿಜಯವನ್ನು ಹೇಳುತ್ತದೆ. ರಾವಣನ ಉನ್ನತ ಶೀಲವನ್ನು ಪ್ರತಿಪಾದಿಸುವ ಉಪರಂಭೆಯ ಪ್ರಸಂಗವು ಬರುತ್ತದೆ. ವಿಶೇಷವೆಂದರೆ ಜೈನ ರಾಮಾಯಣದಲ್ಲಿ ರಾವಣನೇ ಉದಾತ್ತ ನಾಯಕನಾಗಿದ್ದಾನೆ. ಜೈನ ಪರಂಪರೆಯಂತೆ ರಾಮಲಕ್ಷ್ಮಣರನ್ನು ಬಲದೇವ ವಾಸುದೇವರೆಂದೂ, ರಾವಣನನ್ನು ಪ್ರತಿವಾಸುದೇವನೆಂದು ಕರೆಯಲಾಗಿದೆ. ರಘುವೀರನೆಂಬ ಹೆಸರು ಲಕ್ಷ್ಮಣನಿಗೆ ಇರುತ್ತದೆ. ಮತ್ತೊಂದು ವಿಶೇಷವೆಂದರೆ ರಾಮ, ಲಕ್ಷ್ಮಣ ಮತ್ತು ಹನುಮಂತರಿಗೆ ಹಲವಾರು ಹೆಂಡತಿಯರಿದ್ದಂತೆ ಚಿತ್ರಿಸಲಾಗಿದೆ. ಅಗ್ನಿಪರೀಕ್ಷೆಯ ಪ್ರಸಂಗ ಮತ್ತು ಸೀತಾಪರಿತ್ಯಾಗದ ಪ್ರಸಂಗಗಳಲ್ಲಿ ಬದಲಾವಣೆಯಿಲ್ಲ. ಕೊನೆಯಲ್ಲಿ ರಾಮನ ಪರಿನಿರ್ವಾಣವಾದರೆ ಲಕ್ಷ್ಮಣನಿಗೆ ನರಕ ಪ್ರಾಪ್ತಿಯಾಗುತ್ತದೆ.

ಈ ವಿಚಿತ್ರ ಕಥೆಯಿರುವ ರಾಮಚಂದ್ರ ಚರಿತ ಪುರಾಣವು ಲಭ್ಯ ಪ್ರಾಚೀನ ರಾಮಾಯಣ ಕೃತಿ. ಇನ್ನು ರಘುವಂಶ ಪುರಾಣ, ಕಾವ್ಯಾವಲೋಕನ ಮತ್ತು ಶಬ್ದಮಣಿದರ್ಪಣಗಳಲ್ಲಿ ಕೆಲವು ರಾಮಾಯಣ ಗ್ರಂಥಗಳಿಂದ ಆಯ್ದ ಲಕ್ಷ್ಯಪದ್ಯಗಳು ದೊರಕುತ್ತವೆ. ಇವು ಪೊನ್ನನ ಭುವನೈಕ ರಾಮಾಭ್ಯುದಯ, ಚಾವುಂಡರಾಯ ಪುರಾಣ, ಕವಿರಾಜಮಾರ್ಗದಲ್ಲಿ ಬರುವ ರಾಮಾಯಣ ಪದ್ಯಗಳ ಮೂಲವೆಂದು ಹೇಳಲಾಗಿದೆ.

**೩.೯ ಹಿಂದೀ ರಾಮಾಯಣ**

**ರಾಮಚರಿತ ಮಾನಸ**

ತುಲಸೀದಾಸರು ರಚಿಸಿದ 'ರಾಮಚರಿತಮಾನಸ'ವು ವಾಲ್ಮೀಕಿ ರಾಮಾಯಣದ ಆಧಾರದ ಮೇಲೆ ರಚಿತವಾಗಿದೆ. ಜೊತೆಗೆ ಇದರ ಮೇಲೆ ಅನೇಕ ಗ್ರಂಥಗಳ ಪ್ರಭಾವವಿದೆ. ಪ್ರತಿಪಾದಿತವಾದ ವಿಷಯ ಮತ್ತು ಪಾತ್ರಗಳ ಮೇಲೆ ಸಂಸ್ಕೃತದ ಅನೇಕ ಕವಿಗಳ ಪ್ರಭಾವವಿದೆ. ಆಧ್ಯಾತ್ಮ ರಾಮಾಯಣ, ಭಗವದ್ಗೀತೆ, ಶ್ರೀಮದ್ಭಾಗವತ, ಪ್ರಸನ್ನರಾಘವ, ಹನುಮಾನ್ನಾಟಕ, ಅಗ್ನಿವೇಶ ರಾಮಾಯಣ, ಆನಂದ ರಾಮಾಯಣ, ಉತ್ತರ ರಾಮಚರಿತೆ, ಗರ್ಭಸಂಹಿತೆ, ಗಾಲವಸಂಹಿತೆ, ಜೈಮಿನೀ ರಾಮಾಯಣ, ಪುಲಸ್ತ್ಯ ರಾಮಾಯಣ, ವಾಸಿಷ್ಠ ರಾಮಾಯಣ ಮತ್ತು ಮಂಗಲ ರಾಮಾಯಣ ಮುಂತಾದುವುಗಳಿಂದ ಪ್ರೇರಣೆ ಮತ್ತು ಸಾಮಗ್ರಿಗಳನ್ನು ಗ್ರಹಣ ಮಾಡಿದ್ದಾರೆ.

**ನಾನಾಪುರಾಣ ನಿಗಮಾಗಮ ಸಂಯತಂ । ಯದ್ ರಾಮಾಯಣೇ ನಿಗದಿತಂ ಕ್ವಚಿದನ್ಯತೋತಿ ॥**
**ಸ್ವಾಂತಸ್ಸುಖಾಯ ತುಲಸೀ ರಘುನಾಥಗಾಥಾ । ಭಾಷಾನಿಬಂಧಮತಿ ಮಂಜುಳ ಮಾತನೋಮೆ ॥**

ಎನ್ನುವ ಮಾತುಗಳಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ.

ತುಲಸೀರಾಮಾಯಣವು ಮಂಗಲಾಚರಣೆಯಿಂದ ಪ್ರಾರಂಭವಾಗುತ್ತದೆ. ಶಿಲಾರೂಪದಲ್ಲಿರುವ ಅಹಲ್ಯೆಯ ಶಾಪವಿಮೋಚನವು ಗಂಗಾನದಿಯ ದಡದಲ್ಲಿ ನಡೆಯುತ್ತದೆ. ರಾಮನ ಪದರಜದಿಂದ ಅವಳು ಚೈತನ್ಯಮಯಿಯೂ, ತೇಜಸ್ವಿನಿಯೂ ಆಗಿ ಪ್ರತ್ಯಕ್ಷಳಾಗುತ್ತಾಳೆ. ವಾಲ್ಮೀಕಿ ರಾಮಾಯಣದಲ್ಲಿಲ್ಲದ ಅನೇಕ ಪ್ರಸಂಗಗಳು ಕಂಡುಬರುತ್ತವೆ. ಮಹಾತ್ಮ ಗಾಂಧಿಯವರು ರಾಮಚರಿತ ಮಾನಸವು 'ಅನುಭವಜನ್ಯಜ್ಞಾನಭಂಡಾರ' ವೆಂದು ಅಭಿಪ್ರಾಯಪಟ್ಟಿದ್ದಾರೆ. ಈ ರಾಮಾಯಣದ ವಿಶೇಷತೆಯೆಂದರೆ ಉಚ್ಚವಾದ ನೈತಿಕದೃಷ್ಟಿ. ತುಲಸೀದಾಸರೇ ಒಂದಡೆಯಲ್ಲಿ, ನೀತಿಬಾಹಿರವಾದ ಕಾಗೆಗಳಿಗೂ, ಕೊಕ್ಕರೆಗಳಿಗೂ ಈ ಮಾನಸ ಸರೋವರದಲ್ಲಿ ಯಾವ ಕ್ರಿಮಿಕೀಟಗಳಾಗಲೀ, ಕಪ್ಪೆಗಳಾಗಲೀ ಸಿಗುವುದಿಲ್ಲವೆಂದು ಹೇಳಿದ್ದಾರೆ. ಇಲ್ಲಿ ಪ್ರತಿಪಾದಿಸಿದ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನು ಒಪ್ಪಿಕೊಳ್ಳಲೇಬೇಕೆಂಬ ಒತ್ತಾಯವಿದೆ.

ತುಲಸೀ ದಾಸರಾದ ಮೇಲೆ ರಮಾನಂದೀಯ ಪಂಥದಲ್ಲಿ ಅನೇಕ ರಾಮಾಯಣಗಳು ರಚನೆಯಾಗಿವೆ. ಅವುಗಳಲ್ಲಿ ಮಾನದಾಸನ 'ರಾಮಚರಿತ್ರ', ಈಶ್ವರೀಪ್ರಸಾದ ತ್ರಿಪಾಠಿಯ 'ರಾಮವಿಲಾಸ ರಾಮಾಯಣ', ಬಾಲಶರಣನ ಆಲಿಯ 'ನೇಹಪ್ರಕಾಶ' ಮತ್ತು 'ಸೀತಾಧ್ಯಾನಮಂಜರಿ', ಜಾಂಕ್‌ರಸ ಶರಣನ 'ಆವದ್ ಸಾಗರ್', ಭಗವಂತರಾಯನ 'ರಾಮಾಯಣ', ಶಂಭುನಾಥನ 'ರಾಮವಿಲಾಸ್', ತುಳಸೀ ಸಾಹೇಬನ 'ಘಟರಾಮಾಯಣ', ಮಧುಸೂಧನನ 'ರಾಮಾಶ್ವಮೇಧ', ಮನಿಯಾರ್ ಸಿಂಗನ 'ಸೌಂದರ್ಯಲಹರಿ'. 'ಸುಂದರ ಕಾಂಡ್', 'ಹನುಮಾನ್ ಛಬ್ಬೀಸ್', ಗಣೇಶನ 'ರಾಮಾಯಣ' ಮೊದಲಾದವುಗಳು ಪ್ರಮುಖವಾದವುಗಳಾಗಿವೆ.

**೩.೧೦ ಕನ್ನಡ ರಾಮಾಯಣಗಳು**

ಭಾರತೀಯ ಭಾಷೆಗಳಲ್ಲಿ ರಾಮಾಯಣಗಳ ರಚನೆಗೆ ಕಾಲದೃಷ್ಟಿಯಿಂದ ಕನ್ನಡಕ್ಕೆ ಎರಡನೆಯ ಸ್ಥಾನವಿದೆ. ಕನ್ನಡದ ಮೊಟ್ಟಮೊದಲ ರಾಮಾಯಣವು ಯಾವುದೆಂದು ತಿಳಿಯಲು ಸಾಧ್ಯವಾಗಿಲ್ಲ. 'ಕವಿರಾಜಮಾರ್ಗ'ದಲ್ಲಿ ಉದಾಹರಿಸಿರುವ ಪದ್ಯಗಳಲ್ಲಿ ಕೆಲವು ರಾಮಾಯಣಕ್ಕೆ ಸಂಬಂಧಿಸಿದ್ದು ಎಂದು ತಿಳಿದರೂ ಆಕರ ಯಾವುದೆಂದು ತಿಳಿದಿಲ್ಲ. ಕ್ರಿ.ಶ. ೯೫೦ ರಲ್ಲಿದ್ದ ಪೊನ್ನನು ತನ್ನ 'ಶಾಂತಿಪುರಾಣ'ದಲ್ಲಿ ತಾನು ೧೬ ಆಶ್ವಾಸಗಳ 'ಭುವನೈಕ ರಾಮಾಭ್ಯುದಯ' ವೆಂಬ ರಾಮಕಥೆಯನ್ನು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಈ ಕೃತಿಯು ಈವರೆಗೂ ಲಭ್ಯವಾಗಿಲ್ಲ.

**ಅ. ರಾಮಚಂದ್ರ ಚರಿತ ಪುರಾಣ**

೧೧೦೦ ರಲ್ಲಿದ್ದ ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ'ವೇ ಈಗ ಲಬ್ಧವಾಗಿರುವ ಮೊದಲನೆಯ ಕನ್ನಡ ರಾಮಾಯಣವಾಗಿದೆ. ಇವನು ರಚಿಸಿರುವ ಕೃತಿಯು ಜೈನಪರಂಪರೆಯ ಅದರಲ್ಲೂ ವಿಮಲಸೂರಿಯ ಕಥಾಪರಂಪರೆಯನ್ನು ವಿಶೇಷವಾಗಿ ಅನುಸರಿಸಿದ್ದಾನೆ. 'ಮಹಾಪುರಾಣ' ಮತ್ತು 'ಪಉಮ ಚರಿಯ'ಗಳ ಆಧಾರದ ಮೇಲೆ ನಾಗಚಂದ್ರನು ತನ್ನ ಕೃತಿಯನ್ನು ರಚಿಸಿದ್ದಾನೆ. ಅವನ ದೃಷ್ಟಿಯಲ್ಲಿ 'ರಾಮಚಂದ್ರ ಚರಿತ ಪುರಾಣ'ವು ಪುರಾಣವೂ ಹೌದು; ಕಾವ್ಯವೂ ಹೌದು. ತನ್ನ ಕೃತಿಯನ್ನು ವಿಶೇಷವಾಗಿ ಮೂಲದ ಕಥೆಗೆ ನೇರವಾಗಿ ಸಂಬಂಧಿಸದ ಧರ್ಮೋಪದೇಶಗಳು, ರಾಜವಂಶಾವಳಿಗಳನ್ನೂ ಕೈಬಿಟ್ಟಿದ್ದಾನೆ.

ಮೂಲ ಕಥೆಯು ರಾವಣನ ದಿಗ್ವಿಜಯದಿಂದ ಪ್ರಾರಂಭವಾಗುತ್ತದೆ. ನಾಗಚಂದ್ರನು ತನ್ನ ಕಾವ್ಯವನ್ನು ರಾಮಕಥೆಯಿಂದಲೇ ಪ್ರಾರಂಭಿಸುತ್ತಾನೆ. ಹಲವಾರು ಅಂಶಗಳನ್ನು ಸ್ಥಾನಪಲ್ಲಟ ಮಾಡಿರುವುದರಿಂದ ಕಥೆಯ ಬೆಳವಣಿಗೆಗೆ ಕುಂದುಂಟಾಗಿರುವುದು ಕಂಡುಬರುತ್ತದೆ. ವಿಮಲಸೂರಿಯ ರಾವಣನ ಉದಾತ್ತತೆ ನಾಗಚಂದ್ರನ ರಾವಣನಿಗಿಲ್ಲ. ಆದುದರಿಂದ ರಾವಣನ ದುರಂತತೆಯಲ್ಲಿ ಹೆಚ್ಚಿನ ತೀಕ್ಷ್ಣತೆಯು ಕಂಡುಬರುವುದಿಲ್ಲ.

ಮೂಲದಲ್ಲಿ ಇಲ್ಲದ ಹಲವು ಸನ್ನಿವೇಶಗಳನ್ನು ಇಲ್ಲಿ ಸೇರಿಸಿರುವುದರಿಂದ ಕೆಲವು ಕಡೆ ಪಂಪ ರಾಮಾಯಣ'ವು ಆಕರ್ಷಕವಾಗಿ ಕಂಡುಬರುತ್ತದೆ. ರಾವಣನಿಗೂ ಅವಲೋಕನಿಗೂ ನಡುವಿನ ಸಂಭಾಷಣೆಯನ್ನು ವಿಶೇಷವಾಗಿ ಉದಾಹರಿಸಬಹುದು.

**ಆ. ಪಂಪ ರಾಮಾಯಣ**

ಜೈನ ಸಂಪ್ರದಾಯದಂತೆ 'ಪಂಪ ರಾಮಾಯಣ'ದಲ್ಲಿ ವಿಭೀಷಣನು ರಾವಣನ ಮರಣದ ಬಗೆಗೆ ಜ್ಯೋತಿಷಿಗಳು "ಸೀತೆಯ ನಿಮಿತ್ತವಾಗಿ ದಾಶರಥಿಯಿಂದ ರಾವಣನು ಹತನಾಗುತ್ತಾನೆ" ಎಂದು ಹೇಳುತ್ತಾರೆ. ಇದನ್ನು ಕೇಳಿದ ವಿಭಿಷಣನು ಜನಕ. ದಶರಥರನ್ನೇ ಕೊಲ್ಲುವ ಉದ್ದೇಶದಿಂದ ದಂಡೆತ್ತಿ ಹೋಗಲು ನಿರ್ಧರಿಸುತ್ತಾನೆ. ಈ ವಿಷಯವು ನಾರದನಿಂದ ದಶರಥನಿಗೆ ತಿಳಿಯುತ್ತದೆ. ದಶರಥನು ಈ ವಿಚಾರವನ್ನು ಜನಕನಿಗೆ ತಿಳಿಸಿ ತಮ್ಮ ಆಕಾರದ ಬೊಂಬೆಗಳನ್ನು ನಿರ್ಮಿಸಿಟ್ಟು ವಿಭೀಷಣನಿಂದ ತಮಗೆ ಬಂದ ಆಪತ್ತನ್ನು ನಿವಾರಿಸಿಕೊಳ್ಳುತ್ತಾರೆ. ಈ ವಿಷಯವು ವಾಲ್ಮೀಕಿ ರಾಮಾಯಣದಲಿಲ್ಲ.

ಪಂಪರಾಮಾಯಣದಲ್ಲಿ ಪುತ್ರಕಾಮೇಷ್ಟಿಯ ಪ್ರಸ್ತಾಪವಿಲ್ಲ. ಸುಮಿತ್ರೆಗೆ ಲಕ್ಷ್ಮಣನೊಬ್ಬನೇ ಮಗ. ರಾಮಲಕ್ಷ್ಮಣರು ಬಲಾಚ್ಯುತರು. ರಾಮನು ಬಿಳಿಯ ಬಣ್ಣದವನಾದರೆ ಲಕ್ಷ್ಮಣನು ಕಪ್ಪು ಬಣ್ಣ. ಲಕ್ಷ್ಮಣನಿಗೆ ಎಂಟನೆಯ ಕೇಶವ, ಉಪೇಂದ್ರ, ವಾಸುದೇವ, ಕೃಷ್ಣ, ನಾರಾಯಣ, ಲಕ್ಷ್ಮೀಧರ, ಪುರುಷೋತ್ತಮ, ಜನಾರ್ದನ ಎಂಬ ಹೆಸರುಗಳೂ ಉಂಟು. ಇವನೇ ಕಥಾನಾಯಕ. ಇದರಲ್ಲಿ ವಿಶ್ವಾಮಿತ್ರನ ಪ್ರಸ್ತಾಪವಿಲ್ಲ. ನಾರದನೇ ಸೀತೆಯನ್ನು ಮೋಹಿಸುವ ಪ್ರಸಂಗವಿದೆ. ಜನಕನ ಬಳಿಯಲ್ಲಿ ವಜ್ರಾವರ್ತ ಮತ್ತು ಸಾಗರವರ್ತಗಳೆಂಬ ಧನುಸ್ಸುಗಳನ್ನು ಇರುತ್ತವೆ. ಅದರಲ್ಲಿ ವಜ್ರಾವರ್ತವನ್ನು ರಾಮನೂ ಸಾಗರವರ್ತವನ್ನು ಲಕ್ಷ್ಮಣನೂ ಮುರಿಯುತ್ತಾರೆ. ರಾಮನಿಗೆ ಸೀತೆಯು, ಲಕ್ಷ್ಮಣನಿಗೆ ಚಂದ್ರಧ್ವಜನ ಇಬ್ಬರು ಮಕ್ಕಳೂ ದೊರಕುತ್ತಾರೆ. ವಿಜಯಯಾತ್ರೆಯಲ್ಲಿ ಲಕ್ಷ್ಮಣನಿಗೆ ಅನೇಕ ಮದುವೆಗಳಾಗುತ್ತವೆ. ರಾಮನಿಗೆ ಸುಗ್ರೀವನ ಮಕ್ಕಳನ್ನೂ ರಥಿಮುಖನಗರಿಯ ಮಕ್ಕಳನ್ನೂ ರತ್ನಪುರದರಸನ ಮಗಳನ್ನೂ ಕೊಟ್ಟು ವಿವಾಹ ಮಾಡಿದ ವಿವರವಿದೆ. ಇಲ್ಲಿ ರಾಮ ಏಕಪತ್ನೀವ್ರತಸ್ಥನಲ್ಲ. ವೈದಿಕ ಪರಂಪರೆಯ ಸ್ಥಾಪಿತ ಮೌಲ್ಯಗಳಿಗೆ ವ್ಯತಿರಿಕ್ತವಾದ ಕಥೆ ನಿರೂಪಣೆಗೊಂಡಿದ್ದು ಪುರುಷೋತ್ತಮನೆಂಬ ಕಲ್ಪನೆಯನ್ನು ತೊಡೆದು ಹಾಕುವ ಪ್ರಯತ್ನ ಕಂಡುಬರುತ್ತದೆ.

ಸುಗ್ರೀವನ ತಂಗಿಯಾದ ಶ್ರೀಪ್ರಭೆಯನ್ನು ರಾವಣನು ವಿವಾಹವಾಗಿರುತ್ತಾನೆ. ರಾವಣನ ತಂಗಿಯಾದ ಚಂದ್ರನಖಿಯ ಮಗಳು ಅನಂಗಪುಷ್ಪೆಯನ್ನು ಹನುಮಂತನು ವಿವಾಹವಾಗಿದ್ದನು. ರಾವಣನು ನೀಡಿದ ಕರ್ಣಕುಂಡಲಪುರದ ದೊರೆಯಾಗಿ ಹನುಮಂತ ರಾವಣನ ಸ್ನೇಹಿತನಾಗಿರುತ್ತಾನೆ. ಮುಂದೆ ರಾವಣನು ಸೀತೆಯನ್ನು ಅಪಹರಿಸಿದ್ದರಿಂದ ಹನುಮಂತನು ರಾವಣನ ವೈರಿಯಾಗಿ ರಾಮನಿಗೆ ಸಹಾಯ ಮಾಡುತ್ತಾನೆ.

ಲಕ್ಷ್ಮಣನು ರಾವಣನ ಸಂಹಾರ ಮಾಡುವುದರಿಂದ ಅವನಿಗೆ ನರಕ ಪ್ರಾಪ್ತಿಯಾಗುತ್ತದೆ. ನರಕದಿಂದ ಲಕ್ಷ್ಮಣನನ್ನು ಉದ್ಧರಿಸುವವಳು ಸೀತೆ.

**ಇ. ವಿಕ್ರಮಾರ್ಜುನ ವಿಜಯ**

ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಕೆಲವೆಡೆ ರಾಮಾಯಣದ ವಿಚಾರಗಳಿದ್ದು, ಇವು ಪ್ರಾಕೃತ ರಾಮಾಯಣದ ಆಧಾರದಿಂದ ಹೇಳಲಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪೊನ್ನನ ಭುವನೈಕ ರಾಮಾಭ್ಯುದಯ ಪ್ರಥಮ ಕನ್ನಡ ರಾಮಾಯಣದ ಕೃತಿಯಾದರೂ ಅದು ಉಪಲಬ್ಧವಿಲ್ಲ. ಇದು ಸ್ವತಂತ್ರ ರಾಮಾಯಣ ಕೃತಿಯೆಂದು ಆತನೇ ಹೇಳಿಕೊಂಡಿದ್ದಾನೆ. ಇದರಲ್ಲಿ ಪೊನ್ನನು ತನ್ನ ಆಶ್ರಯದಾತನಾದ ಮೂರನೆಯ ಕೃಷ್ಣನನ್ನು ರಾಮನಿಗೆ ಸಮೀಕರಿಸಿ ಬರೆದಿರುವ ಕೃತಿಯಾಗಿದೆ. ಚಾವುಂಡರಾಯ ಪುರಾಣ ಮತ್ತು ಭುವನೈಕ ರಾಮಾಭ್ಯುದಯಗಳು ನಾಗಚಂದ್ರನ ರಾಮಾಯಣಕ್ಕಿಂತ ಮೊದಲಿನದವಾಗಿದ್ದರೂ ನಾಗಚಂದ್ರನ ಕೃತಿ ರಾಮಾಯಣ ಕಥೆಯನ್ನು ಪೂರ್ಣವಾಗಿ ನೀಡುವಲ್ಲಿ ಯಶಸ್ವಿಯಾಗಿವೆ ಎನ್ನಬಹುದು.

**ಈ. ಕುಮುದೇಂದು ರಾಮಾಯಣ ಮತ್ತು ರಾಮವಿಜಯ ಕಾವ್ಯ**

೧೨೭೫ ರಲ್ಲಿ ಕುಮುದೇಂದು ಕವಿಯು ರಾಮಾಯಣವನ್ನು ಬರೆಯುತ್ತಾನೆ. ಈತನ ರಾಮಾಯಣವು ನಾಗಚಂದ್ರನ ರಾಮಾಯಣವನ್ನು ಅನುಸರಿಸಿ ಬರೆದುದಾಗಿದೆ. ೧೫೨೫ರಲ್ಲಿ ಕವಿಮಿತ್ರ ದೇವಪ್ಪನು 'ರಾಮವಿಜಯಕಾವ್ಯ' ವನ್ನು ಬರೆಯುತ್ತಾನೆ ಇದು ಸಾಂಗತ್ಯದಲ್ಲಿದೆ.

**ಉ. ಕೌಶಿಕ ರಾಮಾಯಣ**

ಬತ್ತಲೇಶ್ವರನೆಂಬ ಕವಿಯು 'ಕೌಶಿಕ ರಾಮಾಯಣ' ವನ್ನು ಬರೆದಿದ್ದಾನೆ. ಬತ್ತಲೇಶ್ವರನ ಕಾಲ ೧೫ನೆಯ ಶತಮಾನಕ್ಕಿಂತ ಸ್ವಲ್ಪ ಹಿಂದಿನದಾಗಿದೆ. ಸುಂದರ ನಾಟಕೀಯ ಶೈಲಿಯಲ್ಲಿ ಬರೆದಿದ್ದಾನೆ. ವಾಲ್ಮೀಕಿ ರಾಮಾಯಣವನ್ನು ಮೂಲದಲ್ಲಿಲ್ಲದ ಹಲವಾರು ಕಥಾಸನ್ನಿವೇಶಗಳನ್ನು ಸೇರಿಸಿ ಈತನು ಕೃತಿಯನ್ನು ರಚಿಸಿದ್ದಾನೆ.

**ಊ. ತೊರವೆ ರಾಮಾಯಣ**

೧೫೮೦ರ ಸುಮಾರಿಗೆ ಬರುವ 'ತೊರವೆ ರಾಮಾಯಣ'ವನ್ನು ಬರೆದವನು ತೊರವೆಯ ನರಹರಿ. ವಾಲ್ಮೀಕಿಯನ್ನು ಅನುಸರಿಸಿರುವನಾದರೂ 'ಆಧ್ಯಾತ್ಮ ರಾಮಾಯಣ'ದ ಪ್ರಭಾವವೂ ಇವನ

ಮೇಲಿರುವುದರಿಂದ ರಾಮಾಯಣ ಕಥೆಯು ಶಿವಪಾರ್ವತಿಯರ ಸಂಭಾಷಣೆಯೊಂದಿಗೆ ಪ್ರಾರಂಭವಾಗುತ್ತದೆ. ತೊರವೆ ರಾಮಾಯಣದ ಕಥೆಯನ್ನು ಆರು ಕಾಂಡಗಳಲ್ಲಿ ಬರೆದಿದ್ದಾನೆ. ೫೨೦೦ ಪದ್ಯಗಳಲ್ಲಿ ಅರ್ಧಕ್ಕಿಂತ ಹೆಚ್ಚು ಯುದ್ಧಕಾಂಡದ ಭಾಗವಾಗಿದೆ.

ವೈದಿಕ ರಾಮಾಯಣಗಳಲ್ಲಿ ಪ್ರಾಚೀನ ಉಪಲಬ್ಧ ರಾಮಾಯಣ ಕೃತಿಯೆಂದರೆ ತೊರವೆ ರಾಮಾಯಣವೇ ಆಗಿದೆ. ಬತ್ತಲೇಶ್ವರನು ಬರೆದ 'ಕೌಶಿಕ ರಾಮಾಯಣ'ವು ತೊರವೆ ರಾಮಾಯಣದ ಸಮಕಾಲೀನ ಕೃತಿಯಾಗಿದೆ ಎಂದು ಹೇಳಲಾಗಿದ್ದರೂ ಹಲವಾರು ವಿದ್ವಾಂಸರು ಇದರ ಕಾಲವನ್ನು ೧೬೦೦ರವರೆಗೆ ವಿಸ್ತರಿಸುವುದರಿಂದ ಇದನ್ನು ನಂತರದ ಕೃತಿಯೆಂದೇ ಹೇಳಿದ್ದಾರೆ. ಗಮನಿಸಬೇಕಾದ ಅಂಶವೆಂದರೆ ವೈದಿಕ ರಾಮಾಯಣದ ಪರಂಪರೆಯಲ್ಲಿ ಆನಂದ ರಾಮಾಯಣ, ಅದ್ಭುತ ರಾಮಾಯಣ ಮತ್ತು ಆಧ್ಯಾತ್ಮ ರಾಮಾಯಣಗಳಿರುವುದರಿಂದ ಅವುಗಳ ಪ್ರಭಾವ ತೊರವೆ ರಾಮಾಯಣದ ಮೇಲೆ ಆಗಿರುವುದನ್ನು ಮರೆಯುವಂತಿಲ್ಲ. ಇವುಗಳ ಜೊತೆಗೆ ಜೈನ ರಾಮಾಯಣಗಳ ಪ್ರಭಾವವೂ ಆಗಿರುವ ಸಾಧ್ಯತೆಗಳನ್ನು ಅಲ್ಲಗೆಳೆಯುವಂತಿಲ್ಲ. ಎಲ್ಲ ರಾಮಾಯಣಗಳನ್ನು ಗಮನಿಸಿದ್ದರೂ ತನ್ನ ಶ್ರದ್ಧಾಭಕ್ತಿ, ನಿಷ್ಠೆಯಿಂದ ವೈದಿಕ ಪರಂಪರೆಗೆ ಅನುಗುಣವಾಗಿ, ವರ್ಣನಾತ್ಮಕವಾಗಿ, ಸರಳವಾಗಿ ರಾಮಾಯಣವನ್ನು ರಚನೆ ಮಾಡಿದ್ದಾನೆ. ನರಹರಿಗಿಂತ ಮುಂಚಿನವನಾದ ಕುಮಾರವ್ಯಾಸನು 'ತಿಣುಕಿದನು ಫಣಿರಾಯ ರಾಮಾಯಣ ಕವಿಗಳ ಭಾರದಲಿ' ಎಂದಿದ್ದಾನೆ. ಈ ಮಾತನ್ನು ಗಮನಿಸಿದಾಗ ಅವನ ಕಾಲಕ್ಕೆ ಹಲವಾರು ರಾಮಾಯಣಗಳು ರಚನೆಯಾಗಿದ್ದವೆಂದು ತೋರುತ್ತದೆ. ಆದರೆ ಆ ಕೃತಿಗಳಾವುವೂ ಲಭ್ಯವಿಲ್ಲವಾದ್ದರಿಂದ ಕುಮಾರವ್ಯಾಸನ ಹೇಳಿಕೆಯ ಬಗ್ಗೆ ಹೆಚ್ಚಿನ ಚರ್ಚೆಗೆ ಆಸ್ಪದವಿಲ್ಲವಾಗಿದೆ. ಏಕೆಂದರೆ ಕುಮಾರವ್ಯಾಸನು ಎಲ್ಲಿಯೂ ತನಗಿಂತ ಹಿಂದೆ ಇದ್ದ ಅಥವಾ ಸಮಕಾಲೀನ ರಾಮಾಯಣಗಳ ಬಗ್ಗೆ ಯಾವ ಮಾತನ್ನೂ ಹೇಳಿಲ್ಲ. ಜಾನಪದ ಮಾಧ್ಯಮದಲ್ಲೇನಾದರೂ ರಾಮಾಯಣದ ಕಥಾ ಪರಂಪರೆಯು ಹೆಚ್ಚು ಪ್ರಸಿದ್ಧವಾಗಿದ್ದಿರಬಹುದೆಂದು ಇಲ್ಲಿ ಊಹಿಸಲು ಸಾಧ್ಯವಿದೆ.

ವೈದಿಕ ಪರಂಪರೆ, ಬೌದ್ಧ ಪರಂಪರೆ, ಜೈನ ಪರಂಪರೆ, ಜನಪದ ಪರಂಪರೆ ಮತ್ತು ಆಧುನಿಕ ಪರಂಪರೆಯಲ್ಲೂ ಸಹ ರಾಮಾಯಣವು ಪ್ರಸಿದ್ಧವಾದ ಕಾವ್ಯವಾಗಿದೆ. ಕನ್ನಡ ರಾಮಾಯಣಗಳಲ್ಲಿ ನಾಗಚಂದ್ರನ ಪಂಪ ರಾಮಾಯಣವು ಜೈನಪರಂಪರೆಯ ಪ್ರತಿನಿಧಿಯಾಗಿ ನಿಂತರೆ ವೈದಿಕ ಪರಂಪರೆಯ ವಾಲ್ಮೀಕಿ ರಾಮಾಯಣವನ್ನು ಕನ್ನಡ ಸಾಹಿತ್ಯಲೋಕಕ್ಕೆ ನೀಡಿದ ಅದ್ಭುತ ಕವಿ ತೊರವೆ ನರಹರಿ. ಈತನು ರಚಿಸಿದ 'ತೊರವೆ ರಾಮಾಯಣ'ವು ವಾಲ್ಮೀಕಿ ರಾಮಾಯಣವನ್ನು ಕನ್ನಡದಲ್ಲಿ ಪುನರಚನೆ ಮಾಡಿರುವುದು ಅತ್ಯಂತ ಯಶಸ್ವಿಯಾಗಿ ಮೂಡಿಬಂದಿದೆ.

ಕುಮಾರವಾಲ್ಮೀಕಿಯು ಕುಮಾರವ್ಯಾಸನಿಂದ ಪ್ರಭಾವಿತನಾಗಿದ್ದಾನೆ. ತೊರವೆ ರಾಮಾಯಣವು ಮೂಲ ವಾಲ್ಮೀಕಿ ರಾಮಾಯಣವನ್ನೇ ಆಧರಿಸಿದ್ದರೂ ಆನಂದ ರಾಮಾಯಣ, ಆಧ್ಯಾತ್ಮ ರಾಮಾಯಣ,

ಭಾರತ ತಾತ್ಪರ್ಯ ನಿರ್ಣಯ, ರಘುವಂಶ, ರಾಮಚಂದ್ರ ಚರಿತ ಪುರಾಣಗಳಿಂದಲೂ ಉಪಕೃತವಾಗಿದೆ. ಹೀಗಾಗಿ ಹೊಸ ದರ್ಶನಗಳು ದೊರಕುತ್ತವೆ. ಒಂದು ಉದಾಹರಣೆಯನ್ನು ನೀಡುವುದಾದರೆ ಮೂಲ ವಾಲ್ಮೀಕಿ ರಾಮಾಯಣದಲ್ಲಿ ಮಂಥರೆಯು ಪಾಪಿಷ್ಠೆ, ದುಷ್ಟೆಯಾಗಿ ತನ್ನ ದುರ್ಬೋಧನೆಗಳಿಂದ ಕೈಕೇಯಿಯ ಮನಸ್ಸನ್ನು ಪರಿವರ್ತಿಸಿ ಕ್ರೂರವಾಗಿ ಕಾಣುತ್ತಾಳೆ. ಇಲ್ಲಿ ತೊರವೆ ರಾಮಾಯಣದ ಮಂಥರೆ ಮಾಯೆಯ ಅವತಾರವಾಗಿದ್ದಾಳೆ. ಶ್ರೀರಾಮನ ಅವತಾರ ಕಾರ್ಯವು ನೆರವೇರುವಲ್ಲಿ ಸಹಾಯಕಳಾಗಿ ನಿಲ್ಲುವ ಅಸಾಮಾನ್ಯ ಮಹಿಳೆಯಾಗುತ್ತಾಳೆ. ಮಂಥರೆಯ ಪಾತ್ರಕ್ಕೆ ನ್ಯಾಯ ಒದಗಿಸುವ ಪ್ರಯತ್ನ ನಡೆದಿದೆಯಾದರೂ ಮಾಯೆಯ ರೂಪವನ್ನು ಮಂಥರೆ ಅವಧರಿಸಿದ್ದಾಳೆ. ಹಾಗಾಗಿ ಸ್ತ್ರೀ ಸಾಮಾನ್ಯಳಿಗೆ ಮಾದರಿಯಲ್ಲ.

ತೊರವೆ ರಾಮಾಯಣವು ಕನ್ನಡದ ದೇಸೀಕಾವ್ಯ ಪರಂಪರೆಯನ್ನು ಮುಂದುವರಿಸುತ್ತದೆ. ಸಮಕಾಲೀನ ರಾಜಕೀಯ, ಸಾಮಾಜಿಕ ಅಂಶಗಳನ್ನು ಒಳಗೊಂಡು ಸಾಂಸ್ಕೃತಿಕವಾಗಿಯೂ ಮಹತ್ವದ್ದಾಗಿದೆ. ರಾಮಾಯಣದ ಪಾತ್ರಗಳನ್ನು ಕನ್ನಡೀಕರಿಸುವಾಗ ಮೂಲ ರಾಮಾಯಣದ ವಸ್ತು ವಿನ್ಯಾಸದಲ್ಲಿ ಮಾಡಿಕೊಂಡ ಬದಲಾವಣೆಗಳೊಂದಿಗೆ ಪುನರ್ ಸೃಷ್ಟಿಸುವಾಗ, ಕೆಲವು ಪಾತ್ರಗಳಲ್ಲಿ ಜನರಿಗೆ ಇರುವ ದೃಷ್ಟಿಕೋನವನ್ನು ಬದಲಾಯಿಸುವುದರಲ್ಲಿ ಯಶಸ್ವಿಯಾಗಿದೆ.

ಇವೆಲ್ಲ ಸಂಸ್ಕೃತ ರಾಮಾಯಣವನ್ನು ಅನುಸರಿಸಿರುವಂತೆ ಕಂಡುಬಂದರೂ ಜೈನಪರಂಪರೆಯ ಪ್ರಾಕೃತ ಮತ್ತು ಅಪಭ್ರಂಶ ಭಾಷೆಯ ರಾಮಾಯಣಗಳನ್ನು ಅನುಸರಿಸಿವೆಯೆನ್ನಬಹುದು. ಹಾಗೆಯೇ ಕವಿರಾಜಮಾರ್ಗದಲ್ಲಿರುವ ರಾಮಾಯಣದ ಉಲ್ಲೇಖಗಳು, ಯಾವ ಪರಂಪರೆಯನ್ನು ಅನುಸರಿಸಿದೆಯೆಂದು ತಿಳಿದುಬರುವುದಿಲ್ಲ.

ತೊರವೆ ರಾಮಾಯಣದಲ್ಲಿ ಮಂಥರೆಯನ್ನು 'ಪೂರ್ವಮಾಯಾ ತರುಣಿ' ಎಂದು ಕರೆಯಲಾಗಿದೆ. ಸೀತಾಲಕ್ಷ್ಮಣರೊಡನೆ ರಾಮನು ವನವಾಸಕ್ಕೆ ಹೋಗುವ ಪ್ರಸಂಗವು ಒಂದೇ ಪದ್ಯದಲ್ಲಿ ಮುಗಿದಿದೆ. ಲಕ್ಷ್ಮಣನ ಹೆಂಡತಿ ಊರ್ಮಿಳೆಯ ಪ್ರಸ್ತಾಪವೇ ಇಲ್ಲ.

**೩. ರಾಮಚಂದ್ರ ಚರಿತ್ರೆ ಮತ್ತು ಉತ್ತರ ರಾಮಾಯಣ**

೧೭೦೦ ರಲ್ಲಿ 'ರಾಮಚಂದ್ರ ಚರಿತ್ರೆ' ಯನ್ನು ಚಂದ್ರಶೇಖರ ಕವಿಯ ರಚಿಸುತ್ತಾನೆ. ಇದು ಜೈನಪರಂಪರೆಯಲ್ಲಿ ರಚಿತವಾಗಿರುವ ಕನ್ನಡ ರಾಮಾಯಣ. ೧೬೦೦ರಲ್ಲಿ ನಾರಾಯಣ ಕವಿಯು 'ಉತ್ತರ ರಾಮಾಯಣ'ವನ್ನು ರಚಿಸಿದ್ದಾನೆ. ೪೪ ಸಂಧಿಗಳಲ್ಲಿ ೨೦೩೭ ಪದ್ಯಗಳಿವೆ. ಇವು ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿದೆ.

### ೩೦. ಮೂಲಕ ರಾಮಾಯಣ

ಅನಾಮಿಕ ಕವಿಯ 'ಮೂಲಕ ರಾಮಾಯಣ'ವೆಂಬ ಕೃತಿಯು ಲಭ್ಯವಿದೆ. ಇದರ ಕಾಲ ೧೬೦೦. ಭಾಮಿನೀ ಷಟ್ಪದಿಯಲ್ಲಿರುವ ಇದರಲ್ಲಿ ಆರು ಸಂಧಿಗಳೂ ೩೬೯ ಪದ್ಯಗಳಿವೆ. ಸಾಮಾನ್ಯವರ್ಗದ ಕವಿತೆ. ಮೂಲಕಾಸುರನು ಲಂಕೆಗೆ ಮುತ್ತಿಗೆ ಹಾಕಿ ವಿಭೀಷಣನನ್ನು ಸೋಲಿಸಿ ಅಯೋಧ್ಯೆಗೆ ಬಂದು ರಾಮಲಕ್ಷ್ಮಣಭರತಶತ್ರುಘ್ನರನ್ನು ಸೋಲಿಸಿ ಕೊನೆಗೆ ಕುಶನಿಂದ ಮರಣ ಹೊಂದಿದಂತೆ ಕಥೆಯಿದೆ.

### ೩.೧೧ ವಿವಿಧ ರಾಮಾಯಣಗಳು

೧೬೧೨ ರಲ್ಲಿ ಕುಂದೂರು ಲಕ್ಕಪ್ಪನು 'ಉತ್ತರ ರಾಮಾಯಣ'ವನ್ನು ಬರೆಯುತ್ತಾನೆ. ಶುಕರೂಪನು ಆರು ಕಾಂಡಗಳನ್ನು ಬರೆದಿರುವುದರಿಂದ ತಾನು ಉತ್ತರ ರಾಮಾಯಣವನ್ನು ಬರೆದೆನೆಂದು ಹೇಳಿಕೊಳ್ಳುತ್ತಾನೆ. ಶುಕರೂಪನು ಬರೆದ ರಾಮಾಯಣವು ಲಭ್ಯವಿಲ್ಲ. 'ಅದ್ವೈತ ರಾಮಾಯಣ' ವೆಂಬ ಕೃತಿಯನ್ನು ನಿಜಗುಣಆರ್ಯನು ೧೬೨೦ ರಲ್ಲಿ ಬರೆದಿದ್ದಾನೆ. ವಚನ ರೂಪದಲ್ಲಿರುವ ಇದು ಅಸಮಗ್ರವಾಗಿದೆ. ರಾಮ ರಾವಣರ ಅದ್ವೈತ ವೈಭವವನ್ನು ವರ್ಣಿಸುತ್ತದೆ.

ತಿಮ್ಮರಸನೆಂಬುವವನು ೧೬೫೦ರ ಸುಮಾರಿಗೆ 'ಮಾರ್ಕಂಡೇಯ ಪುರಾಣ'ವನ್ನು ಬರೆದಿದ್ದಾನೆ. ಇದು ಮಾರ್ಕಂಡೇಯನು ಯುಧಿಷ್ಠಿರನಿಗೆ ಹೇಳಿದ ರಾಮಾಯಣದ ಕಥೆಯಾಗಿದೆ. ೩೦ ಸಂಧಿಗಳಿಂದ ೧೫೦೦ ಪದ್ಯಗಳಿವೆ. ಯದುಗಿರೀಶನಾರಾಯಣನ ಅಂಕಿತದಲ್ಲಿದೆ. ಇದನ್ನು ವಾರ್ಧಕ ಷಟ್ಪದಿಯಲ್ಲಿ ಬರೆಯಲಾಗಿದೆ.

'ಚಾಮರಾಜೋಕ್ತಿ ವಿಲಾಸ' ವೆಂಬ ರಾಮಾಯಣವಿದೆ. ಚಾಮಭೂಪಾಲನ 'ವಾಲ್ಮೀಕಿ ರಾಮಾಯಣ'ದ ಪದ್ಯರೂಪ. ಇವನಿಗೆ ಬಿರುದೆಂತೆಂಬರಗಂಡ, ಗಜವೇಂಟೆಗಾರ, ಚೌಷಷ್ಠಿ ಕಲಾಪ್ರವೀಣ ಎಂಬ ಬಿರುದುಗಳಿವೆ. ಪ್ರೌಢವಾದ ವಚನ ಶೈಲಿಯಲ್ಲಿರುವ ರಾಮಾಯಣವಿದು. ವಿರೂಪಾಕ್ಷನೆಂಬುವವನು ರಚಿಸಿ ಚಾಮರಾಜನಿಗೆ ಅಂಕಿತ ಮಾಡಿರಬಹುದೆಂದು ಊಹಿಸಲಾಗಿದೆ.

'ಶಂಕರ ರಾಮಾಯಣ' ವೊಂದು ದೊರಕಿದ್ದು ಇದರ ಕರ್ತೃ ಕವಿ ತಿಮ್ಮರಸನಿರಬಹುದೆಂದು ಹೇಳಲಾಗಿದೆ. ಆದಿಕಾಂಡ, ಬಾಲಕಾಂಡ, ಕ್ರೀಡಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸಮುದ್ರಕಾಂಡ, ಪಟ್ಟಾಭಿರಾಮಕಾಂಡ, ನಿಂದಾಕಾಂಡಗಳೆಂಬ ಭಾಗಗಳಿವೆ. ಇಂತಹ ವಿಭಾಗಗಳು ಸಂಸ್ಕೃತ ರಾಮಾಯಣದಲ್ಲೂ ಇಲ್ಲ. ಭಾಮಿನಿ ಷಟ್ಪದಿಯಲ್ಲಿರುವ ಈ ರಾಮಾಯಣದಲ್ಲಿ ಈಶ್ವರನು ಪಾರ್ವತಿಗೆ ರಘುವಂಶದ ಪರಂಪರೆಯನ್ನು ತಿಳಿಸುತ್ತಾನೆ.

೧೭೦೦ ರಲ್ಲಿ 'ರಾಮಚಂದ್ರ ಚರಿತ್ರೆ' ಯು ಚಂದ್ರಶೇಖರ ಕವಿಯಿಂದ ರಚಿಸಲ್ಪಟ್ಟಿತು. ಸುಮಾರು ೧೭೫೦ ರಲ್ಲಿ 'ದಶಕಂಠ ರಾಮಾಯಣ' ವೆಂಬ ಗದ್ಯ ಕಾವ್ಯವು ರಚನೆಯಾಗಿವೆ.

ಶಂಕರ ನಾರಾಯಣನೆಂಬ ಕವಿಯು ಭಾಮಿನೀ ಷಟ್ಪದಿಯಲ್ಲಿ 'ಆಧ್ಯಾತ್ಮ ರಾಮಾಯಣ'ವನ್ನು ಬರೆದಿದ್ದಾನೆ. ಆರು ಕಾಂಡಗಳನ್ನು ಮಾತ್ರ ಬರೆದಿದ್ದಾನೆ.

೧೭೫೦ ರ ಸುಮಾರಿಗೆ ಹರಿದಾಸನೆಂಬ ಮಾಧ್ವಕವಿಯು 'ಮೂಲಬಲ ರಾಮಾಯಣ'ವನ್ನು ಬರೆದಿದ್ದಾನೆ. ಭಾಮಿನೀ ಷಟ್ಪದಿಯಲ್ಲಿರುವ ಇದರಲ್ಲಿ ೧೩ ಸಂಧಿಗಳಲ್ಲಿ ೭೩೬ ಪದ್ಯಗಳಿವೆ. ನರಸಿಂಹನ ಅಂಕಿತದಿಂದ ಕೊನೆಗೊಂಡಿದೆ. ರಾಮನು ರಾವಣ ಕುಂಭಕರ್ಣರ ಮೂಲಬಲವನ್ನು ನಾಶಮಾಡಿದ್ದನ್ನು ಇಲ್ಲಿ ಹೇಳಲಾಗಿದೆ.

೧೭೭೦ ರ ಸುಮಾರಿಗೆ ವೆಂಕಾಮಾತ್ಯನೆಂಬುವವನು ವಾರ್ಧಕ ಷಟ್ಪದಿಯಲ್ಲಿ 'ಶ್ರೀಮದ್ರಾಮಾಯಣ' ಆಥವಾ 'ಶ್ರೀರಾಮಕಥಾಭ್ಯುದಯ' ವೆಂಬ ರಾಮಾಯಣವನ್ನು ರಚಿಸಿದ್ದಾನೆ. ಇದೊಂದು ಪ್ರೌಢಕಾವ್ಯವಾಗಿದ್ದು ಹನುಮಂತನ ವರಪ್ರಸಾದದಿಂದ ಸಾಮ್ರಾಜ್ಯವನ್ನು ಪಡೆದನೆಂದು ಹೇಳಿಕೊಂಡಿದ್ದಾನೆ.

'ತಿರುಮಲೇಶ ಚರಿತೆ'ಯೆಂಬ ರಾಮಕಥೆಯಿರುವ ಕೃತಿಯಿದ್ದು ಇದರ ಕರ್ತೃ ಯಾರೆಂಬುದು ತಿಳಿದಿಲ್ಲ. ದೇವತೆಗಳನ್ನು ರಕ್ಷಿಸಲು ತಿರುಮಲೇಶನು ಹತ್ತೂ ಅವತಾರಗಳೆತ್ತಿದ ಕಥೆಯು ಇಲ್ಲಿದೆ. ೯ ಸಂಧಿಗಳಲ್ಲಿ ೨೧೧೯ ಪದ್ಯಗಳಿವೆ. ಪ್ರಾರಂಭದಲ್ಲಿ ಕೂರ್ಮ, ವರಾಹ, ನರಸಿಂಹಾವತಾರಗಳ ಕಥಾ ಸಂಗ್ರಹವಿದ್ದು ರಾಮಕಥೆ ಮಾತ್ರ ವಿಸ್ತಾರವಾಗಿದೆ.

'ವರದವಿಠಲ ರಾಮಾಯಣ'ವು ಲಭ್ಯವಾಗಿದ್ದು ಭಾಮಿನೀ ಷಟ್ಪದಿಯಲ್ಲಿದೆ. ೫೬ ಸಂಧಿಗಳಲ್ಲಿ ೩೩೮೨ ಪದ್ಯಗಳಿವೆ. ಕವಿಯ ಹೆಸರು ತಿಳಿದಿಲ್ಲ. ಇಲ್ಲಿ ಬರುವ ಕಥೆ ವಿಶೇಷವಾಗಿದೆ. ಕೋಸಲ ದೇಶದ ಕುಶಲನೃಪನ ಮಗಳನ್ನು ದಶರಥನಿಗೆ ವಿವಾಹ ಮಾಡಿಕೊಡಬೇಕೆಂದು ನಿಶ್ಚಯಿಸಲಾಗಿತ್ತು. ರಾವಣನು ಅವಳನ್ನು ಅಪಹರಿಸಬೇಕೆಂದಿದ್ದನು. ದೈವಬಲದಿಂದ ದಶರಥನೊಂದಿಗೆ ಅವಳ ಮದುವೆಯಾಗುತ್ತದೆ. ರಾವಣನ ಮಗನಾದ ಮೂಲಕಾಸುರನು ನಾರದನಿಂದ ಪ್ರಚೋದಿತನಾಗಿ ವಿಭೀಷಣನನ್ನು ಸೋಲಿಸಿ ಅಯೋಧ್ಯೆಗೆ ತೆರಳಿ ಅಲ್ಲಿ ರಾಮಲಕ್ಷ್ಮಣರನ್ನು ಜಯಿಸಿ ಕುಶನಿಂದ ಹತನಾಗುತ್ತಾನೆ.

ದೇವೇಂದ್ರಕವಿಯು ೧೭೯೨ ರಲ್ಲಿ 'ರಾಮಕಥಾವತಾರ' ವನ್ನು ರಚಿಸಿದ್ದಾನೆ. ಇದೊಂದು ಜೈನಪರಂಪರೆಯ ರಾಮಾಯಣ.

೧೮೧೦ ರಲ್ಲಿ ಚಂದ್ರಸಾಗರವರ್ಣಿಯು 'ಜಿನರಾಮಾಯಣ'ವನ್ನು ಬರೆದಿದ್ದಾನೆ. ಇದು ಕೂಡ ಜೈನ ಪರಂಪರೆಯ ರಾಮಾಯಣವಾಗಿದೆ.

ಮುಮ್ಮಡಿ ಕೃಷ್ಣರಾಜರು ರಚಿಸಿರುವ 'ಆಧ್ಯಾತ್ಮರಾಮಾಯಣ'ವು ಗದ್ಯಕೃತಿಯಾಗಿದೆ. ಇದರಲ್ಲಿ ೬ ಕಾಂಡಗಳು ೫ ಸಂಧಿಗಳಿಂದ ೮೫೦೦ ಗ್ರಂಥಸಂಖ್ಯೆಗಳಿಂದ ಕೂಡಿದೆ.

ನಂದಳಿಕೆ ಲಕ್ಷ್ಮೀನಾರಣಪ್ಪನಿಂದ 'ಅದ್ಭುತ ರಾಮಾಯಣ', 'ರಾಮಾಶ್ವಮೇಧ'ಗಳೆಂಬ ಹಳಗನ್ನಡ ಗದ್ಯಗ್ರಂಥಗಳು ರಚಿತವಾಗಿವೆ. 'ಶ್ರೀರಾಮಪಟ್ಟಾಭಿಷೇಕ'ವು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವ

ಕಾವ್ಯವಾಗಿದೆ. ರಾಮನು ವನವಾಸದಿಂದ ಬಂದ ಮೇಲೆ ನಡೆದ ಪಟ್ಟಾಭಿಷೇಕವೇ ಇದರ ವಸ್ತುವಾಗಿದೆ. ಇದರಲ್ಲಿ ೫ ಸಂಧಿಗಳೂ ೨೪೭ ಪದ್ಯಗಳೂ ಇವೆ. ಮುದ್ದಣನೆಂದೇ ಖ್ಯಾತನಾಗಿರುವ ಈತನ ಕಾಲ ೧೮೭೦ ರಿಂದ ೧೯೦೧ರವರೆಗೆ ಹೇಳಲಾಗಿದೆ. ಅದ್ಭುತ ರಾಮಾಯಣವು ಸಂಸ್ಕೃತದ ಅದ್ಭುತ ರಾಮಾಯಣದ ಆಧಾರದಿಂದ ಬರೆಯಲಾಗಿದೆ. ರಾಮನಿಗಿಂತಲೂ ಪ್ರಕೃತಿಯಾದ ಸೀತೆಯೇ ಬಲಿಷ್ಠಳೆಂಬ ಅಂಶವನ್ನು ಇದರಲ್ಲಿ ಪ್ರತಿಪಾದಿಸಲಾಗಿದೆ. ಈ ಕೃತಿಯು ಸೀತೆಯ ಅದ್ಭುತಗಳನ್ನು ಕೊಂಡಾಡುವ ವೇದಾಂತಪ್ರಧಾನವಾದ ಒಂದು ಶಾಕ್ತ ಪುರಾಣವಾಗಿದೆಯೆಂದು ಎಸ್.ವಿ. ಪರಮೇಶ್ವರ ಭಟ್ಟರು[೫] ಅಭಿಪ್ರಾಯ ಪಡುತ್ತಾರೆ.

'ರಾಮಾಶ್ವಮೇಧವು' ಉತ್ತರ ಕಾಂಡದ ಕಥೆಯನ್ನು ಹೇಳಿದೆ. ಕವಿಯು 'ಪದ್ಮಪುರಾಣ' ದಲ್ಲಿ ಶೇಷವಾತ್ಸಾಯನನಿಗೆ ಹೇಳಿದನೆಂದು ನಿರೂಪಿಸಲಾಗಿರುವ ಸಂಸ್ಕೃತದ 'ರಾಮಾಶ್ವಮೇಧ' ವನ್ನು ಮೂಲವಾಗಿರಿಸಿಕೊಂಡಿದ್ದಾನೆ.

೧೯೧೯ ರಲ್ಲಿ ಎಚ್. ಲಿಂಗರಾಜ ಅರಸರಿಂದ ರಚಿತವಾದ 'ರಾಮಾಯಣ ಸಂಗ್ರಹ' ಕೃತಿಯೊಂದಿದೆ. ಇದು ೧೧ ಸಂಧಿಯುಳ್ಳದ್ದಾಗಿದೆ.

'ಶೇಷರಾಮಾಯಣ' ವೆಂಬ ಕೃತಿಯು ಚಾಮರಾಜ ಒಡೆಯರ ಆಸ್ಥಾನ ಕವಿಯಾಗಿದ್ದ ಸೋಸಲೆ ಅಯ್ಯಾಶಾಸ್ತ್ರಿಗಳಿಂದ ರಚಿತವಾಗಿದೆ. ೩೪ ಸಂಧಿಗಳೂ ೧೩೪೦ ಪದ್ಯಗಳೂ ಇವೆ.

### ೩.೧೨ ಶ್ರೀರಾಮಾಯಣ ದರ್ಶನಂ

'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯವು ೨೦ ನೆಯ ಶತಮಾನದಲ್ಲಿ ಕುವೆಂಪು ಅವರಿಂದ ರಚಿತವಾಯಿತು. ಇದರಲ್ಲಿ ಅಯೋಧ್ಯಾ ಸಂಪುಟಂ, ಕಿಷ್ಕಿಂಧಾ ಸಂಪುಟಂ, ಲಂಕಾ ಸಂಪುಟಂ, ಶ್ರೀ ಸಂಪುಟಂ ಎಂಬ ನಾಲ್ಕು ಭಾಗಗಳಿವೆ. ಇದರಲ್ಲಿ ರಾಮಪಟ್ಟಾಭಿಷೇಕದವರೆಗಿನ ಕಥೆ ಮಾತ್ರ ಇದೆ. ಕವಿಯು ರಾಮನ ಕಥೆಯ ಪಂಜರದಲ್ಲಿ ಪುರುಷೋತ್ತಮನಾದ ರಾಮಪರಾತ್ಪರನ ಲೋಕಲೀಲಾದರ್ಶನಂ ಮಾಡಿಸಿದ್ದಾರೆ. ಆ ರಾಮನಿಗೆ ಪ್ರಾಣಕ್ಕಿಂತ ಪ್ರಿಯವಾದುದು ಧರ್ಮ. ಅದನ್ನು ಲೀಲಾರೂಪದಲ್ಲಿ ಪ್ರದರ್ಶಿಸುವುದೇ ಅವನ ಅವತಾರದ ರಹಸ್ಯವಾಗಿದೆ. ಒಂದೊಂದು ಕಥಾ ಸಂಚಿಕೆಗೂ ಒಂದೊಂದು ಹೆಸರನ್ನಿಡುವ ಮೂಲಕ ಭಿನ್ನವಾಗಿ ರಚಿಸಿದ್ದಾರೆ. ಇಂತಹ ವಿಭಾಗಗಳು ಆಯಾ ಪ್ರಸಂಗಗಳಿಗೊಂದು ಹೆಸರು ಈವರೆಗಿನ ಬೇರೆ ಯಾವ ರಾಮಾಯಣಗಳಲ್ಲೂ ಮೂಡಿಲ್ಲವೆಂಬುದು ಇಲ್ಲಿ ವಿಶೇಷವಾಗಿದೆ. ಸನ್ನಿವೇಶಗಳಲ್ಲಿಯೂ, ಪಾತ್ರರಚನೆಗಳಲ್ಲಿಯೂ ಮೂಲ ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನವಾಗಿ ಮೂಡಿಬಂದಿದೆ.

ಬಾಲಕಾಂಡದಲ್ಲಿ ಬರುವ ಉಪಕಥೆಗಳಿಲ್ಲ, ಕೊನೆಯ ಉತ್ತರಕಾಂಡದ ಭಾಗವೂ ಇಲ್ಲ. ಮಂಥರೆಯ ಪಾತ್ರವು ಮೊದಲಿನಿಂದ ಕೊನೆಯವರೆಗೂ ಬೆಳೆದಿದೆ. ಮಂಥರೆಗೆ ಕೈಕೇಯಿ ಮತ್ತು ಭರತನ ಮೇಲೆ ವಿಶೇಷ

ವಾತ್ಸಲ್ಯವಿದ್ದುದರಿಂದ ಭರತನಿಗೆ ರಾಜ್ಯವನ್ನು ಉಳಿಸಿಕೊಳ್ಳುವಲ್ಲಿ ಪ್ರಧಾನ ಪಾತ್ರವಹಿಸುತ್ತಾಳೆ. ಅದರಲ್ಲಿ ಸೋತಾಗಲೂ ಮತ್ತೆ ಭರತನ ವಿಶ್ವಾಸ ಗಳಿಸಲು ರಾಮನು ವನವಾಸದಿಂದ ಹಿಂದಿರುಗಿ ಬಂದ ವಿಷಯವನ್ನು ಭರತನಿಗೆ ತಿಳಿಸುವುದೂ ಅವಳೇ. ಈ ಪಾತ್ರ ಪೋಷಣೆ ಸಮರ್ಥವಾಗಿ ಆಗಿದೆ ಎಂದರೆ ತಪ್ಪಾಗಲಾರದು.

ರಾಮ ಮತ್ತು ವಾಲಿ ಸಂವಾದದಲ್ಲಿ ಬೆನ್ನಹಿಂದಿನಿಂದ ಹೊಡೆದ ಬಗ್ಗೆ ಆಕ್ಷೇಪಿಸಿದಾಗ, ರಾಮನು ಮೊದಲು ವಾದಮಾಡಿದರೂ ನಂತರ ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾನೆ. ಇಲ್ಲಿ ರಾವಣನ ಪಾತ್ರವೂ ಉದಾತ್ತವಾಗಿದೆ. ರಾವಣನು ಸೀತೆಯು ಲಕ್ಷ್ಮಿಯ ಅವತಾರವೆಂದು ತಿಳಿದ ಮೇಲೆ ರಾಮನನ್ನು ಸೋಲಿಸಿ ಸೀತೆಯನ್ನು ಹಿಂದಿರುಗಿಸಲು ನಿಶ್ಚಯಿಸುತ್ತಾನೆ. ಸೀತೆಯ ಅಗ್ನಿಪ್ರವೇಶವು ವಿಶೇಷವಾಗಿದೆ. ಸೀತೆಯನ್ನು ಪಾಲಿಸುವ ನೆಪದಿಂದ ರಾಮನು ತನ್ನನ್ನು ಪರೀಕ್ಷೆಗೊಳಪಡಿಸಿಕೊಂಡು ಲೋಕಮರ್ಯಾದೆಯನ್ನು ಪಾಲಿಸುತ್ತಾನೆ. ೨೦ನೆಯ ಶತಮಾನದ ಆದರ್ಶ ಗುಣಗಳನ್ನು ರಾಮನಲ್ಲಿ ಸಮನ್ವಯಗೊಳಿಸಿ ದೇವಮಾನವತ್ವದ ಐಕ್ಯವನ್ನು ತೋರ್ಪಡಿಸುವಲ್ಲಿ ಕುವೆಂಪುರವರು ಯಶಸ್ವಿಯಾಗಿದ್ದಾರೆ.

**೩.೧೩ ಜನಪದ ರಾಮಕಥೆಗಳು**

**ಅ. ಅವಧ್ ರಾಮಾಯಣ– ಡಾ. ಕಿರಣ್ ಮರಾಲಿ**

ರಾಮಕಥೆಗೆ ಸಂಬಂಧಿಸಿದ ಅವಧಿ ಭಾಷೆಯ ಕಥನಗೀತೆಗಳನ್ನು ರಾಮಕಥೆಗೆ ಸಂಬಂಧಿಸಿದ ಅವಧಿ ಭಾಷೆಯ ಕಥನಗೀತೆಗಳನ್ನು ಸಂಪಾದಿಸಿ, ದೀರ್ಘ ಮುನ್ನುಡಿಯೊಂದಿಗೆ 'ಲೋಕಗೀತೋಂಮೆ ರಾಮಕಥಾ: ಅವಧಿ ಎಂಬ ಶೀರ್ಷಿಕೆಯಲ್ಲಿ ೧೯೮೬ರಲ್ಲಿ ಪ್ರಕಟಿಸಿದ್ದಾರೆ. ಈ ಕಥೆಯ ಆಯ್ದ ಭಾಗಗಳನ್ನು ಸಂದರ್ಭಕ್ಕೆ ಹೊಂದುವಂತೆ ಮಹಿಳೆಯರು ಹಾಡುತ್ತಾರೆ. ಉತ್ತರ ರಾಮಾಯಣವೂ ಸೇರಿದಂತೆ ಸಂಪೂರ್ಣ ರಾಮಾಯಣದ ಕಥೆ ಇದು.

**ಆ. ಭಲ್ಲ ರಾಮಾಯಣ:**

ಉತ್ತರ ಗುಜರಾತಿನ ಡುಂಗರಿ ಭಲ್ಲರೆಂಬ ಬುಡಕಟ್ಟಿನವರು ರಾಮ್ ಸೀತ್ಮಾ ನಿ ವಾರ್ತಾ ಎಂಬ ರಾಮಾಯಣವನ್ನು ಹಾಡುತ್ತಾರೆ. ಡಾ. ಭಗವಾನ್ ದಾಸ್ ಅವರು ಕೆಲ ಭಾಗಗಳನ್ನು ಗುಜರಾತಿಗೆ ಭಾಷೆಗೆ ಅನುವಾದಿಸಿ ಪ್ರಕಟಿಸಿದ್ದಾರೆ.

### ಇ. ಕುಂಕಣಾ ರಾಮಾಯಣ

ಗುಜರಾತ್-ಮಹಾರಾಷ್ಟ್ರ ಗಡಿಭಾಗದ ಡಾಂಗ್ ಜಿಲ್ಲೆಯ ಕುಕಣಾ ಬುಡಕಟ್ಟಿನವರು ಹಾಡುವ ರಾಮಾಯಣ ಕಥೆಯನ್ನು ದಹ್ಯಾಭಾಯಿ ವಾಧು ಎಂಬುವವರು ಸಂಪಾದಿಸಿ ಪ್ರಕಟಿಸಿದ್ದಾರೆ.

### ಈ. ಗೊಂಡ ರಾಮಾಯಣ

ಸಹ್ಯಾದ್ರಿ ಪರ್ವತ ಶ್ರೇಣಿಯ ಪಶ್ಚಿಮದ ತಪ್ಪಲುಗಳಲ್ಲಿ ವಾಸಮಾಡುವ ಗೊಂಡರು ಹಾಡುವ ರಾಮಕಥೆ ಇದು. ಡಾ. ಹಿ.ಚಿ. ಬೋರಲಿಂಗಯ್ಯ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿ ಸಂಪೂರ್ಣ ರಾಮಾಯಣದ ಕಥೆಯಿದೆ.

### ಉ. ಜನಪದ ರಾಮಾಯಣ

ಸೀತೆಯ ಜನನ, ಸೀತಾ ಸ್ವಯಂವರ, ಸೀತಾ ಪರೀಕ್ಷೆ, ಸುಣ್ಣುಮಾರನ ಕಥೆ, ಲವಕುಶರ ಕಾಳಗ, ಮುಂತಾದ ಭಿನ್ನ ರಾಮಕಥೆಗಳಿರುವ ಕನ್ನಡದ ಈ ಸಂಕಲನವನ್ನು ಡಾ. ರಾಮೇಗೌಡ, ಡಾ. ಪಿ.ಕೆ. ರಾಜಶೇಖರ ಮತ್ತು ಡಾ. ಎಸ್. ಬಸವಯ್ಯ ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿರುವ ಮೊದಲಿನ ಮೂರು ಕಥನಗಳು ರಾಮಾಯಣ ಕೆಲವು ಭಾಗಗಳನ್ನು ಮಾತ್ರ ಒಳಗೊಂಡಿದ್ದರೆ, ೧೨೧ ಪುಟಗಳಷ್ಟು ಸುದೀರ್ಘವಾಗಿರುವ ನಾಲ್ಕನೆಯ 'ತಂಬೂರಿಯವರ ರಾಮಾಯಣ' ರಾಮಾಯಣದ ಸಂಪೂರ್ಣ ಕಥೆಯನ್ನು ನಿರೂಪಿಸುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಗೊಂಡ ರಾಮಾಯಣವನ್ನು ಹೋಲುತ್ತದೆ.

### ೩.೧೪ ಆಗ್ನೇಯ ಏಷ್ಯಾದ ರಾಮಕಥೆಗಳು

ಥಾಯ್‌ಲ್ಯಾಂಡ್‌ನ ರಾಮಕಥೆಗಳಲ್ಲಿ ಪ್ರಮುಖವಾದುದು 'ರಾಮಕೀರ್ತಿ' ಅಥವಾ 'ರಾಮಕೀನ್'. ಇದು ವಾಲ್ಮೀಕಿ ರಾಮಾಯಣದಿಂದ ಪ್ರಭಾವಗೊಂಡಿರುವುದು ಕಂಡುಬರುತ್ತದೆ. ಮಾನವ, ರಾಕ್ಷಸರು ಹಾಗೂ ವಾನರ- ಈ ಮೂರು ಬಗೆಯ ಪಾತ್ರಗಳ ಉಗಮದೊಂದಿಗೆ ಥಾಯ್‌ನ ರಾಮಕಥೆ ಆರಂಭವಾಗುತ್ತದೆ. ಎರಡನೆಯ ಭಾಗದಲ್ಲಿ ಸೋದರರು ರಾಕ್ಷಸರ ಜೊತೆಗೆ ನಡೆಸಿದ ಮೊದಲ ಮುಖಾಮುಖಿ ರಾಮನ ಮದುವೆ, ವನವಾಸ, ಸೀತಾಪಹರಣ, ಕಪಿವೀರನ ಭೇಟಿ ಮೊದಲಾದ ವಿಚಾರಗಳನ್ನು ವರ್ಣಿಸಲಾಗಿದೆ. ಅಲ್ಲದೆ ಯುದ್ಧಸಿದ್ಧತೆ, ಹನುಮಂತನ ಲಂಕಾ ಪ್ರವೇಶ, ಲಂಕಾದಹನ ಸೇತುಬಂಧ, ರಾವಣಸಂಹಾರ ಹಾಗೂ ರಾಮ ಸೀತೆಯರ ಸಮಾಗಮದ ವರ್ಣನೆಯೂ ಈ ಭಾಗದಲ್ಲಿದೆ. ಎ.ಕೆ. ರಾಮಜನ್ ಅವರ ಅಭಿಪ್ರಾಯದಂತೆ, ದಕ್ಷಿಣ ಭಾರತದ ಜಾನಪದ ರಾಮಾಯಣಗಳಲ್ಲಿ ಕಂಡುಬರುವ ಹಾಗೆ (ಕೆಲವು ಜೈನ,

ಬಂಗಾಳಿ ಹಾಗೂ ಕಾಶ್ಮೀರಿ ರಾಮಾಯಣಗಳಲ್ಲಿರುವಂತೆ) ಸೀತಾ ಪರಿತ್ಯಾಗಕ್ಕೆ ವೈಚಾರಿಕವಾದ ಒಂದು ನಾಟಕೀಯ ತಿರವು ನೀಡಲಾಗಿದೆ.[೬]

### ೩.೧೫ ಸ್ತ್ರೀ ಪಾತ್ರಗಳ ನಿರ್ವಚನ

ಪ್ರಸ್ತುತ ಭಾಗದಲ್ಲಿ ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಸ್ತ್ರೀ ಪಾತ್ರಗಳು ಆಯಾ ರಾಮಾಯಣಗಳಲ್ಲಿ ಹೇಗೆ ಅಭಿವ್ಯಕ್ತಗೊಂಡಿದೆಯೆಂಬುದನ್ನು ಯಥಾವತ್ತಾಗಿ ಸಂಗ್ರಹಿಸಲಾಗಿದೆ. ಮೂಲ ವಾಲ್ಮೀಕಿ ರಾಮಾಯಣದಲ್ಲಿ ಈ ಪಾತ್ರಗಳು ಹೇಗಿವೆ ಎಂಬುದನ್ನು ಯಥಾಸ್ಥಿತಿಯಲ್ಲಿ ಸಂಗ್ರಹಿಸಿ ಕೊಟ್ಟಿದೆ. ಅದರ ಆಧಾರದ ಮೇಲೆ ಆಯ್ದುಕೊಂಡಿರುವ ವಿವಿಧ ರಾಮಾಯಣಗಳಲ್ಲಿ ಈ ಪಾತ್ರಗಳು ಹೇಗೆ ಭಿನ್ನವಾಗಿವೆ, ಮೂಲ ಸ್ಥಿತಿಯಲ್ಲಿ ಇರುವ ಕಥೆಗೂ ಉಳಿದ ರಾಮಾಯಣಗಳಲ್ಲಿ ಇರುವ ಕಥೆಗೂ ಎಲ್ಲೆಲ್ಲಿ ಭಿನ್ನವಾಗಿದೆ, ಹಾಗೆ ಭಿನ್ನವಾಗಿರಲು ಕಾರಣವೇನಿರಬಹುದೆಂದು ಚರ್ಚಿಸಿ ಆ ಹಿನ್ನಲೆಯಲ್ಲಿ ಪಾತ್ರಗಳ ಪೂರ್ಣ ಬೆಳವಣಿಗೆಯನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕಾಗಿ ನಾವು ಆಯ್ದುಕೊಂಡಿರುವ ರಾಮಾಯಣಗಳೆಂದರೆ ಹಿಂದೆಯೇ ತಿಳಿಸಿರುವಂತೆ ಮೂಲ ವಾಲ್ಮೀಕಿ ರಾಮಾಯಣ, ಹಿಂದಿಯ ತುಲಸೀ ರಾಮಾಯಣ, ಸಾಕೇತ ರಾಮಾಯಣ, ಕನ್ನಡದ ಪಂಪ ರಾಮಾಯಣ, ತೊರವೇ ರಾಮಾಯಣ, ರಾಮಾಯಣ ದರ್ಶನಂ ಮತ್ತು ಜನಪದ ರಾಮಾಯಣಗಳಲ್ಲಿ ಪ್ರಮುಖವಾಗಿ ಗೊಂಡ ರಾಮಾಯಣ.

ಮೂಲ ಪಾತ್ರಗಳ ಕಥೆಯನ್ನು ವಿವರಿಸುವ ಮೊದಲು ಆಯಾ ಪಾತ್ರಗಳ ಬಗೆಗೆ ವೇದ, ಉಪನಿಷತ್ತು, ಪುರಾಣ, ಭಾಗವತ ಮುಂತಾದವುಗಳಲ್ಲಿ ಯಾವ ಸಂದರ್ಭದಲ್ಲಿ ಪ್ರಸ್ತಾಪಿಸಲಾಗಿವೆ ಎನ್ನುವುದನ್ನು ಸಂಗ್ರಹಿಸಿ ನೀಡಲಾಗಿದೆ. ಹಾಗೆ ನೀಡುವಾಗ ಮೂಲ ಪಾಠಗಳನ್ನು ನೀಡದೆ ಬರಿಯ ಕಥೆ, ಸನ್ನಿವೇಷಗಳನ್ನು ಮಾತ್ರ ವಿವರಿಸಲಾಗಿದೆ.

ನಂತರ ವಾಲ್ಮೀಕಿ ರಾಮಾಯಣ ಮುಂತಾದವುಗಳಿಂದ ಸಂಗ್ರಹಿಸುವಾಗ ಮೂಲ ಪಾಠದ ಅರ್ಥವನ್ನೂ ನೀಡಲಾಗಿದೆ. ಅನುವಾದವನ್ನು ನೀಡುವಾಗ ಅನುವಾದಕರ ಮಾತುಗಳಲ್ಲಿಯೇ ಸಂಗ್ರಹಿಸಲಾಗಿದೆ. ಅಡಿಟಿಪ್ಪಣಿಯಲ್ಲಿ ಆಕರಗಳ ವಿವರಗಳನ್ನು ನೀಡಿದೆ.

ವಿಷಯವನ್ನು ಸಂಗ್ರಹಿಸುವಾಗ ಮತ್ತು ವಿಶ್ಲೇಷಿಸುವಾಗ ಮೊದಲು ಮಾನವ ಪಾತ್ರಗಳನ್ನು ನಂತರ ರಾಕ್ಷಸರ ಪಾತ್ರಗಳನ್ನು ತೆಗೆದುಕೊಳ್ಳಲಾಗಿದೆ. ಮನುಷ್ಯ ಮತ್ತು ರಾಕ್ಷಸರ ನಡುವೆಯಿರುವ ಆಕಾರ, ಗುಣ, ಸ್ವಭಾವಗಳು ಬೇರೆಯಾಗಿರುವುದರಿಂದ ಈ ಕ್ರಮವನ್ನು ಅನುಸರಿಸಲಾಗಿದೆ. ವಿಷಯ ಸಂಗ್ರಹಿಸುವಾಗ ನಾವು ಆಯ್ದುಕೊಂಡಿರುವ ಸ್ತ್ರೀಪಾತ್ರಗಳ ಬಗೆಗೆ ಕೆಲವು ರಾಮಾಯಣಗಳಲ್ಲಿ ಯಾವುದೇ ವಿಷಯಗಳ ಪ್ರಸ್ತಾಪವಿಲ್ಲದಿರುವಾಗ ಅಂತಹವುಗಳನ್ನು ಹಾಗೆಯೇ ಬಿಡಲಾಗಿದೆ. ಅಂತಹ ಸಂದರ್ಭದಲ್ಲಿ ನಾವು

ಆಯ್ದುಕೊಂಡಿರುವ ಸಿಕ್ಕಿರುವ ಮಾಹಿತಿಗಳನ್ನಷ್ಟೇ ಸಂಗ್ರಹಿಸಲಾಗಿದೆ. ಅಂತಹ ಅಧ್ಯಯನದ ಸಂದರ್ಭದಲ್ಲಿ ಮಾಹಿತಿ ಸಿಕ್ಕಿರುವ ರಾಮಾಯಣಗಳನ್ನು ಮಾತ್ರ ಗಮನದಲ್ಲಿರಿಸಿಕೊಳ್ಳಲಾಗಿದೆ. ಇದಕ್ಕೆ ಕಾರಣವೇನೆಂದರೆ ವೈದಿಕ ರಾಮಾಯಣಗಳ ಪಾತ್ರ ಕಥೆಗಳಿಗೂ ಜೈನ ರಾಮಾಯಣಗಳ ಪಾತ್ರಕಥೆಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಕಥೆ ಮತ್ತು ಪಾತ್ರಗಳನ್ನು ಅಭಿವ್ಯಕ್ತಗೊಳಿಸುವಾಗಲೂ ಭಿನ್ನತೆಗಳಿವೆ. ಉದಾಹರಣೆಗೆ ರಾಮಾವತಾರವಾಗುವುದು ರಾವಣ ಸಂಹಾರಕ್ಕಾಗಿ, ಅದಕ್ಕೆ ಹಿನ್ನಲೆಯಾಗಿ ಕಥೆಯ ಬೆಳವಣಿಗೆಯಿದೆ. ಆದರೆ ಜೈನ ರಾಮಾಯಣದಲ್ಲಿ ರಾವಣಸಂಹಾರವಾಗುವುದು ಲಕ್ಷ್ಮಣನಿಂದ. ಜೈನಧರ್ಮ ಅಹಿಂಸಾಪರವಾಗಿರುವುದರಿಂದ ರಾಮನಿಂದ ರಾವಣ ಹತ್ಯೆಯಾಗುವುದಿಲ್ಲ. ಹಾಗೇನಾದರೂ ಆದರೆ ರಾಮ ಹಿಂಸೆ ಮಾಡಿದಂತಾಗುತ್ತದೆ. ಆದರೆ ರಾಮನ ಶೌರ್ಯತೆ ಕಡಿಮೆಯಾಗಿ ಲಕ್ಷ್ಮಣ ಶೂರನೆನಿಸಿಕೊಳ್ಳುತ್ತಾನೆ. ವೈದಿಕ ರಾಮಾಯಣದಲ್ಲಿ ರಾಮ ಅಪ್ರತಿಮ ಶೂರ ಉಳಿದವರೆಲ್ಲ ಅವನ ನಂತರ ಬರುವವರೇ ಆಗಿದ್ದಾರೆ. ಹೀಗಾಗಿಯೇ ಕೆಲವು ಅಭಿಪ್ರಾಯಗಳಲ್ಲಿ ಭಿನ್ನತೆ ಬಂದಿರುವ ಸಾಧ್ಯತೆಗಳಿವೆ.

ಇನ್ನೊಂದು ಉದಾಹರಣೆಯೆಂದರೆ ಹಿಂದಿಯ ಸಾಕೇತ ರಾಮಾಯಣದಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗ ಊರ್ಮಿಳೆಯ ವೃತ್ತಾಂತವೇ ಇದೆ. ಇಲ್ಲಿ ಶೂರ್ಪಣಖಿ, ಮಂಡೋದರಿ, ರಾವಣ ಮುಂತಾದ ಪಾತ್ರಗಳ ಪ್ರಸ್ತಾಪವೇ ಇಲ್ಲ. ಇಂತಹ ಸಂದರ್ಭಗಳಿಗೆ ಕಾರಣ ಸಂಶೋಧನೆಗೆ ಆಯ್ದುಕೊಂಡಿರುವ ವಿಷಯವೇ ಆಗಿದೆ. ಇದರಿಂದಾಗಿ ರಾಮಾಯಣ ಕಥೆ ಅಧ್ಯಯನದ ವಸ್ತುವಾಗಲು ಸಾಧ್ಯವಿಲ್ಲವೆಂಬುದು ನಿರ್ವಿವಾದ. ಇನ್ನೂ ಒಂದು ವಿಚಾರವೆಂದರೆ ಆಯಾ ಪಾತ್ರಗಳ ಬಗೆಗೆ ಮಾಹಿತಿ ಸಂಗ್ರಹಿಸುವಾಗ ಪ್ರತ್ಯಕ್ಷವಾಗಿ ಆಡಿದ ಮಾತುಗಳನ್ನಷ್ಟೇ ಸಂಗ್ರಹಿಸಲಾಗಿದೆ. ಉದಾಹರಣೆಗೆ ಸೀತೆಯ ವೃತ್ತಾಂತವನ್ನು ಹೇಳುವಾಗ ಅವಳು ಇದ್ದ ಸನ್ನಿವೇಷಗಳನಷ್ಟೇ ತೆಗೆದುಕೊಂಡಿದೆ. ಸೀತಾಪಹರಣದ ನಂತರ ರಾಮನ ಪ್ರಲಾಪ, ಸೀತೆಯ ಬಗ್ಗೆ ಅವನು ಹೇಳುವ ಮಾತುಗಳು ಇವುಗಳನ್ನು ಸಂಗ್ರಹಿಸಿಲ್ಲ. ಪಾತ್ರ ವಿಶ್ಲೇಷಣೆಯ ಸಂದರ್ಭದಲ್ಲಿ ಅಗತ್ಯವಾದಾಗಷ್ಟೇ ಆ ವಿವರಗಳನ್ನು ಬಳಸಿಕೊಂಡಿದೆ. ಇದು ಆಯ್ಕೆಮಾಡಿಕೊಂಡಿರುವ ಎಲ್ಲ ಸ್ತ್ರೀ ಪಾತ್ರಗಳಿಗೂ ಅನ್ವಯಿಸುತ್ತದೆ. ಇದನ್ನು ಪದೇ ಪದೇ ಪ್ರಸ್ತಾಪಿಸಲು ಹೋಗಿಲ್ಲ. ಇದು ಕೆಲವೊಮ್ಮೆ ಸಂಬಂಧವಿಲ್ಲದಂತೆ, ಮಧ್ಯದ ಕೊಂಡಿ ಕಳಚಿದಂತೆ ಭಾಸವಾದರೂ ಅದೇ ಕ್ರಮವನ್ನು ಅನುಸರಿಸಲಾಗಿದೆ.

### ೩.೧೬ ಸೀತೆಯ ಪಾತ್ರದ ನಿರ್ವಚನ

ಕೃತಯುಗದಲ್ಲಿ ಕೃಶಧ್ವಜನ ಮಗಳಾಗಿದ್ದ ವೇದವತಿಯೇ ತ್ರೇತಾಯುಗದಲ್ಲಿ ರಾಮನ ಪತ್ನಿಯಾದ ಸೀತಾದೇವಿ. ವೇದವತಿಯು ವಿಷ್ಣುವನ್ನು ಪತಿಯನ್ನಾಗಿ ಪಡೆಯಬೇಕೆಂದು ತಪಸ್ಸು ಮಾಡುತ್ತಿರುವಾಗ ಮಹೇಶ್ವರನಿಂದ ಸೋತು ಹಿಂದಿರುಗುತ್ತಿದ್ದ ರಾವಣನು ಇವಳನ್ನು ಕಂಡನು. ಮೋಹಿತನಾದ ರಾವಣನನ್ನು ವೇದವತಿಯನ್ನು ವಿವಾಹವಾಗಲು ಇಚ್ಛಿಸಿ ಅವಳಿಂದ ತಿರಸ್ಕೃತನಾದನು. ಆಗ ರಾವಣನು ಬಲತ್ಕಾರವಾಗಿ

ಉಪಭೋಗಿಸಲು ಅವಳ ಕೇಶವನ್ನು ಹಿಡಿದೆಳೆದನು. ಕೇಶವನ್ನು ಜಗ್ಗಿ ಬಿಡಿಸಿಕೊಂಡ ವೇದವತಿಯು 'ನಿನ್ನ ವಧೆಗಾಗಿ ನಾನು ಪುನರ್ಜನ್ಮ ತಾಳಿ ಬರುತ್ತೇನೆ' ಎಂದು ಶಾಪವಿತ್ತಳು. ತ್ರೇತಾಯುಗದಲ್ಲಿ ವಿಷ್ಣುವಿನ ಅವತಾರವಾದ ರಾಮನ ಪತ್ನಿಯಾಗಿ ರಾವಣನ ವಧೆಗೆ ಕಾರಣಳಾದಳು. ರಾವಣನು ಕೂಡ ಮರುಜನ್ಮ ಪಡೆದನು.

ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗಿದ್ದರೂ ಅವಳನ್ನು ಬಲಾತ್ಕರಿಸಲಾಗಲಿಲ್ಲ. ನಾನಾ ವಿಧವಾದ ಪ್ರಲೋಭನೆಗಳನ್ನೊಡ್ಡಿ ಅವಳನ್ನು ವಿವಾಹವಾಗಲು ಪ್ರಯತ್ನಿಸುತ್ತಾನೆ. ಇದಕ್ಕೆ ಒಂದು ಪ್ರಬಲವಾದ ಕಾರಣವಿದೆ, ಒಮ್ಮೆ ರಾವಣನು ದಿಗ್ವಿಜಯದಿಂದ ಹಿಂದಿರುಗುತ್ತಿದ್ದಾಗ ಕೈಲಾಸ ಪರ್ವತದ ಹತ್ತಿರ ಬೀಡುಬಿಟ್ಟಿದ್ದನು. ಆ ಸಂದರ್ಭದಲ್ಲಿ ಒಮ್ಮೆ ರಾವಣನು ಬೆಳದಿಂಗಳ ವಿಹಾರಕ್ಕೆ ಹೊರಟನು. ಆಗ ಮದನ ಬಾಣ ಪೀಡಿತನಾಗಿದ್ದ ಅವನ ಕಣ್ಣಿಗೆ ಅಪ್ಸರೆ ಸ್ತ್ರೀಯಾದ ರಂಭೆಯು ಕಣ್ಣಿಗೆ ಬಿದ್ದಳು. ಅವಳ ಕೈ ಹಿಡಿದೆಳೆದಾಗ ಅವಳು ತಾನು ರಾವಣನ ಅಣ್ಣ ವೈಶ್ರವಣನ ಪುತ್ರ ನಲಕೂಬರನ ಪತ್ನಿಯಾದ್ದರಿಂದ ನಿನಗೆ ಸೊಸೆಯಾಗಬೇಕೆಂದು ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತಾಳೆ. ನೀನು ಅಪ್ಸರ ಸ್ತ್ರೀಯಾಗಿದ್ದೀಯ ಆದ್ದರಿಂದ ನೀನೇನೂ ಏಕಪತಿ ವ್ರತಸ್ಥಳಲ್ಲವೆಂದು ಅವಳನ್ನು ಬಲವಂತವಾಗಿ ಉಪಭೋಗಿಸಿದನು. ಲಜ್ಜಿತಳೂ, ಅಪಮಾನಿತಳೂ ಆದ ರಂಭೆಯು ತನ್ನ ಪತಿ ನಲಕೂಬರನಿಗೆ ನಡೆದ ವಿಷಯವನ್ನು ತಿಳಿಸಿದಳು. ಇದರಿಂದ ಕುಪಿತನಾದ ನಲಕೂಬರನು 'ಇನ್ನು ಮುಂದೆ ರಾವಣನು ಸಮ್ಮತಿಯಿಲ್ಲದೆ ಯಾವುದೇ ಹೆಣ್ಣನ್ನು ಭೋಗಿಸಿದರೂ ಕೂಡಲೇ ಮರಣ ಹೊಂದಲಿ' ಎಂದು ಶಾಪವಿತ್ತನು. ಈ ವಿಚಾರವನ್ನು ತಿಳಿದ ರಾವಣನು ಸ್ತ್ರೀಯರನ್ನು ಬಲಾತ್ಕಾರಗೊಳಿಸುವ ತನ್ನ ದುಷ್ಟತನವನ್ನು ನಿಲ್ಲಿಸಲೇಬೇಕಾಯಿತು. ಹಾಗೆಯೇ ನಡೆದನು ಕೂಡ. ಪಾಪಭೀತಿಯಲ್ಲ ಮರಣಭೀತಿ! ಇದು ಸೀತೆಯ ಪಾಲಿಗೆ ವರವಾದರೂ ರಾವಣನನ್ನು ಮರಣದಿಂದ ತಪ್ಪಿಸಲಾಗಲಿಲ್ಲ!

ಸೀತಾ ಜನನದ ಹಿನ್ನಲೆಯಾಗಿ ಈ ವೃತ್ತಾಂತವಿದೆ.[೭] ವೇದವತಿ ಎಂಬುವವಳು ಕುಶಧ್ವಜನ ಮಗಳು, ಬೃಹಸ್ಪತಿಯ ಮೊಮ್ಮಗಳು. ಶಂಖನೆಂಬ ದೈತ್ಯನು ವೇದವತಿಯನ್ನು ತನಗೆ ವಿವಾಹ ಮಾಡಿಕೊಡಬೇಕೆಂದು ಕುಶಧ್ವಜದೊಡನೆ ಕೇಳಿದನು. ಶ್ರೀಮನ್ನಾರಾಯಣನಿಗಲ್ಲದೆ ಬೇರೆಯವರಿಗೆ ಈಕೆಯನ್ನು ವಿವಾಹ ಮಾಡಿಕೊಡಲಾರೆನೆಂದು ಆತ ಉತ್ತರಿಸಿದ. ಇದರಿಂದ ಕುಪಿತನಾದ ಶಂಖನು ಯುದ್ಧಮಾಡಿ ಕುಶಧ್ವಜನನ್ನು ಕೊಂದನು. ಇದರಿಂದ ದುಃಖಿತಳಾದ ವೇದವತಿಯು ಕಾಡಿಗೆ ಹೋಗಿ ಶ್ರೀಮನ್ನಾರಾಯಣನನ್ನು ಕುರಿತು ತಪಸ್ಸು ಮಾಡುತ್ತಿದ್ದಳು. ದಿಗ್ವಿಜಯಕ್ಕೆ ಹೋಗಿದ್ದ ರಾವಣನು ಈಕೆಯನ್ನು ಕಂಡು ಬಲಾತ್ಕರಿಸಹೋದನು. ವೇದವತಿಯು ಕೋಪಗೊಂಡು 'ಇನ್ನೊಂದು ಜನ್ಮದಲ್ಲಿ ನಾನಾಗಿಯೇ ಲಂಕೆಗೆ ಬಂದು ನಿನ್ನನ್ನು ನಾಶಮಾಡುವೆನೆಂದು' ಹೇಳಿ ಅಗ್ನಿ ಪ್ರವೇಶ ಮಾಡಿದಳು. ಇವಳೇ ಮುಂದೆ ಸೀತಾದೇವಿಯಾಗಿ ಜನಿಸಿದಳು.

ದೇವೀಭಾಗವತದಲ್ಲಿ ಸೀತೆಯು ಲಂಕೆಯ ಸರೋವರವೊಂದರ ಕಮಲದಲ್ಲಿ ಜನಿಸಿದಳು. ಇದೊಂದು ಉತ್ಪಾತಸೂಚಕವೆಂದು ಜೋಯಿಸರು ಹೇಳುತ್ತಾರೆ. ರಾವಣನು ಸೀತೆಯನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಸಮುದ್ರದಲ್ಲಿ ತೇಲಿಬಿಟ್ಟನೆಂದು ಹೇಳಿದೆ.

ಪದ್ಮಾಕ್ಷನೆಂಬ ಒಬ್ಬ ಅರಸನು ಲಕ್ಷ್ಮಿಯನ್ನು ತನ್ನ ಮಗಳಾಗಿ ಪಡೆಯಬೇಕೆಂದು ಆಕೆಯನ್ನು ಕುರಿತು ತಪಸ್ಸು ಮಾಡಿದನು. ಪ್ರತ್ಯಕ್ಷಳಾದ ಲಕ್ಷ್ಮಿಯು ಪದ್ಮಾಕ್ಷನ ಬೇಡಿಕೆಯನ್ನು ಕೇಳಿ ಇದಕ್ಕೆ ನಾರಾಯಣನ ಒಪ್ಪಿಗೆಯನ್ನು ಪಡೆಯಬೇಕೆಂದು ತಿಳಿಸಿ ಅದೃಶ್ಯಳಾದಳು. ಅದರಂತೆಯೇ ಪದ್ಮಾಕ್ಷನು ನಾರಾಯಣನನ್ನು ಕುರಿತು ತಪಸ್ಸು ಮಾಡಿದನು. ಪ್ರತ್ಯಕ್ಷನಾದ ನಾರಯಣನು ಪದ್ಮಾಕ್ಷನ ಕೋರಿಕೆಯನ್ನು ಮನ್ನಿಸಿ ಒಂದು ಮಾದಳದ ಫಲವನ್ನು ನೀಡಿದನು. ಆ ಮಾದಳದ ಹಣ್ಣಿನಲ್ಲಿ ಒಂದು ಹೆಣ್ಣುಮಗುವಿತ್ತು. ಪದ್ಮಾಕ್ಷನು ಆಕೆಯನ್ನು ನೀಲಮೇಘಶ್ಯಾಮನಾದ ರಾಜನಿಗೆ ಮಾತ್ರ ವಿವಾಹಮಾಡಿಕೊಡುತ್ತೇನೆಂದು ಸಾರಿದ್ದನು. ಆ ವರ್ಣದ ಅರಸರು ಯಾರೂ ಇಲ್ಲದ ಕಾರಣ ರಾಜಕುಮಾರಿಯು ತಮಗಾರಿಗೂ ಒಲಿಯುವ ಸಂಭವವಿಲ್ಲವೆಂದು ಅರಸರೆಲ್ಲ ಪದ್ಮಾಕ್ಷನ ಮೇಲೆ ಯುದ್ಧಕ್ಕೆ ಬಂದರು. ಪದ್ಮಾಕ್ಷನ ಸೈನ್ಯ, ನಗರ ಮತ್ತು ಆತನನ್ನೂ ನಾಶಮಾಡಿಬಿಟ್ಟರು. ರಾಜಕುಮಾರಿಯು ಯಜ್ಞಕುಂಡದಲ್ಲಿ ಅದೃಶ್ಯಳಾದಳು.[೮]

ಒಮ್ಮೆ ಮಹಾಲಕ್ಷ್ಮಿಯು ಪದ್ಮಾಕ್ಷನ ಯಜ್ಞಕುಂಡದ ಬಳಿ ಕುಳಿತಿದ್ದಾಗ ಪುಷ್ಪಕವಿಮಾನದಲ್ಲಿ ಬರುತ್ತಿದ್ದ ರಾವಣನು ಈಕೆಯನ್ನು ಕಂಡು ಮೋಹಿತನಾದನು. ಹತ್ತಿರ ಬರುತ್ತಿದ್ದಂತೆ ಲಕ್ಷ್ಮಿಯು ಯಜ್ಞಕುಂಡಕ್ಕೆ ಹಾರಿಕೊಂಡು ಅದೃಶ್ಯಳಾದಳು. ರಾವಣನು ಮೋಹವನ್ನು ಕಳೆದುಕೊಳ್ಳದೆ ಯಜ್ಞಕುಂಡದಲ್ಲಿ ಹುಡುಕಿದನು. ಆಗ ಅವನಿಗೆ ಐದು ರತ್ನಗಳು ಮಾತ್ರ ದೊರಕಿತು. ರಾವಣನು ಅದನ್ನು ಒಯ್ದು ಪೆಟ್ಟಿಗೆಯಲ್ಲಿಟ್ಟು ದೇವಾಲಯದಲ್ಲಿಟ್ಟನು. ನಂತರ ಮಂಡೋದರಿಯೊಂದಿಗೆ ಆ ಪೆಟ್ಟಿಗೆಯನ್ನು ತೆರೆದು ನೋಡಲು ಒಬ್ಬ ಸ್ತ್ರೀಯಿದ್ದಳು.[೯] ಅದು ಹಿಂದೆ ಅನೇಕ ರಾಜರ ಮರಣಕ್ಕೆ ಕಾರಣವಾದುದರಿಂದ ಅದನ್ನು ದೂರ ಬಿಟ್ಟು ಬರಬೇಕೆನ್ನುವಾಗ, ಮಂಡೋದರಿಯು ಅದನ್ನು ನೆಲದಲ್ಲಿ ಹೂಳಿ ಬನ್ನಿರೆಂದು ತಿಳಿಸಿದಳು. ರಾವಣನು ಪುಷ್ಪಕವಿಮಾನದಲ್ಲಿ ಆ ಕನ್ಯೆಯನ್ನು ಕರೆದೊಯ್ಯುತ್ತಿರುವಾಗ ಆ ಕನ್ಯೆಯು ಹೀಗೆಂದಳು; 'ರಾವಣನೇ ನಾನು ಈಗ ಹೋಗುವೆನೆಂದು ಆನಂದಪಡಬೇಡ. ಮುಂದೆ ನಾನೇ ಇಲ್ಲಿಗೆ ಬಂದು ರಾಕ್ಷಸಕುಲವನ್ನು ಧ್ವಂಸಗೊಳಿಸಿ ನಿನ್ನ ರುಂಡವನ್ನು ಚಂಡಾಡುವೆನೆಂದಳು. ಇನ್ನೊಂದು ಸಲ ಬಂದು ನಿಕುಂಭನ ಮಗನಾದ ಪೌಂಡ್ರನನ್ನೂ, ಶತಮುಖನಾದ ರಾವಣನನ್ನೂ ನಾಶಮಾಡುವೆನು. ನಾಲ್ಕನೆಯ ಸಲ ಬಂದಾಗ ಕುಂಭಕರ್ಣನ ಮಗನಾದ ಮೂಲಕಾಸುರನನ್ನೂ ನಾಶಮಾಡುವೆ'ನೆಂದು ತಿಳಿಸಿದಳು. ಇದನ್ನು ಕೇಳಿ ಕೋಪಗೊಂಡ ರಾವಣನು ಅವಳ ಶಿರಚ್ಛೇದನ ಮಾಡಲು ಕತ್ತಿಯನ್ನು ಹಿರಿದನು. ಅಲ್ಲಿಯೇ ಇದ್ದ ಮಂತ್ರಿಗಳು ರಾವಣನನ್ನು ಸಮಾಧಾನಪಡಿಸಿ ಆ ಪೆಟ್ಟಿಗೆಯನ್ನು ಮಿಥಿಲೆಗೆ ತಂದು ಅದನ್ನು ಭೂಮಿಯಲ್ಲಿ ಹುಗಿದಿಟ್ಟು ಲಂಕೆಗೆ ಹಿಂದಿರುಗಿದರು.[೧೦]

ಹಿಂದೆಯೇ ತಿಳಿಸಿದಂತೆ ರಾವಣನು ಜೋಯಿಸರ ಸೂಚನೆಯಂತೆ ಉತ್ಪಾಸೂಚಕವಾದ ಮಗುವನ್ನು ಪೆಟ್ಟಿಗೆಯನ್ನು ನೀರಿನಲ್ಲಿ ತೇಲಿಬಿಟ್ಟನಷ್ಟೆ. ಅದು ತೇಲುತ್ತ ತೇಲುತ್ತ ಜನಕರಾಜನ ಕೈ ಸೇರಿತು. ಆತ ಸಂತಸದಿಂದ ಆಕೆಯನ್ನು ಮಗಳೆಂದು ಭಾವಿಸಿ ರಕ್ಷಿಸಿ ಸಾಕಿದನು. ಈಕೆಯೆ ಸೀತೆ.[೧೧] ಖರದೂಷಣರ ಸಂಹಾರವಾದ ನಂತರ ರಾಮನು ಸೀತೆಗೆ ಹೇಳುತ್ತಾನೆ; 'ನಿನಗೆ ಮುಂದೆ ಬಹಳ ಕಷ್ಟ ಒದಗುವ ಯೋಗವಿದೆ. ಆದ್ದರಿಂದ ಸಾತ್ವಿಕ ರೂಪದಿಂದ ನನ್ನ ತೊಡೆಯ ಮೇಲೂ, ರಾಜ ಸರೂಪದಿಂದ ಅಗ್ನಿಯಲ್ಲೂ ತಾಮಸ ರೂಪದಿಂದ ನಮ್ಮ ಆಶ್ರಮದಲ್ಲಿರು' ಎಂದು ಹೇಳುತ್ತಾನೆ. ಅದರಂತೆಯೇ ಸೀತೆಯು ಈ ಮೂರು ರೂಪಗಳನ್ನು ಧರಿಸಿದಳು.[೧೨]

ಜನಕನು ಸಂತಾನವಾಗಬೇಕೆಂಬ ಅಭಿಲಾಷೆಯಿಂದ ಯಜ್ಞ ಮಾಡಲು ನಿಶ್ಚಯಿಸಿ ಭೂಮಿಯನ್ನು ನೇಗಿಲಿನಿಂದ ಉಳುತ್ತಿರುವಾಗ ನೇಗಿಲಿನ ಗೆರೆಯಿಂದ ಹುಟ್ಟಿದವಳೇ ಸೀತೆ. ಸೀತೆಯನ್ನು ವಿವಾಹವಾಗಬಯಸುವವನು ಶಿವಧನುಸ್ಸಿಗೆ ಹೆದೆಯೇರಿಸಬೇಕೆಂಬ ಪಣವಿಟ್ಟಿದ್ದನು. ಆ ಪಣವನ್ನು ಗೆದ್ದು, ಸೀತೆಯನ್ನು ರಾಮನು ವಿವಾಹವಾದನು.[೧೩] ರಾಮನು ಅರಣ್ಯಕ್ಕೆ ಹೊರಡುವನೆಂಬ ಸುದ್ದಿ ಕೇಳಿ ಸೀತೆಯು ರಾಮನೊಡನೆ ತಾನೂ ವನವಾಸಕ್ಕೆ ಹೋಗಲು ಅನುಮತಿ ಪಡೆದಳು. ಸೀತಾರಾಮರು ಚಿತ್ರಕೂಟದಲ್ಲಿದ್ದಾಗ, ಕೌಸಲ್ಯೆ ಮುಂತಾದವರು ಅವರನ್ನು ನೋಡಲು ಬಂದಾಗ ಬಹಳ ವ್ಯಸನಗೊಂಡರು. ಇವರು ವನವಾಸ ಮಾಡುತ್ತಿದ್ದಾಗ ಸೀತೆಯನ್ನು ರಾವಣನು ಅಪಹರಿಸಿಕೊಂಡು ಹೋದನು.[೧೪] ರಾಮನು ಮಾರೀಚನ ಮಾಯಾಮೃಗವನ್ನು ಕಂಡು ರಾವಣನ ತಂತ್ರವೆಂದು ತಿಳಿದನು. ನಂತರ ಸೀತೆಗೆ 'ನೀನು ನಿನ್ನ ಪ್ರತಿಬಿಂಬವನ್ನು ಇಲ್ಲಿರಿಸಿ ಒಂದು ವರ್ಷಕಾಲ ಅಗ್ನಿಯಲ್ಲಿ ವಾಸ ಮಾಡು. ರಾವಣ ವಧೆಯ ನಂತರ ನಿನ್ನನ್ನು ಸ್ವೀಕರಿಸುವೆನು' ಎಂದು ತಿಳಿಸಿದನು.[೧೫] ರಾವಣನು ಸೀತೆಯನ್ನು ಅಪಹರಿಸಿ ಒಯ್ಯುತ್ತಿರುವಾಗ ತಾನಿರುವ ಸ್ಥಳವು ರಾಮನಿಗೆ ತಿಳಿಸಬೇಕೆಂಬ ಉದ್ದೇಶದಿಂದ ತನ್ನ ಸೆರಗನ್ನು ಹರಿದು ಆಭರಣಗಳನ್ನು ಅದರಲ್ಲಿ ಕಟ್ಟಿ ಋಷ್ಯಮೂಕ ಪರ್ವತದಲ್ಲಿ ಕುಳಿತಿದ್ದ ಸುಗ್ರೀವ–ಹನುಮಂತರ ಮಧ್ಯೆ ಎಸೆದಳು.

ಸೀತೆ ಲಂಕೆಯಲ್ಲಿದ್ದಾಗ ಬ್ರಹ್ಮನ ಆದೇಶದಂತೆ ಇಂದ್ರನು ಆಕೆಗೆ ದಿವ್ಯವಾದ ಪಾಯಸವನ್ನು ತಂದುಕೊಟ್ಟನು. ಅದನ್ನು ತಿನ್ನುವುದರಿಂದ ಸೀತೆಗೆ ಒಂದು ವರ್ಷದವರೆಗೆ ಹಸಿವು, ನೀರಡಿಕೆ, ನಿದ್ರೆಗಳಿಲ್ಲದಿದ್ದರೂ ಶರೀರಕಾಂತಿಯು ಕುಗ್ಗದೆ. ದಿವ್ಯ ಸೌಂದರ್ಯವತಿಯಾಗಿಯೇ ಉಳಿಯುವಳೆಂದು ತಿಳಿಸಿದನು.[೧೬] ಸೀತೆಗೆ ಬಹುದಿನ ಆಹಾರವಿಲ್ಲದಿದ್ದರೆ ಆಕೆ ಬಹಳ ಕೃಶಳಾಗಿ ಸಾಯಬಹುದೆಂದು ಇಂದ್ರನು ದಿವ್ಯ ಹವಿಸ್ಸನ್ನು ನಿದ್ರಾದೇವಿಯ ವಶಕ್ಕೆ ನೀಡಿ, ಆಕೆಯನ್ನು ಒಪ್ಪಿಸಿ ಕರೆತಂದು ಸೀತೆಗೆ ಕಾವಲಿದ್ದ ರಾಕ್ಷಸಿಯರಿಗೆ ನಿದ್ರೆ ಬರುವಂತೆ ಮಾಡಿದನು ಸೀತೆಗೆ ವಂದಿಸಿ, ರಾಮ ಲಕ್ಷ್ಮಣರ ಕ್ಷೇಮ ಸಮಾಚಾರವನ್ನು ಸೀತೆಗೆ ತಿಳಿಸಿ ತಾನು ಇಂದ್ರನೆಂಬುದನ್ನು ದೃಢಗೊಳಿಸಿ ಆಕೆಗೆ ಪಾಯಸವನ್ನು ತಿನ್ನಿಸಿದನು. ಮುಂದೆ ಸುಗ್ರೀವನು ಸೀತೆಯನ್ನು ಹುಡುಕಲು ವಾನರಸೈನ್ಯವನ್ನು ಕಳುಹಿಸಿದನು.[೧೭] ಹನುಮಂತನು ಲಂಕೆಯಲ್ಲಿ

ಸೀತೆಯನ್ನು ಕಂಡು ರಾಮನು ನೀಡಿದ ಮುದ್ರಿಕೆಯುಂಗುರವನ್ನು ಸೀತೆಗೆ ನೀಡಿದನು. ಸೀತೆಯಿಂದ ಚೂಡಾಮಣಿ ಉಂಗುರವನ್ನು ಪಡೆದನು, ಲಂಕೆಯನ್ನು ಸುಟ್ಟು, ಮತ್ತೆ ಸಮುದ್ರವನ್ನು ದಾಟಿ ರಾಮನ ಬಳಿಗೆ ಬಂದನು. ಸೀತೆಯು ಲಂಕೆಯಲ್ಲಿರುವ ವಿಷಯವನ್ನು ತಿಳಿಸಿದನು. ಮುಂದೆ ರಾಮನು ರಾವಣನನ್ನು ಸಂಹರಿಸಿ ಸೀತೆಯನ್ನು ಅಗ್ನಿಪರೀಕ್ಷೆಯ ಮೂಲಕ ಪರೀಕ್ಷಿಸಿ ಆಕೆಯನ್ನು ಸ್ವೀಕರಿಸಿದನು.[೧೮]

ಸೀತೆಯ ವೃತಾಂತವನ್ನು ವಿವಿಧ ರಾಮಾಯಣಗಳಲ್ಲಿ ವಿವಿಧ ಬಗೆಯಲ್ಲಿ ಹೇಳಲಾಗಿದೆ. ನೇಗಿಲಿನಿಂದ ಉಳುವಾಗ ಸಿಕ್ಕ ಘಟನೆಯನ್ನು ಬಹಳಷ್ಟು ರಾಮಾಯಣಗಳು ಹೇಳುತ್ತವೆ. ಆದರೂ ಸೀತೆಯ ತಾಯಿ ಸುನಯನಾದೇವಿಯ ಉಲ್ಲೇಖ ಒಂದೆರಡು ರಾಮಾಯಣಗಳಲ್ಲಿ ಮಾತ್ರ ಬರುತ್ತದೆ.

ಸೀತೆಯು ಜನಕನ ಮಗಳೆಂದೂ ವಾಲ್ಮೀಕಿ ರಾಮಾಯಣವೂ, ಹೇಳುತ್ತದೆ. ಜೈನರಾಮಾಯಣಗಳಲ್ಲಿ ಅತಿ ಪ್ರಾಚೀನವಾದ ವಿಮಲಸೂರಿಯ 'ಪಉಮ ಚರಿಯ' ದಲ್ಲಿ ಜನಕನ ಹೆಂಡತಿಯ ಹೆಸರು ವಿದೇಹೆ ಎಂದು ಹೇಳುತ್ತದೆ. ಇವರಿಗೆ ಹುಟ್ಟಿದ ಸೀತೆ ಮತ್ತು ಪ್ರಭಾಮಂಡಲರು ಅವಳಿ ಮಕ್ಕಳೆಂದು ತಿಳಿಸಿದೆ. ವಾಲ್ಮೀಕಿ ರಾಮಾಯಣದಲ್ಲಿ ಸೀತೆಗೆ ಯಾವ ಸಹೋದರರೂ ಇಲ್ಲ. ಆದರೆ ವಿಷ್ಣುಪುರಾಣ, ಬ್ರಹ್ಮಾಂಡ ಪುರಾಣ ಮತ್ತು ವಾಯು ಪುರಾಣಗಳಲ್ಲಿ ಸೀತೆಯ ಸಹೋದರನ ಹೆಸರು ಭಾನುಮಂತನೆಂದು ಹೇಳಿದೆ.

ಸೀತೆಯನ್ನು ಭೂಮಿಜೆಯೆಂದು ವಾಲ್ಮೀಕಿ ರಾಮಾಯಣದಲ್ಲಿ ಹೇಳಲಾಗಿದೆ. ಜನಕನು ಯಜ್ಞಕ್ಕಾಗಿ ಭೂಮಿಯನ್ನು ಉಳುತ್ತಿರುವಾಗ ನೇಗಿಲಿನ ತುದಿಗೆ ಒಂದು ಹೆಣ್ಣು ಮಗು ಸಿಕ್ಕಿತು. ಅದಕ್ಕೆ ಸೀತೆಯೆಂದು ಹೆಸರಿಟ್ಟರು. ವಿಷ್ಣುಪುರಾಣದಲ್ಲಿ ಮತ್ತು ಪದ್ಮಪುರಾಣದಲ್ಲಿ ಸಂತಾನಕ್ಕಾಗಿ ಯಜ್ಞ ಮಾಡಲಿದ್ದ ಜನಕನಿಗೆ ಸೀತೆ ದೊರಕಿದಳೆಂದು ಹೇಳಿದೆ. ಸೀತಾ ಎಂಬ ಹೆಸರಿನ ನೇಗಿಲ ರೇಖೆಯ ಅಧಿದೇವತೆಯ ಪೂಜೆ ಋಗ್ವೇದದಲ್ಲಿದೆ. ವೇದಗಳ ಕಾಲದಲ್ಲೇ ಸೀತಾ ಎಂದು ಹೆಣ್ಣು ಮಕ್ಕಳಿಗೆ ಹೆಸರಿಡುತ್ತಿದ್ದರು.[೧೯] ಇಲ್ಲಿ ಸೀತಾ ಮತ್ತು ಶ್ರದ್ಧಾ ಇಬ್ಬರು ಪ್ರಜಾಪತಿಯ ಪುತ್ರಿಯರು. ಗೌಡೀಯ ಮತ್ತು ಕಾಶ್ಮೀರಿ ಪಾಠಾಂತರಗಳಲ್ಲಿ ಜನಕನು ದಿವ್ಯ ಅಪ್ಸರೆ ಮೇನಕೆಯನ್ನು ಮೋಹಿಸಿದ್ದರಿಂದ ಸೀತೆಯು ನೆಲದಿಂದ ಹುಟ್ಟಿದಳೆಂದು ಹೇಳಲಾಗಿದೆ, ಕೃತ್ತಿವಾಸನ ರಾಮಾಯಣದಲ್ಲಿ ಮೇನಕೆಯ ಬದಲು ಊರ್ವಶಿ ಎಂದು ಹೇಳಲಾಗಿದೆ. ರಾಮಾಯಣ ಮಂಜರಿ[೨೦]ಯಲ್ಲೂ ಈ ಕಥೆ ಬಂದಿದೆ.

ಸೀತೆಯು ರಾವಣನ ಮಗಳೆಂದು ಭಾರತ, ಟಿಬೆಟ್, ಪೂರ್ವ ತುರ್ಕಿಸ್ಥಾನದ ಖೋಟಾನ್, ಇಂಡೋನೇಷ್ಯಾ ಮತ್ತು ಇಂಡೋ ಚೀನಾದ ರಾಮಕಥಾ ಸಾಹಿತ್ಯಗಳಲ್ಲಿ ದಾಖಲೆಗಳು ದೊರೆತಿವೆ. ದೇವೀಭಾಗವತದಲ್ಲಿ, ಪುರಾಣದಲ್ಲಿಯೂ ಇದೇ ಕಥೆ ಇದೆ. ಕಾಶ್ಮೀರೀ ರಾಮಾಯಣ ಕಥೆಯಲ್ಲಿ ರಾವಣನಿಲ್ಲದ ಸಮಯದಲ್ಲಿ ಗರ್ಭಿಣಿಯಾದ ಮಂಡೋದರಿಯು ಒಂದು ಹೆಣ್ಣುಮಗುವನ್ನು ಹೆರುತ್ತಾಳೆ. ಜೋಯಿಸರು ಈ ಮಗುವಿನಿಂದ ರಾವಣನು ನಾಶವಾಗುತ್ತಾನೆಂದು ಹೇಳುತ್ತಾರೆ. ಆಗ ಮಂಡೋದರಿಯು

ಮಗುವಿನ ಕುತ್ತಿಗೆಗೆ ಕಲ್ಲು ಕಟ್ಟಿ ನದಿಯಲ್ಲಿ ತೇಲಿಬಿಡುತ್ತಾಳೆ. ಅದು ಜನಕನಿಗೆ ದೊರಕುತ್ತದೆ. ಕ್ಷೇಮೇಂದ್ರನ ದಶಾವತಾರ ಚರಿತೆಯಲ್ಲಿ ಸೀತೆಯನ್ನು ಪದ್ಮೋದ್ಭವೆಯೆಂದು ಹೇಳಲಾಗಿದೆ.

ಅದ್ಭುತ ರಾಮಾಯಣದಲ್ಲಿ ಸೀತೆಯನ್ನು ಋಷಿರಕ್ತಸಂಭವೆಯೆಂದು ಹೇಳಿದೆ. ಆನಂದ ರಾಮಾಯಣದಲ್ಲಿ ಸೀತೆಯನ್ನು ಅಗ್ನಿಸಂಭವೆಯಾಗಿ ಬಿಂಬಿಸಲಾಗಿದೆ. ಸೀತೆಯು ದಶರಥನ ಮಗಳೆಂದು ಬೌದ್ಧ ದಶರಥ ಜಾತಕದಲ್ಲಿದೆ. ಇದರಲ್ಲಿ ರಾಮ, ಲಕ್ಷ್ಮಣ, ಸೀತೆ ಇವರೆಲ್ಲರೂ ದಶರಥನ ಮಕ್ಕಳೆಂದು ಹೇಳಿದೆ. ರಾಮನು ಹನ್ನೆರಡು ವರ್ಷ ವನವಾಸ ಮುಗಿದ ಮೇಲೆ ಸೀತೆಯನ್ನು ಮದುವೆಯಾದನೆಂದು ತಿಳಿದುಬರುತ್ತದೆ. ಜಾವಾದ ರಾಮಾಯಣ ಕಥೆಯಲ್ಲಿ ಮಂಡೋದರಿಯು ದಶರಥನ ಪತ್ನಿಯಾಗಿದ್ದಾಳೆ. ಈಕೆಯನ್ನು ರಾವಣನು ಪ್ರಾರ್ಥಿಸಿ ಪಡೆದನು. ನಂತರ ದಶರಥನು ಮಂಡೋದರಿಯ ಶಯ್ಯಾಗೃಹದಲ್ಲಿ ಒಂದು ರಾತ್ರಿಯಿದ್ದು ಹೊರಟುಹೋಗುತ್ತಾನೆ. ಮಂಡೋದರಿಯ ಗರ್ಭಿಣಿಯಾಗಿ ಬಂದು ಹೆಣ್ಣುಮಗುವನ್ನು ಹೆರುತ್ತಾಳೆ. ಇವಳೇ ಸೀತೆ.

ರಾಮನು ಜನಕನೊಂದಿಗೆ ಒಮ್ಮೆ ಈ ಮಾತು ಹೇಳಿದನು; 'ನಾನು ಸೀತೆಯನ್ನು ಬಿಟ್ಟು ಬಂದು ಕ್ಷಣವಾದರೂ ಇರಲು ಸಾಧ್ಯವಿಲ್ಲ. ಶಾಸ್ತ್ರರೀತ್ಯಾ ಪತ್ನಿಯು ಗರ್ಭಿಣಿಯಾಗಿ ಐದು ತಿಂಗಳಾದ ನಂತರ ಇಬ್ಬರೂ ಬೇರೆ ಬೇರೆ ಕಡೆ ಮಲಗಬೇಕು. ಶಾಸ್ತ್ರವಚನವನ್ನು ಪಾಲಿಸಬೇಕಾದುದು ನನ್ನ ಕರ್ತವ್ಯ. ಅಯೋಧ್ಯೆಯಲ್ಲಿಯೇ ಇದ್ದರೆ ಶಾಸ್ತ್ರವಚನವನ್ನು ಮೀರಲೇಬೇಕಾಗುತ್ತದೆ. ಅದಕ್ಕಾಗಿ ಸೀತೆಯನ್ನು ವಾಲ್ಮೀಕಿಯ ಆಶ್ರಮದಲ್ಲಿ ಬಿಟ್ಟು, ಹೆರಿಗೆಯ ನಂತರವೂ ಐದು ವರುಷ ಅಲ್ಲಿಯೇ ಬಿಟ್ಟಿರುವೆ'ನೆಂದು ತಿಳಿಸುತ್ತಾನೆ. 'ಅವಳನ್ನು ಕಳುಹಿಸುವ ಸಲುವಾಗಿ ಲೋಕಾಪವಾದವನ್ನು ಅವಲಂಬಿಸುವೆನು' ಎನ್ನುತ್ತಾನೆ. ಸೀತೆಯ ಹೆರಿಗೆಯ ಕಾಲದಲ್ಲಿ ಕುಟುಂಬ ಸಮೇತನಾಗಿ ಅಲ್ಲಿರಬೇಕೆಂದು ಜನಕನಲ್ಲಿ ವಿನಂತಿಸುತ್ತಾನೆ. ಇದಕ್ಕೆ ಜನಕನು ಸಂತೋಷದಿಂದ ವಾಲ್ಮೀಕಿಯ ಆಶ್ರಮಕ್ಕೆ ಹೊರಟನು.

ಈ ವಿಚಾರಕ್ಕೆ ಹೊಂದಿಕೆಯಾಗುವಂತೆ ಕೌಸಲ್ಯೆಯು ರಾಮನೊಡನೆ ಸೀತೆಗೆ ಸೀಮೋಲ್ಲಂಘನ ಮಾಡಿಸಬೇಕೆಂದು ಹೇಳಿದಳು. ರಾಮನು ಜನಕನಿಗೆ ತಿಳಿಸಿದ ವಿಚಾರವನ್ನು ತಾಯಿಗೂ ತಿಳಿಸಿದನು. ಸೀತೆಗೂ ಈ ವಿಷಯವನ್ನು ತಿಳಿಸಿದನು ಮತ್ತು ಐದು ವರ್ಷಗಳ ನಂತರ ಪುನಃ ಅಯೋಧ್ಯೆಗೆ ಕರೆಸಿಕೊಳ್ಳುವುದಾಗಿಯೂ ಹೇಳಿದನು. ಸೀತೆಗೆ ಕುಶನೆಂಬ ಪರಾಕ್ರಮಿಯಾದ ಪುತ್ರನು ಜನಿಸುವನೆಂದೂ, ಮುನಿಯ ಪ್ರಭಾವದಿಂದ, ಲವನೆಂಬ ಇನ್ನೊರ್ವ ಪುತ್ರನೂ ಜನಿಸುವನೆಂದು ತಿಳಿಸಿದನು. ಹಾಗೂ ಸೀತೆಯ ರಕ್ಷಣೆಗಾಗಿ ಜನಕ ಮತ್ತು ಸುಮೇಧೆಯರು ವಾಲ್ಮೀಕಿಯ ಆಶ್ರಮದಲ್ಲಿರುವುದಾಗಿ ಹೇಳಿದನು. ಸೀತೆಗೆ ಸಾತ್ವಿಕ ರೂಪದಿಂದ ತನ್ನ ಪರ್ಯಂಕದಲ್ಲಿ, ವಾಸಿಸಲು ಮತ್ತು ರಾಜಸ, ತಾಮಸ ರೂಪದಿಂದ ವಾಲ್ಮೀಕಿಯ ಆಶ್ರಮಕ್ಕೆ ಹೊರಡಲು ಹೇಳಿದನು. ಲೋಕ ಶಿಕ್ಷಣದ ದೃಷ್ಟಿಯಿಂದ ಸೀತೆಯು ಕೂಡ ಇದಕ್ಕೆ ಒಪ್ಪಿದಳು. ಮುಂದೆ ಅಗಸನೊಬ್ಬ 'ಏಳು ತಿಂಗಳವರೆಗೆ ರಾವಣನ ಅರಮನೆಯಲ್ಲಿ ವಾಸಮಾಡಿದ ತರುಣಿಯನು

ರಾಮನು ಸ್ವೀಕರಿಸಿದನು. ನೀನು ನನ್ನ ಮನೆಯ ಬಳಿಗೂ ಬರಬಾರದು' ಎಂದು ತನ್ನ ಪತ್ನಿಗೆ ಹೇಳುತ್ತಿದ್ದ ಅಪವಾದದ ನುಡಿಗಳನ್ನು ವಿಜಯನೆಂಬ ಗೂಢಚಾರನು ತಿಳಿಸಲು ರಾಮನು ಸೀತೆಯನ್ನು ತ್ಯಜಿಸಲು ನಿರ್ಧಾರ ಮಾಡಿದನು.

ಒಂದು ದಿನ ಸೀತೆ ಕೈಕೇಯಿಯ ಮನೆಗೆ ಬಂದಿದ್ದಳು.[೨೧] ಆಗ ಕೈಕೇಯಿಯು ರಾವಣನನ್ನು ನೀನು ನೋಡಿರುವೆಯಲ್ಲ ಆತನ ಚಿತ್ರವನ್ನು ಗೋಡೆಯ ಮೇಲೆ ಬರೆದು ತೋರಿಸೆಂದು ಹೇಳಿದಳು. ಸೀತೆಯು 'ಕಪಟ ಸನ್ಯಾಸಿಯ ವೇಷದಿಂದ ಬಂದ ರಾವಣನ ಪಾದಗಳ ಹೆಬ್ಬೆಟ್ಟನ್ನು ಮಾತ್ರ ನೋಡಿರುವುದಾಗಿ' ಹೇಳಿದಳು. ಕೈಕೇಯಿಯು ಅದನ್ನೇ ಬರೆದು ತೋರಿಸೆನ್ನಲು ಸೀತೆಯು ಗೋಡೆಯ ಮೇಲೆ ಬರೆದು ತನ್ನ ಅಂತಃಪುರಕ್ಕೆ ಹೋದಳು. ಕೈಕೇಯಿಯು ಬೆರಳುಗಳ ಚಿತ್ರದ ಆಧಾರದಿಂದ ರಾವಣನ ಪೂರ್ಣ ದೇಹದ ಚಿತ್ರವನ್ನು ಬಿಡಿಸಿದಳು. ಆ ಹೊತ್ತಿಗೆ ರಾಮನು ಅಲ್ಲಿಗೆ ಹೋದಾಗ ರಾವಣನ ಚಿತ್ರವನ್ನು ಸೀತೆಯು ಬಿಡಿಸಿದಳೆಂದು ರಾಮನಿಗೆ ಹೇಳಿದಳು. ಅದನ್ನು ಕೇಳಿ ರಾಮನು ಮಾರನೆಯ ದಿವಸವೇ ಸೀತೆಯನ್ನು ಕಾಡಿಗೆ ಕಳುಹಿಸಬೇಕೆಂದು ತೀರ್ಮಾನಿಸಿದನು.

ಅಂತಃಪುರದಲ್ಲಿ ಸೀತೆಯು ಕೈಕೇಯಿಯು ಹೇಳಿದಂತೆ ರಾವಣನ ಹೆಬ್ಬೆರಳನ್ನು ಮಾತ್ರ ಬಿಡಿಸಿ ಬಂದುದನ್ನು ಹೇಳಲು ಕೈಕೆಯ ಕೌಶಲ್ಯಕ್ಕೆ ರಾಮನು ಆಶ್ಚರ್ಯಪಟ್ಟನು. ಸೀತೆಯು ಶುಭಲಗ್ನದಲ್ಲಿ ಒಬ್ಬ ಬಾಲಕನನ್ನು ಹೆತ್ತಳು. ಆ ದಿನ ರಾತ್ರಿ ರಾಮನು ಪುಷ್ಪಕ ವಿಮಾನದಲ್ಲಿ ಕುಳಿತು ವಾಲ್ಮೀಕಿ ಆಶ್ರಮಕ್ಕೆ ಹೋಗಿದ್ದನು. ಆ ಬಾಲಕನಿಗೆ ಕುಶನೆಂದು ಹೆಸರಿಟ್ಟರು.

ವಾಲ್ಮೀಕಿಯು[೨೨] ಸೀತೆ ಮತ್ತು ಕುಶಲವರನ್ನು ರಾಮನಿಗೊಪ್ಪಿಸಲು ರಾಜಸಭೆಗೆ ಕರೆತಂದು, ಸೀತೆಯು ಭೂದೇವಿಯನ್ನು 'ನಾನು ತ್ರಿಕರಣಗಳಲ್ಲಿ ರಾಮನನ್ನಲ್ಲದೆ ಅನ್ಯರನ್ನು ಗಮನಿಸದೆ ಇದ್ದುದೇ ಸತ್ಯವಾದರೆ ನನ್ನನ್ನು ನಿನ್ನೊಳಗೇ ಸೇರಿಸಿಕೋ' ಎಂದು ಹೇಳಿದರು. ಆಗ ಭೂಮಿಯು ಇಬ್ಭಾಗವಾಗಿ ಒಂದು ಸಿಂಹಾಸನದೊಂದಿಗೆ ಭೂದೇವಿಯು ಕಾಣಿಸಿಕೊಂಡಳು. ಆಕೆ ಸೀತೆಯನ್ನು ಅಪ್ಪಿಕೊಂಡು ಭೂಮಿಯೊಳಗೆ ಅದೃಶ್ಯವಾಗಲು ಪ್ರಯತ್ನಿಸಿದಳು. ಆಗ ರಾಮನು ಭೂಮಿಯನ್ನು ಹೀರಲು ಮೌರ್ವಿಯನ್ನು ಬಿಗಿದುದನ್ನು ಕಂಡು ಭೀತಳಾದ ಭೂದೇವಿಯ ಸೀತೆಯನ್ನು ರಾಮನಿಗೆ ಒಪ್ಪಿಸಿ ಅದೃಶ್ಯಳಾದಳು.

ಸೀತೆಯ ತಾಯಿ ಸುಮೇಧ.[೨೩] ಸೀತೆಯು ಗರ್ಭಿಣಿಯಾಗಿರುವಾಗ ಉಪವನದಲ್ಲಿ ವಾಸಮಾಡುವ ಬಯಕೆಯನ್ನು ರಾಮನ ಮುಂದೆ ಹೇಳಿದಳು. ಮುಂದೆ ಅಯ್ಯೋಧ್ಯೆಗೆ ಬಂದಾಗ ಏಳನೆಯ ತಿಂಗಳಲ್ಲಿ ಸೀತೆಗೆ ಸಂಸ್ಕಾರ ಪೂರ್ವಕವಾಗಿ ಸೀಮಂತೋನ್ನಯನವನ್ನು ಮಾಡಲಾಯಿತು.

ಸೀತೆಯ ಹಸ್ತರೇಖೆಗಳನ್ನು ಕಂಡ ಜ್ಯೋತಿಷಿಯೊಬ್ಬರು ಸೀತೆಗೆ ಹದಿನಾಲ್ಕು ವರ್ಷಗಳ ವನವಾಸ ಯೋಗವಿದೆಯೆಂದು ಹೇಳಿದ್ದರು. ಅರಣ್ಯದ ಋಷಿಯೊಬ್ಬನು[೨೪] ಲಕ್ಷ್ಮಿಯನ್ನೇ ಮಗಳನ್ನಾಗಿ ಪಡೆಯಬೇಕೆಂದು ನೀರನ್ನು ಮಂತ್ರಿಸಿ ಕಲಶದಲ್ಲಿಟ್ಟಿದ್ದನು. ದಿಗ್ವಿಜಯಕ್ಕಾಗಿ ಬಂದಿದ್ದ ರಾವಣನು ಅದನ್ನು

ತೆಗೆದುಕೊಂಡು ಹೋಗಿ ಅದರಲ್ಲಿರುವುದು ವಿಷವೆಂದು ತಿಳಿಸಿ ಮಂಡೋದರಿಯ ಕೈಗಿತ್ತನು. ಮುಂದೆ ರಾವಣನು ಪರಸ್ತ್ರೀಯರಲ್ಲಿ ಆಸಕ್ತಿ ಹೊಂದುತ್ತಿರಲು, ನೊಂದ ಮಂಡೋದರಿಯು ಸಾಯಬೇಕೆಂದು ರಾವಣನು ವಿಷವೆಂದು ನೀಡಿದ್ದ ಮಂತ್ರಪೂತ ಜಲವನ್ನೇ ಕುಡಿದಳು. ಇದರಿಂದ ಸಾಯದ ಮಂಡೋದರಿಯು ವ್ಯತಿರಿಕ್ತವಾಗಿ ಗರ್ಭಿಣಿಯಾದಳು. ಇದರಿಂದ ಮಂಡೋದರಿಯ ಶೋಕವು ಹೆಚ್ಚಿ, ಪುಷ್ಪಕ ವಿಮಾನದಲ್ಲಿ ಕುಳಿತು ಮಿಥಿಲೆಯ ಬಳಿ ಬರುವಾಗ ಪ್ರಸವವಾಗಿ ಹೆಣ್ಣು ಮಗುವನ್ನು ಹೆತ್ತಳು. ಆ ಮಗುವನ್ನು ಭೂಮಿಯಲ್ಲಿ ಹೂತಿಟ್ಟು ಲಂಕೆಗೆ ಹಿಂದಿರುಗಿದಳು. ಆ ಮಗುವೇ ಜನಕನು ಚಿನ್ನದ ನೇಗಿಲಿಗೆ ಉಳುವಾಗ ದೊರೆತ ಸೀತೆಯಾಗಿದ್ದಾಳೆ.

ಸೀತೆಯ ಸ್ವಯಂವರದ[೨೫] ಮೊದಲು ಉದ್ಯಾನವನದಲ್ಲಿ ವಿಹಾರ ಮಾಡುತ್ತಿರುವಾಗ ಗಂಡು ಹೆಣ್ಣು ಗಿಳಿಗಳೆರಡು ಮರವೊಂದರ ಮೇಲೆ ಕುಳಿತು ರಾಮಾಯಣ ಕಥೆಯನ್ನು ಹೇಳುತ್ತಿದ್ದವು. ಸೀತೆಯು ತನ್ನ ಸಖಿಯರಿಂದ ಆ ಗಿಳಿಗಳನ್ನು ಹಿಡಿದು ತರಿಸಿ ಅವು ವಾಲ್ಮೀಕಿಯ ಆಶ್ರಮದ ಗಿಳಿಗಳೆಂದು ತಿಳಿಸಿದಾಗ ರಾಮನು ತನ್ನನ್ನು ವಿವಾಹವಾಗುವವರೆಗೆ ಬಿಡೆನೆಂದು ಹೇಳಿ ಕಡೆಗೆ ಗಂಡು ಗಿಳಿಯನ್ನು ಮಾತ್ರ ಬಿಟ್ಟಳು. ಆಗ ಗರ್ಭಿಣಿಯಾಗಿದ್ದ ಹೆಣ್ಣು ಗಿಳಿಯು ಕೋಪದಿಂದ 'ನೀನೂ ಗರ್ಭಿಣಿಯಾದಾಗ ಪತಿಯಿಂದ ಪರಿತ್ಯಕ್ತೆಯಾಗು' ಎಂದು ಹೇಳಿ ಪ್ರಾಣಬಿಟ್ಟಿತು. ಗಂಡುಗಿಳಿಯು 'ರಾಮನು ನಿನ್ನನ್ನು ತ್ಯಾಗಮಾಡಲಿ' ಎಂದು ಹೇಳಿ ಗಂಗೆಗೆ ಹಾರಿ ಪ್ರಾಣ ಬಿಟ್ಟಿತು. ಈ ಗಂಡುಗಿಳಿಯೇ ಕ್ರೋಧನನೆಂಬ ಅಗಸನಾಗಿ ಜನ್ಮವೆತ್ತಿತು.

ರಾಮನು[೨೬] ಶಿವಧನುಸ್ಸನ್ನೆತ್ತಿ ತನ್ನನ್ನು ವಿವಾಹವಾದರೆ ತಾನು ಹದಿನಾಲ್ಕು ವರ್ಷ ವನವಾಸ ಮಾಡುವೆನೆಂದು ಸೀತೆ ಹರಕೆ ಹೊತ್ತಿದ್ದಳು. ಹೀಗೆ ಸೀತೆಯ ಜನ್ಮ ವೃತ್ತಾಂತ ಹಲವಾರು ಬಗೆಗಳಲ್ಲಿ ದೊರಕುತ್ತದೆ.

ಜನಪದ ರಾಮಾಯಣಗಳಲ್ಲಿ ಸೀತೆಯ ಜನ್ಮ ವೃತ್ತಾಂತ ತುಂಬಾ ಭಿನ್ನವಾಗಿ ವ್ಯಕ್ತವಾಗಿದೆ. ಅವಧ ಪ್ರಾಂತ್ಯದ ಅವಧಿ ಭಾಷೆಯ ಅವಧ್ ರಾಮಾಯಣದಲ್ಲಿ 'ಸೀತೆ ರಾವಣಾತ್ಮಜೆ ಮತ್ತು ರಾವಣಕುಲ ನಾಶಕ್ಕಾಗಿಯೇ ಮಂಡೋದರಿಯ ಗರ್ಭದಲ್ಲಿ ಜನಿಸಿದವಳು. ಇವಳು ಕುಲನಾಶ ನಿಮಿತ್ತಕೆ'ಯಾಗುತ್ತಾಳೆ ಎಂಬ ಭವಿಷ್ಯದ ಕಾರಣದಿಂದ ನಾರದರ ಸಲಹೆಯಂತೆ ನವಜಾತ ಶಿಶುವನ್ನು ಒಂದು ಮಡಿಕೆಯಲ್ಲಿಟ್ಟು ಜನಕನ ರಾಜ್ಯದ ಹೊಲವೊಂದರಲ್ಲಿ ಆ ಮಡಕೆಯನ್ನು ಹೂಳಲಾಗುತ್ತದೆ.

ಜನಕನ ರಾಜ್ಯದಲ್ಲಿ ಅನಾವೃಷ್ಟಿಯ ಕಾರಣದಿಂದ ದುರ್ಭಿಕ್ಷಕಾಲ ಬಂದು ಪ್ರಜೆಗಳೆಲ್ಲರೂ ತೊಂದರೆಗೊಳಗಾಗಿರುತ್ತಾರೆ. ಜನಕರಾಜನ ಹೆಂಡತಿ ಸೋಧಯಿಲಾ ಮಧ್ಯರಾತ್ರಿಯಲ್ಲಿ ವಿವಸ್ತ್ರಳಾಗಿ ಹೊಲವನ್ನು ಉತ್ತರೆ ಮಳೆ ಬರುತ್ತದೆಂದು ಪುರೋಹಿತರು ಹೇಳುತ್ತಾರೆ. ಹಾಗೆಯೇ ಜನಕನ ಹೆಂಡತಿ ಹೊಲ ಉಳುವಾಗ ಮಡಕೆಯಲ್ಲಿದ್ದ ಮಗು ಸಿಕ್ಕಿ ಅದಕ್ಕೆ ಸೀತೆ ಎಂದು ಹೆಸರಿಡುತ್ತಾರೆ. ಕೂಡಲೇ ಮಳೆ

ಸುರಿಯಲಾರಂಭಿಸುತ್ತದೆ. ಇವಳು ಜಗಜ್ಜನನಿ ಶ್ರೀರಾಮನನ್ನು ಮದುವೆಯಾಗುತ್ತಾಳೆ' ಎಂದು ಪಂಡಿತರು ಭವಿಷ್ಯ ನುಡಿಯುತ್ತಾರೆ.

**೩.೧೭ ಕುಂಕಣ ರಾಮಾಯಣದಲ್ಲಿ ಸೀತೆ**

ಆರು ಜನ ದರೋಡೆಕೋರ ಸಹೋದರರಲ್ಲಿ ಕೈಕಾಲುಗಳಿಲ್ಲದ ಕಿರಿಯವನು ಮನೆಯಿಂದ ಹೊರಗಟ್ಟಲ್ಪಟ್ಟು ಶಿವನನ್ನು ಕುರಿತು ತಪಸ್ಸು ಮಾಡಿ ಆತನನ್ನು ಮೆಚ್ಚಿಸುತ್ತಾನೆ. ಶಿವ ವರಕೊಡುವ ಪೂರ್ವದಲ್ಲಿ ಶಿವನು ವಿಧಿಸಿದ ಷರತ್ತನ್ನು ಮೀರಿ ನಿಷಿದ್ಧ ದಕ್ಷಿಣ ದಿಕ್ಕಿನಲ್ಲಿದ್ದ ಅಮೃತಕೊಳದಲ್ಲಿ ಬಿದ್ದು ದಶಕಂಠನಾಗುತ್ತಾನೆ. ಪಾರ್ವತಿಯನ್ನೇ ನನ್ನೊಡನೆ ಕಳುಹಿಸಿಕೊಡು ಎಂದು ಶಿವನನ್ನು ಒತ್ತಾಯಿಸಿ ಕರೆದುಕೊಂಡು ಹೋಗುವಾಗ ಕೃಷ್ಣನ ನೆರವಿನಿಂದ ಕಪ್ಪೆಯೊಂದಕ್ಕೆ ಪಾರ್ವತಿ ರೂಪ ಬರುತ್ತದೆ. ಆಕೆಯೇ ಪಾರ್ವತಿ ಎಂದು ಭ್ರಮಿಸಿ ತನ್ನೊಂದಿಗೆ ಕರೆದುಕೊಂಡು ಹೋಗುತ್ತಾನೆ. ಮಾಯಾ ಪಾರ್ವತಿಯ ಗರ್ಭದಲ್ಲಿದ್ದ ಎರಡು ತಿಂಗಳ ಶಿಶು ರಾವಣನ ಘರ್ಜನೆಗೆ ನೀರಿನಲ್ಲಿ ಬಿದ್ದು ತೇಲಿ ಹೋಗುತ್ತದೆ. ಮುಂದೆ ಆ ಶಿಶು ಜಂಬುಮಾಲಿಯ ಕೈಸೇರುತ್ತದೆ. ಜಂಬುಮಾಲಿ ಆ ಶಿಶುವಿಗೆ ಸೀತೆಯೆಂದು ನಾಮಕರಣ ಮಾಡಿ ಪಾಲಿಸುತ್ತಾನೆ. ಮುಂದೆ ಜನಕರಾಜ ಹಾಗೂ ಜಂಬುಮಾಲಿಯ ಯುದ್ಧದಲ್ಲಿ ತಪ್ಪು ಕಾಣಿಕೆಯಾಗಿ ಸೀತೆಯನ್ನು ಜನಕರಾಜನಿಗೆ ಒಪ್ಪಿಸುತ್ತಾನೆ. ಸೀತೆ ಜನಕ ರಾಜನ ಅರಮನೆಯಲ್ಲಿ ಅವನ ಮಗಳಂತೆ ಇರುತ್ತಾಳೆ.

**೩.೧೮ ತಂಬೂರಿ ಸಂಪ್ರದಾಯ ರಾಮಾಯಣದಲ್ಲಿ ಸೀತೆ**

ಈ ಕಥನ ಗೀತೆ ರಮಾಯಣದ ಸಂಪೂರ್ಣ ಕಥೆಯನ್ನು ನಿರೂಪಿಸುತ್ತದೆ. ರಾವಳಾಸುರ ಹಾಗೂ ಮಂಡೋದರಿ ಇವರಿಗೆ ಮಕ್ಕಳ ಫಲ ಇರಲಿಲ್ಲ. ಮಂಡೋದರಿಯ ದುಃಖವನ್ನು ಶಮನಮಾಡಲು ಶಿವನಲ್ಲಿ ಮಕ್ಕಳ ಫಲ ಕೊಡುವಂತೆ ಪ್ರಾರ್ಥಿಸುತ್ತಾನೆ. ಶಿವನು ಇವನ ಪ್ರಾರ್ಥನೆಗೆ ಮೆಚ್ಚಿ ಒಂದು ಮಾವಿನ ಹಣ್ಣು ಕೊಟ್ಟು ಹಣ್ಣನ್ನು ಮಂಡೋದರಿಗೆ ಕೊಟ್ಟು ಗೊರಟೆ ನೀನು ತಿನ್ನು ಎಂದು ಹೇಳುತ್ತಾನೆ.

ಹಸಿವಿನಿಂದಾಗಿ ರಾವಳನೇ ಹಣ್ಣು ತಿಂದು ಗೊರಟೆಯನ್ನು ಮಂಡೋದರಿಗೆ ನೀಡುತ್ತಾನೆ. ಹಣ್ಣು ತಿಂದ ರಾವಳ ಗರ್ಭಧರಿಸುತ್ತಾನೆ. ಸೀನು ಬಂದಾಗ ರಾವಳನಿಗೆ ಸೀತಮ್ಮ ಹುಟ್ಟುತ್ತಾಳೆ. ಆಕೆ ಹುಟಿದ ಘಳಿಗೆ ಸರಿಯಿಲ್ಲವೆಂದು ಮಗುವನ್ನು ಬಂಗಾರದ ತೊಟ್ಟಿಲಲ್ಲಿಟ್ಟು ಪೆಟ್ಟಿಗೆಯೊಂದರಲ್ಲಿ ಗಂಗೆಯಲ್ಲಿ ತೇಲಿ ಬಿಡುತ್ತಾರೆ. ಜಲಕವತಿ ಪಟ್ಟಣದ ರಾಜನಿಗೆ ಆ ಪೆಟ್ಟಿಗೆಯಲ್ಲಿರುವ ಮಗು ಸ್ನಾನ ಮಾಡುವಾಗ ದೊರೆಯುತ್ತದೆ. ಆ ಮಗುವನ್ನು ತಂದು ಆತ ಸುಖವಾಗಿ ಸಾಕುತ್ತಾನೆ.

**ಬ್ಯಾರಿ ರಾಮಾಯಣ**

ಇದು ಸೂರ್ಪನಖಾ ಪ್ರಸಂಗದಿಂದ ಪ್ರಾರಂಭಿಸಿ, ಲಂಕಾದಹನದವರೆಗೆ ರಾಮಾಯಣದ ಕಥೆಯನ್ನು ಹೇಳುತ್ತದೆ. ಕೇರಳ ಮುಸ್ಲಿಮರಾದ ಮಲಯಾಳಂ ಮಾತನಾಡುವ ಬ್ಯಾರಿ ಸಮುದಾಯದವರು ಈ ಕಥನವನ್ನು ಹಾಡುವುದರಿಂದ ರಾಮಾಯಣದ ಪಾತ್ರಗಳೆಲ್ಲವೂ ಇಲ್ಲಿ ಬ್ಯಾರಿಗಳಾಗುತ್ತಾರೆ. ಬ್ಯಾರಿ ಭಾಷೆಯ ಧರೆಗೆ ಮರಳ್ಯಾಳ' ಎಂಬ ಕಥನ ಕವನ ಚಿತ್ರಪಟ ರಾಮಾಯಣದ ಕಥೆಯನ್ನು ಸಂಪೂರ್ಣ ನಿರೂಪಿಸುತ್ತದೆ.[೨೭]

**ವಾಲ್ಮೀಕಿ ರಾಮಾಯಣ**

ವಾಲ್ಮೀಕಿ ರಾಮಾಯಣದಲ್ಲಿ ಸೀತೆಯ ಬಗ್ಗೆ ಉಲ್ಲೇಖ ಬರುವುದು ಧನುಪ್ರಸಂಗ[೨೮]ದಲ್ಲಿ. ರಾಮಲಕ್ಷ್ಮಣರಿಗೆ ಶಿವಧನುಸ್ಸನ್ನು ತೋರಿಸುವಂತೆ ವಿಶ್ವಾಮಿತ್ರನು ಜನಕಮಹಾರಾಜನಿಗೆ ಹೇಳುತ್ತಾನೆ. ಆಗ ಜನಕನು ಶಿವಧನಸ್ಸು ತನ್ನ ಬಳಿಗೆ ಬಂದ ವೃತ್ತಾಂತವನ್ನು ಹೇಳಿದನು. ನಂತರ 'ಒಮ್ಮೆ ಯಜ್ಞಾರ್ಥವಾಗಿ ನೇಗಿಲಿನಿಂದ ಭೂಮಿಯನ್ನು ಶೋಧಿಸುತ್ತಿರಲು ನೆಲದ ಮೇಲೆ ಆದ ಗೆರೆಯಲ್ಲಿ ಒಬ್ಬ ಕನ್ಯೆಯು ದೊರಕಿದಳು. ಅವಳಿಗೆ ಸೀತೆಯೆಂದು ಹೆಸರಿಟ್ಟೆನು. ಭೂತಳದಿಂದ ಜನಿಸಿದ ಅವಳು ಅಯೋನಿಜೆ. ಅವಳನ್ನು ವೀರ್ಯಶುಲ್ಕಳು[೨೯] ಎಂದು ನಿಶ್ಚಯಿಸಿದ್ದೇನೆ.

ಇದನ್ನು ತಿಳಿದು ಅನೇಕ ಅರಸರು ಬಂದು ಕೇಳಿದಾಗ ನಾನು ಶಿವಧನಸ್ಸನ್ನು ತೋರಿಸಿದೆ. ಧನುಸ್ಸಿಗೆ ಹೆದೆಯೇರಿಸುವುದಿರಲಿ ಎತ್ತುವುದಕ್ಕೂ ಅವರಿಗೆ ಆಗಲಿಲ್ಲ. ಅವರ ಪರಾಕ್ರಮವು ಸಂದೇಹಕ್ಕೊಳಗಾದ್ದರಿಂದ ತಮಗೆ ಅವಮಾನವಾಯಿತೆಂದು ಭಾವಿಸಿ ಎಲ್ಲರೂ ಒಂದಾಗಿ ಮಿಥಿಲೆಗೆ ಮುತ್ತಿಗೆ ಹಾಕಿದ್ದರು. ಆ ಧನುಸ್ಸನ್ನು ಇವರಿಗೂ ತೋರಿಸುತ್ತೇನೆ. ರಾಮನು ಧನುಸ್ಸಿನ ಹೆದೆಯೇರಿಸಿದರೆ ಅವನಿಗೆ ವಿವಾಹ ಮಾಡಿಕೊಡುತ್ತೇನೆಂದನು. ಆಗ ರಾಮನು ಧನುಸ್ಸಿನ ಬಳಿ ಸಾರಿ ಅದನ್ನೆತ್ತಿ, ಧನುಸ್ಸು ಬಗ್ಗುವಂತೆ ಹೆದೆಯನ್ನು ಕರ್ಣಾಂತದವರೆಗೆ ಸೆಳೆದೊಡನೆಯೆ ಅದು ಮಧ್ಯದಲ್ಲಿ ಮುರಿದು ತುಂಡಾಯಿತು. ಅದನ್ನು ಕಂಡು ಸಂತೋಷಪಟ್ಟ ಜನಕನು 'ನನ್ನ ಮಗಳಾದ ಸೀತೆಯು ಜನಕ ವಂಶಕ್ಕೆ ಕೀರ್ತಿಯನ್ನು ತರುವಳು. ಸೀತೆಯು ವೀರ್ಯಶುಲ್ಕಳೆಂಬ ನನ್ನ ಪ್ರತಿಜ್ಞೆಯು ಸತ್ಯವಾಯಿತು. ಅವಳನ್ನು ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಯಿಂದ ಸಾಕಿದ್ದೇನೆ. ನಿಮ್ಮ ಆಗಮನದಿಂದ ಮಂಗಳವಾಯಿತು. ಸೀತೆಯನ್ನು ರಾಮನಿಗೆ ವಿವಾಹ ಮಾಡಿಕೊಡುತ್ತೇನೆ' ಎಂದು ತಿಳಿಸಿದನು.

ಧರ್ಮಜ್ಞನಾದ ಜನಕನು ವಿಧಿವತ್ತಾಗಿ ಯಜ್ಞದ ಅವಶಿಷ್ಟಕ್ರಿಯೆಗಳನ್ನು ಮಾಡಿ ತನ್ನ ಪುತ್ರಿಯರಾದ ಸೀತೆ ಮತ್ತು ಊರ್ಮಿಳೆಯರನ್ನು ರಾಮ ಲಕ್ಷ್ಮಣರಿಗೆ ಅಗ್ನಿ ಸಮ್ಮುಖದಲ್ಲಿ ನೀಡಿ ವಿವಾಹ ಮಾಡಿಕೊಟ್ಟನು. ಮೂಲ ವಾಲ್ಮೀಕಿ ರಾಮಾಯಣದಲ್ಲಿ ಸೀತೆಯ ಜನ್ಮವೃತ್ತಾಂತ ಹೆಚ್ಚಾಗಿ ಬರುವುದಿಲ್ಲ. ರಾಮನು ವನವಾಸಕ್ಕೆ

ಹೋಗುವ ವಿಚಾರವನ್ನು ಸೀತೆಗೆ ಹೇಳಲು ಬರುತ್ತಾನೆ. ಸೀತೆಗೆ ರಾಮನ ವನವಾಸದ ವಿಷಯವು ತಿಳಿದೇ ಇರುವುದಿಲ್ಲ. ಅವಳ ಮನಸ್ಸು ರಾಮಪಟ್ಟಾಭಿಷೇಕದ ವಿಷಯದಲ್ಲಿ ಮಗ್ನವಾಗಿತ್ತು. ಕೃತಜ್ಞತೆಯಿಂದ ದೇವತಾರ್ಚನೆಯನ್ನು ಮಾಡಿ ಸಂತೋಷದಿಂದ ರಾಮಾಗಮನದ ನಿರೀಕ್ಷೆಯಲ್ಲಿದ್ದಳು.

ರಾಮನು ಬಂದಾಗ ಸೀತೆಯು ಎದ್ದುನಿಂತಳು. ಅವಳನ್ನು ಕಂಡೊಡನೆಯೇ ರಾಮನಿಗೆ ಶೋಕವು ಆವರಿಸಿತು. ಅವನ ಮುಖದ ಬಣ್ಣ ಕಂದಿತು. ದೇಹವು ಬೆವರಿತು. ದುಃಖವನ್ನು ತಡೆಯಲಾರದೆ ಹೋದನು. ಸೀತೆಯು ಹೆದರಿದಳು. ಒಡೆಯನೆ ಇದೇನಿದು? ಇಂದು ಮಂಗಳಕರವಾದ ಪುಷ್ಯ ನಕ್ಷತ್ರವಲ್ಲವೇ? ನೊರೆಯಂತೆ ಬೆಳ್ಳಗಿರುವ ಶತಶಲಾಕಾವೃತವಾದ ಛತ್ರದ ನೆರಳಿನಲ್ಲಿ ನಿನ್ನ ಸುಂದರವದನವು ಶೋಭಿಸುತ್ತಿಲ್ಲ, ನಿನ್ನ ಅಕ್ಕ ಪಕ್ಕಗಳಲ್ಲಿ ಚಾಮರಗಳು ಬೀಸುತ್ತಿಲ್ಲವೇಕೆ? ವಾಗ್ಮಿಗಳಾದ ವಂಧಿಸೂತ ಮಾಗಧರು ಸಂತುಷ್ಟರಾಗಿ ಮಂಗಳಸ್ತೋತ್ರಗಳಿಂದ ಹೊಗಳುವುದೂ ಕಾಣಿಸುವುದಿಲ್ಲ. ವೇದಪಾರಂಗತರಾದ ಬ್ರಾಹ್ಮಣರು ನಿನಗೆ ಶಿರಃಸ್ನಾನಮಾಡಿಸಿ ಜೇನು, ಮೊಸರು ಮುಂತಾದ ಮಂಗಳದ್ರವ್ಯಗಳಿಂದ ವಿಧಿವತ್ತಾಗಿ ಅಭಿಷೇಕ ಮಾಡಿಲ್ಲ. ನಿನ್ನ ಹಿಂದೆ ಮೆರವಣಿಗೆಯು ಇನ್ನೂ ಹೊರಟಿಲ್ಲ. ಚಿನ್ನದ ಪ್ರತಿಮೆಗಳಿಂದ ಭೂಷಿತವಾದ ನಿನ್ನ ಸಿಂಹಾಸನವನ್ನು ವೀರಭಟರೆದುರಿಗೆ ಹೊತ್ತು ತರುವ ಪುರುಷನೂ ನನಗೆ ಗೋಚರಿಸುವುದಿಲ್ಲ. ಮುಖದಲ್ಲಿ ಎಂದೂ ಇಲ್ಲದ ಕಾಂತಿಹೀನತೆಯುಂಟಾಗಿದೆ ಎಂದಳು. ಆಗ ಸೀತೆಗೆ ರಾಮನು ವನವಾಸದ ವೃತ್ತಾಂತವನ್ನು ಹೇಳಿದನು. ಸೀತೆಗೆ ಮುಂದೆ ಅವಳು ನಡೆದುಕೊಳ್ಳಬೇಕಾದ ರೀತಿ ನೀತಿಗಳ ಬಗ್ಗೆ ವಿವೇಕ ಹೇಳಿದನು. ನಾನು ಮುನಿಸೇವಿತವಾದ ವನದಲ್ಲಿರುವಾಗ ನೀನು ವ್ರತೋಪವಾಸಗಳನ್ನು ಆಚರಿಸುತ್ತ ನಿಯಮದಲ್ಲಿರು. ನನ್ನ ತಂದೆ ತಾಯಿಯರನ್ನು ಗೌರವದಿಂದ ನೋಡಿಕೊಂಡು ವಿನಯದಿಂದ ನಡೆದುಕೋ ಎನ್ನುತ್ತಾನೆ.

ಪತಿಯಿಂದ[೩೦] ಪ್ರಿಯವಾದ ಮಾತುಗಳನ್ನೇ ಕೇಳಿದ್ದ ಸೀತೆಗೆ ಈ ಮಾತು ಕೋಪ ತರಿಸಿತು. ಪ್ರಣಯದಿಂದಲೇ ಕುಪಿತಳಾಗಿ ತನ್ನ ಪತಿಗೆ ಈ ರೀತಿ ಹೇಳಿದಳು. ರಾಜಪುತ್ರ, ನೀನು ಇಂತಹ ಹಗುರವಾದ ಮಾತನ್ನಾಡಬಹುದೆ? ಆರ್ಯಪುತ್ರ, ಲೋಕದಲ್ಲಿ ತಂದೆ ತಾಯಿ ಸೋದರ ಮಗ ಸೊಸೆ ಇವರೆಲ್ಲರೂ ತಮ್ಮ ಪುಣ್ಯಾಪಾಪಗಳನ್ನು ತಾವು ಅನುಭವಿಸುತ್ತಾರೆ. ಆದರೆ ಹೆಂಡತಿಯೊಬ್ಬಳೇ ತನ್ನ ಗಂಡನ ಕರ್ಮಾನುಸಾರವಾದ ಫಲವನ್ನು ಹಂಚಿಕೊಳ್ಳುತ್ತಾಳೆ. ಆದ್ದರಿಂದ ವನದಲ್ಲಿ ವಾಸಮಾಡಬೇಕೆಂದು ನನಗೂ ಆಜ್ಞೆಯಾದಂತೆಯೇ ಸರಿ. ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಹೆಂಗಸರಿಗೆ ಗಂಡನೊಬ್ಬನೆ ಗತಿ. ರಾಘವ, ನೀನು ಈಗಲೇ ವನಕ್ಕೆ ಹೊರಡುವುದಾದರೆ, ನಾನು ನಿನಗಿಂತ ಮುಂದೆ ಹೊರಟು ಮುಳ್ಳುಕಡ್ಡಿಗಳನ್ನು ತುಳಿದು ನಿನಗೆ ದಾರಿ ಮಾಡಿಕೊಡುತ್ತಾ ಹೋಗುವೆನು. ನನ್ನ ಮೇಲೆ ಏನಾದರೂ ಈರ್ಷ್ಯೆಯಿದ್ದರೆ – ಕೋಪವಿದ್ದರೆ – ಕುಡಿದ ಮೇಲೆ ಉಳಿದ ನೀರನ್ನು ಚೆಲ್ಲಿಬಿಡುವಂತೆ, ಅದೆಲ್ಲವನ್ನೂ ಮರೆತು ನನ್ನನ್ನು ಕರೆದುಕೊಂಡು ಹೋಗು. ನಾನು ಯಾವ ಅಪರಾಧವನ್ನೂ ಮಾಡಿಲ್ಲ.

ಸೀತೆಯು ತಾನು ದುರ್ಗಮವಾದ ನಿರ್ಜನಾರಣ್ಯಕ್ಕೆ ಬರುತ್ತೇನೆ. ಅಲ್ಲಿ ಬೇಕಾದಷ್ಟು ಕಾಡುಮೃಗಗಳಿರಲಿ, ಹುಲಿಗಳಿರಲಿ, ತೋಳಗಳಿರಲಿ, ತವರು-ಮನೆಯಲ್ಲಿರುವಂತೆ ಸುಖವಾಗಿರುತ್ತೇನೆ. ಪತಿಸೇವೆಯೊಂದನ್ನು ಮಾತ್ರ ನಾನು ಗಮನಿಸತಕ್ಕವಳು. ನಿನ್ನೊಡನೆ ನಾನು ಈಗ ಕಾಡಿಗೆ ಬರುವುದು ನಿಶ್ಚಯ; ಸಂದೇಹವೇ ಇಲ್ಲ. ನನ್ನನ್ನು ತಡೆಯಲು ಸಾಧ್ಯವಿಲ್ಲ. ಕಾಡುಹಣ್ಣು, ಗಡ್ಡೆ ಗೆಣಸುಗಳನ್ನು ತಿಂದುಕೊಂಡಿರುತ್ತೇನೆ. ನಿನಗೆ ಆಹಾರ ದೊರಕಿದಾಗಲೇ ನಾನು ಆಹಾರವನ್ನು ತೆಗೆದುಕೊಳ್ಳುತ್ತೇನೆ. ನದಿಗಳನ್ನು, ಬೆಟ್ಟಗಳನ್ನು ಕೊಳಗಳನ್ನು ವನಾಂತರಗಳನ್ನು ನೋಡಬೇಕೆಂದು ನನಗೆ ಆಸೆಯಿದೆ. ನೀನು ನನಗೆ ನಾಥನಾಗಿರುವಾಗ ಎಲ್ಲೆಲ್ಲಿಯೂ ಭಯವಿಲ್ಲ. ನಿನ್ನ ಸಮೀಪದಲ್ಲಿ ನೂರು ವರ್ಷಗಳನ್ನಾದರೂ ಸಾವಿರ ವರ್ಷಗಳನ್ನಾದರೂ ಕಳೆಯಬಲ್ಲೆ. ನೀನಿಲ್ಲದ ಸ್ವರ್ಗವೂ ನನಗೆ ಬೇಡ. ಕಾಡುಮೃಗಗಳೂ, ಕಪಿಗಳೂ, ಆನೆಗಳೂ ಇರತಕ್ಕ ಗೊಂಡಾರಣ್ಯಕ್ಕಾದರೂ ನಾನು ಹೋಗುತ್ತೇನೆ. ನಿನ್ನ ಪಾದಗಳನ್ನು ಹಿಡಿದು ಸಂಯಮದಿಂದ ಬಾಳುತ್ತೇನೆ. ಇನ್ನು ಯಾವ ಅಭಿಲಾಷೆಯೂ ನನಗಿಲ್ಲ. ನಿನ್ನಲ್ಲಿ ಅನುರಕ್ತಳಾಗಿದ್ದೇನೆ. ಬಿಟ್ಟುಹೋದರೆ ನಾನು ಸಾಯುವುದು ನಿಶ್ಚಯ. ನನ್ನನ್ನು ಕರೆದುಕೊಂಡು ಹೋಗೆಂದು ಬೇಡಿಕೊಳ್ಳುತ್ತೇನೆ. ನನ್ನ ಪ್ರಾರ್ಥನೆಯನ್ನು ನಡೆಸು. ನನ್ನಿಂದ ನಿನಗೆ ಭಾರವಾಗುವುದಿಲ್ಲ' ಎಂದಳು. ಆಗ ರಾಮನು ಒಪ್ಪದೆ ಸೀತೆಗೆ ವನವಾಸದಲ್ಲಿರುವ ಕಷ್ಟಗಳನ್ನು ವಿವರಿಸುತ್ತಾನೆ.

ಶ್ರೀರಾಮನ ವಚನವನ್ನು ಕೇಳಿ ಸೀತೆಯು ದುಃಖಿತಳಾದಳು. ಕಣ್ಣೀರು ಹರಿಯಿತು. ಅವಳು ಮೆಲ್ಲಗೆ ಹೇಳತೊಡಗಿದಳು. "ಶ್ರೀರಾಮ, ವನವಾಸದಲ್ಲಿ ಸಂಭವಿಸುವ ಕಷ್ಟಗಳನ್ನು ನೀನು ಹೇಳಿದೆ. ನಿನ್ನ ಪ್ರೇಮವು ನನ್ನಲ್ಲಿರುವಾಗ ಅವೆಲ್ಲವೂ ನನಗೆ ಗುಣಗಳಾಗಿಯೇ ತೋರುತ್ತವೆಯೆಂದು ತಿಳಿ.

ಗುರುಜನರು ನಿನಗೆ ಆಜ್ಞೆ ಮಾಡಿದ ಮೇಲೆ ನಿನ್ನೊಡನೆ ನಾನೂ ಹೋಗಲೇಬೇಕು. ಇಲ್ಲದಿದ್ದರೆ ನಿನ್ನ ವಿಯೋಗದಿಂದ ನಾನಿಲ್ಲಿ ಪ್ರಾಣವನ್ನು ಬಿಡಬೇಕು. ನಿನ್ನ ಸಮೀಪದಲ್ಲಿರುವಾಗ ನನಗೆ ಯಾರಿಂದಲೂ ತೊಂದರೆ ಇಲ್ಲ. ದೇವೇಶ್ವರನಾದ ಇಂದ್ರನಿಗೂ ನನಗೆ ತೊಂದರೆ ಕೊಡುವ ಸಾಮರ್ಥ್ಯವಿಲ್ಲ. ಗಂಡನನ್ನಗಲಿದ ಹೆಂಗಸು ಪ್ರಾಣವನ್ನು ಧರಿಸಿರಲಾರಳು. ಈ ವಿಷಯದಲ್ಲಿ ಎಷ್ಟೋ ಸಲ ನೀನೇ ನಿದರ್ಶನಗಳನ್ನು ಕೊಟ್ಟು ಹೇಳಿದ್ದೀಯೆ. ಮಹಾಪ್ರಾಜ್ಞನಾದ ನಿನಗೆ ಇದು ತಿಳಿಯದೇ? ಅಲ್ಲದೆ ಹಿಂದೆ ನಾನು ತಂದೆಯ ಮನೆಯಲ್ಲಿದ್ದಾಗ ಬ್ರಾಹ್ಮಣರು ಹೇಳಿದ ಸತ್ಯವಾಕ್ಯವನ್ನು ಕೇಳಿದ್ದನು. ನನಗೆ ವನವಾಸದ ಯೋಗವಿದೆಯೆಂದು ಅವರು ಹೇಳಿದ್ದರು.

**ಪ್ರಸಾದಿತಶ್ಚ ವೈ ಪೂರ್ವಂ ತ್ವಂ ವೈ ಬಹುವಿಧಂ ಪ್ರಭೋ ।**
**ಗಮನಂ ವನವಾಸಸ್ಯ ಕಾಂಕ್ಷಿತಂ ಹಿ ಸಹ ತ್ವಯಾ**[೩೧] **॥ ೧೪ ॥**

ಎಷ್ಟೋ ಸಲ ನಿನ್ನೊಡನೆ ನಾವಿಬ್ಬರೂ ಕಾಡಿಗೆ ಹೋಗಿ ಕೆಲವು ಕಾಲ ವಿಹರಿಸಿಕೊಂಡಿದ್ದು ಬರೋಣವೆಂದು ಬೇಡಿಕೊಂಡಿದ್ದೇನೆ. ಆಗಲೆಂದು ನೀನೂ ಒಪ್ಪಿದ್ದೀಯೆ! ನಾಥ, ನಿನ್ನೊಡನೆ ವನವಾಸ ನನಗೆ ಇಷ್ಟವಾದದ್ದೇ ಸರಿ.[೩೨]

ನಿನ್ನ ಕೈ ಹಿಡಿದ ಪತ್ನಿಯಾಗಿ ನಿರ್ದೋಷಳಾಗಿ ಪತಿವ್ರತೆಯಾಗಿರುವ ನನ್ನನ್ನು ಯಾವ ಕಾರಣದಿಂದ ನಿನ್ನೊಡನೆ ಕರೆದುಕೊಂಡು ಹೋಗುವುದಿಲ್ಲ? ನಿನಗೆ ಏಕೆ ಮನಸ್ಸಿಲ್ಲ? ಶ್ರೀರಾಮ ನಾನು ನಿನ್ನ ಭಕ್ತಳಾಗಿದ್ದೇನೆ; ಪತಿಯಾದ ನಿನ್ನನ್ನೇ ನಂಬಿದ್ದೇನೆ; ದೀನಳಾಗಿದ್ದೇನೆ; ನಿನ್ನ ಸುಖದುಃಖಗಳಿಗೆ ಸಮಭಾಗಿಯಾಗಿದ್ದೇನೆ. ನನ್ನನ್ನು ಕರೆದುಕೊಂಡು ಹೋಗು. ಇಷ್ಟು ದುಃಖಿತಳಾದ ನನ್ನನ್ನು ಬಿಟ್ಟುಹೋದರೆ ನನಗೆ ಮರಣವೇ ಗತಿ. ವಿಷವನ್ನು ಕುಡಿದೊ ಬೆಂಕಿಗೆ ಬಿದ್ದೊ ನೀರಿಗೆ ಧುಮುಕಿಯೊ ಪ್ರಾಣವನ್ನು ಬಿಡುತ್ತೇನೆ ಎಂದಳು.

ಹೀಗೆ ಬಹು ವಿಧದಲ್ಲಿ ಬೇಡಿಕೊಂಡರೂ ನಿರ್ಜನವಾದ ವನಕ್ಕೆ ಅವಳನ್ನು ಕರೆದೊಯ್ಯಲು ಶ್ರೀರಾಮನು ಒಪ್ಪಲಿಲ್ಲ. ಬೇಡವೆಂದೇ ಹೇಳುತ್ತಿರುವುದು ಕೇಳಿ ಮೈಥಿಲಿಗೆ ಚಿಂತೆಯು ಆವರಿಸಿತು. ಅವಳ ನೇತ್ರಗಳಿಂದ ಬಿಸಿಯಾದ ಕಣ್ಣೀರು ಸುರಿದು ಸುರಿದು ಭೂಮಿಗೆ ಸ್ನಾನವಾಯಿತು. ವೈದೇಹಿಯು ವ್ಯಥೆಪಡುತ್ತ ಕುಪಿತಳಾದಳು. ಆಗಲೂ ಸ್ಥಿರಚಿತ್ತನಾದ ಶ್ರೀರಾಮನು ಅವಳ ಪ್ರಯತ್ನವನ್ನು ತಪ್ಪಿಸುವುದಕ್ಕಾಗಿ ಅನೇಕ ವಿಧದಲ್ಲಿ ಸಮಾಧಾನ ಹೇಳಿದನು. ಬಹಳ ಉದ್ವೇಗದಿಂದಿದ್ದ ಸೀತೆಯು ರಾಮನಲ್ಲಿದ್ದ ಪ್ರೇಮ ಮತ್ತು ಸಲಿಗೆಯಿಂದ ಅವನನ್ನು ನಿಂದಿಸಿ ನುಡಿದಳು.[೩೩] ನನ್ನ ತಂದೆಯಾದ ಮಿಥಿಲೇಶ್ವರನು ನಿನ್ನನ್ನು ಅಳಿಯನನ್ನಾಗಿ ಮಾಡಿಕೊಂಡಾಗ, ನೀನೊಬ್ಬ ಗಂಡು ವೇಷದ ಹೆಣ್ಣೆಂದು ತಿಳಿದಿದ್ದನೆ? ಪ್ರಜ್ವಲಿಸುವ ಸೂರ್ಯನಂತೆ ಶ್ರೀರಾಮನು ಮಹಾತೇಜಸ್ವಿ ಎಂದು ಜನರಾಡಿಕೊಳ್ಳುವುದೆಲ್ಲ ಬರಿಯ ಸುಳ್ಳು. ಜನರು ಅಜ್ಞಾನದಿಂದ ಹಾಗೆ ಹೇಳುತ್ತಾರೆ ಎನ್ನುತ್ತಾಳೆ. ನಾನು ಮನಸ್ಸಿನಲ್ಲಿಯೂ ಇನ್ನೊಬ್ಬನನ್ನು ಸ್ಮರಿಸಿಕೊಳ್ಳತಕ್ಕವಳಲ್ಲ. ನಾನು ನಿನ್ನೊಡನೆ ಬಂದೇ ಬರುತ್ತೇನೆ. ಕುಮಾರಿಯಾಗಿ ನಿನ್ನ ಕೈಹಿಡಿದು ನಿನ್ನ ಸತಿಯಾಗಿ ಇಷ್ಟು ಕಾಲ ಬಾಳಿದ್ದೇನೆ. ಈಗ ನನ್ನನ್ನು ನಾಟಕದಲ್ಲಿ ಕುಣಿಯುವ ನಟನಂತೆ ಕಂಡವರಿಗೆ ಒಪ್ಪಿಸಬೇಕೆಂದಿದ್ದೀಯಾ? ಯಾವ ಧರ್ಮಕ್ಕೆ ಅನುಕೂಲವಾಗಿ ಆಚರಿಸಬೇಕೆಂದು ಸದಾ ಹೇಳುತ್ತಿರುತ್ತೆಯೋ, ಯಾವ ಧರ್ಮದ ಪಾಲನೆಗಾಗಿ ನೀನು ಇಂತಹ ದಂಡನೆಗೆ ಒಳಗಾಗಿದ್ದೀಯೋ, ಆ ಧರ್ಮಕ್ಕೆ ನೀನು ಅಧೀನನಾಗಿರು. ಆ ಧರ್ಮಕ್ಕೆ ವಿಧೇಯನಾಗಿ ನಡೆದುಕೋ.[೩೪]

ವನವಾಸಕ್ಕೋಸ್ಕರ ನಿರ್ಭೀತಳಾಗಿ ನಿಂತಿರುವ ನನ್ನನ್ನು ಕರೆದೊಯ್ಯದಿದ್ದರೆ, ಈ ದಿನವೇ ವಿಷವನ್ನು ಕುಡಿಯುತ್ತೇನೆ. ಆಗದವರ ವಶಕ್ಕೆ ಎಂದಿಗೂ ಸಿಗಲಾರೆ. ನಾಥ, ನೀನು ಬಿಟ್ಟು ಹೋದರೆ ಕಡೆಗಾದರೂ ಕೊರಗಿ ಕೊರಗಿ ಸಂಕಟದಿಂದ ನಾನು ಸಾಯುವುದು ನಿಶ್ಚಯ. ಅದಕ್ಕಿಂತ ಈಗಲೇ ನಿನ್ನೆದುರಿಗೆ ಪ್ರಾಣಬಿಡುವುದು ಉತ್ತಮ. ದುಃಖದಿಂದ ಬೆಂದು ಬಸವಳಿದ ಸೀತೆಯು ವಿಷಾಕ್ತ ಬಾಣಗಳಿಂದ

ಹೊಡೆಯಲ್ಪಟ್ಟ ಹೆಣ್ಣಾನೆಯಂತೆ ರಾಮನ ಮಾತುಗಳಿಂದ ನೊಂದಿದ್ದಳು. ಸಮಾಧಾನಿಸಿದ ರಾಮನು ಸೀತೆ[೩೫], ಈಗ ವನದಲ್ಲಿ ವಾಸ ಮಾಡುವೆನೆಂದೂ ನನ್ನೊಡನೆ ಬರುವೆನೆಂದೂ ನೀನು ದೃಢವಾಗಿ ನಿಶ್ಚಯಿಸಿದ್ದೀಯ. ನಿನ್ನನ್ನು ದಂಡಕಾವನಕ್ಕೆ ಕರೆದೊಯ್ಯಲು ಮನಸ್ಸಾಗಿದೆ ಎನ್ನುತ್ತಾನೆ. ಬ್ರಾಹ್ಮಣರಿಗೆ ಐಶ್ವರ್ಯವನ್ನು ದಾನಮಾಡು. ಭಿಕ್ಷುಕರಿಗೆ ಭೋಜನಮಾಡಿಸು. ನಮ್ಮ ಎಲ್ಲ ವಸ್ತುಗಳನ್ನೂ ಬ್ರಾಹ್ಮಣರಿಗೂ, ಭೃತ್ಯವರ್ಗದವರಿಗೂ ಹಂಚಿಬಿಡು ಎಂದನು.

ಲಕ್ಷ್ಮಣನಿಗೆ ವಸಿಷ್ಠಪುತ್ರನಾದ ಸುಯಜ್ಞನನ್ನು ಕರೆದುಕೊಂಡು ಬರಲು ತಿಳಿಸಿದನು. ಆತನು ಬಂದಾಗ, ಆತನನ್ನು ಸತ್ಕರಿಸಿ ಸೀತೆಯ ಪ್ರೇರಣೆಯಂತೆ. "ಸೌಮ್ಯ,[೩೬] ಸೀತೆಯು ನಿನ್ನ ಪತ್ನಿಗಾಗಿ ತನ್ನ ಮುತ್ತಿನ ಸರ, ಚಿನ್ನದ ಸರದಾಳಿ, ಡಾಬುಗಳನ್ನು ಕೊಡಬೇಕೆಂದಿದ್ದಾಳೆ. ಅಲ್ಲದೆ ವಿವಿಧಾಕಾರದಲ್ಲಿ ಅಂದವಾಗಿರುವ ಅಂಗದ ಕೇಯೂರಗಳನ್ನು ನಿನ್ನ ಪತ್ನಿಗೆ ಕೊಡುತ್ತಾಳೆ' ಸೀತೆಯು ಈಗ ವನಕ್ಕೆ ಹೊರಟಿದ್ದಾಳೆ. ಮಿತ್ರ, ಉತ್ತಮವಾದ ಹೊದಿಕೆಗಳಿಂದ ಕೂಡಿ ನಾನಾ ರತ್ನಭೂಷಿತವಾದ ಒಂದು ಮಂಚವಿದೆ. ಅದನ್ನು ಸೀತೆಯು ನಿನಗೆ ಒಪ್ಪಿಸಬೇಕೆಂದಿದ್ದಾಳೆ. ನನ್ನ ಸೋದರಮಾವನು ನನಗೆ ಶತ್ರುಂಜಯವೆಂಬ ಆನೆಯನ್ನು ಕೊಟ್ಟಿದ್ದನು. ಬ್ರಾಹ್ಮಣೋತ್ತಮ, ಸಾವಿರ ಸುವರ್ಣ ನಾಣ್ಯಗಳನ್ನು ಜೊತೆಗೆ ಇಟ್ಟು ಆನೆಯನ್ನು ನಿನಗೆ ಕೊಟ್ಟುಬಿಡುತ್ತೇನೆ ಎಂದನು.

ವನಕ್ಕೆ ಹೊರಡುವ ಮೊದಲು ದಶರಥನನ್ನು ನೋಡಲು ಹೋದಾಗ ಕೈಕೇಯಿಯು ನಾರುಮಡಿಗಳನ್ನು ಕೊಡುತ್ತಾಳೆ. ರಾಮ ಲಕ್ಷ್ಮಣರು ಆ ನಾರುಮಡಿಗಳನ್ನು ಉಟ್ಟುಕೊಳ್ಳುತ್ತಾರೆ. ರೇಷ್ಮೆಯ ದುಕೂಲವನ್ನುಟ್ಟಿದ್ದ ಸೀತೆಗೆ ನಾರುಬಟ್ಟೆಯು ಬಲೆಯಂತೆ ಕಂಡು ಹೆದರಿದಳು. ಹುಲ್ಲಿನಿಂದ ನೇಯ್ದ ಆ ವಸ್ತ್ರಗಳನ್ನು ಕೈಕೇಯಿಯ ಕೈಯಿಂದ ನಾಚಿಕೆಯಿಂದ ಪಡೆದುಕೊಂಡಳು. 'ರಾಮನನ್ನು ನೋಡುತ್ತ "ವನದಲ್ಲಿರುವ ಋಷಿಗಳು ಈ ನಾರುಬಟ್ಟೆಯನ್ನು ಹೇಗೆ ಸುತ್ತಿಕೊಳ್ಳುತ್ತಿರಬಹುದು' ಎಂದಳು. ಸೀತೆಗೆ ಅದನ್ನು ಧರಿಸುವ ವಿಧಾನ ತಿಳಿದಿರಲಿಲ್ಲ. ಯೋಚಿಸಿದರೂ ಸಮಸ್ಯೆ ಬಗೆ ಹರಿಯಲಿಲ್ಲ. ಆ ಜನಕ ಪುತ್ರಿಯು ಒಂದು ನಾರುಸೀರೆಯನ್ನು ಕಂಠದಲ್ಲಿ ಸಿಕ್ಕಿಸಿಕೊಂಡು ಇನ್ನೊಂದನ್ನು ಕೈಯಲ್ಲಿ ಹಿಡಿದು ನಾಚಿಕೆಯಿಂದ ಸುಮ್ಮನೆ ನಿಂತಳು. ಆಗ ರಾಮನೇ ಬಂದು ಸೀತೆಗೆ ರೇಷ್ಮೆಸೀರೆಯ ಮೇಲೆ ಆ ನಾರುವಸ್ತ್ರಗಳನ್ನು ಉಡಿಸಿದನು. ಅದನ್ನು ಕಂಡು ಗುರುಗಳಾದ ವಸಿಷ್ಠರಿಗೆ ಕೋಪ ಬಂತು. ಕೈಕೇಯಿಯನ್ನು ನಿಂದಿಸಿದರು. ದೇವಿ ಈ ನಾರು ಬಟ್ಟೆಯನ್ನು ತೆಗಿಸಿ ನಿನ್ನ ಸೊಸೆಗೆ ಉತ್ತಮ ವಸ್ತ್ರಗಳನ್ನು ನೀಡಲು ಹೇಳಿದರು. ಆದರೆ ಸೀತೆಯು ಮಾತ್ರ ತನ್ನ ಪತಿಯ ವೇಷವನ್ನು ಅನುಕರಿಸಬೇಕೆಂದು ನಿಶ್ಚಯಿಸಿ ಮನಬದಲಿಸದೆ ನಾರುಬಟ್ಟೆಯನ್ನೇ ಧರಿಸಿದಳು.

ವನವಾಸಕ್ಕೆ ಹೊರಟಾಗ ಪುರಜನರೆಲ್ಲರೂ ಹಿಂಬಾಲಿಸಿದರು. ಶ್ರೀರಾಮಾದಿಗಳು ತಮಸಾನದೀ ತೀರದಲ್ಲಿ ವಿಶ್ರಮಿಸಿಕೊಂಡು ಪೌರರಿಗೆ ತಿಳಿಯದಂತೆ ಮುಂದಕ್ಕೆ ಪ್ರಯಾಣ ಮಾಡಿದರು. ಗಂಗಾತೀರವನ್ನು

ಸೇರಿ ಗುಹನನ್ನು ಭೇಟಿಮಾಡಿದರು. ಸೀತೆಗೆ ರಾಮನು ಗಂಗಾನದಿಯ ವರ್ಣನೆ ಮಾಡಿದನು. ಭಾರದ್ವಾಜಾಶ್ರಮಕ್ಕೆ ಹೋಗಿ ಭೇಟಿ ಮಾಡಿ ಯಮುನಾ ನದಿಯನ್ನು ದಾಟಿದರು. ಚಿತ್ರಕೂಟವನ್ನು ತಲುಪಿ ಅಲ್ಲಿ ಪರ್ಣಶಾಲೆಯನ್ನು ನಿರ್ಮಿಸಿಕೊಂಡು ವಾಸಮಾಡಿದರು. ರಾಮನು ಸೀತೆಗೆ ಮಂದಾಕಿನೀ ನದಿಯ ವರ್ಣನೆ ಮಾಡಿದನು. ರಾಮನು ಸೀತಾ ಲಕ್ಷ್ಮಣರೊಡನೆ ಅತ್ರಿಮುನಿಗಳ ಆಶ್ರಮಕ್ಕೆ ಹೋದನು. ಅತ್ರಿಮುನಿಗಳು ಅನಸೂಯೆಯ ಪರಿಚಯ ಮಾಡಿಕೊಟ್ಟು ಅವಳು ತಪಸ್ವಿನಿಯೆಂದು ತಿಳಿಸಿದರು. ಅವಳ ವಿಶೇಷತೆಗಳನ್ನು ತಿಳಿಸಿದರು. ಅನಸೂಯೆಯ ಸೀತೆಯ ಗುಣಶೀಲಗಳನ್ನು ಮೆಚ್ಚಿ ಸಂಸತಪಟ್ಟಳು. ನೀನು ಹೀಗೆಯೇ ನಿನ್ನ ಪತಿಯನ್ನು ಅನುವರ್ತಿಸುತ್ತ ಬಾಳು. ಪತಿವ್ರತೆಯರ ನಿಯಮವನ್ನು ಪಾಲಿಸುತ್ತ ನಿನ್ನ ಪತಿಯ ಸಹಧರ್ಮಚಾರಿಣಿಯಾಗಿರು. ಇದರಿಂದ ನಿನಗೆ ಕೀರ್ತಿಯುಂಟು, ಪುಣ್ಯವುಂಟು ಎಂದು ನುಡಿದಳು.[೩೭]

ಆಹಾ! ಸೀತೆ, ನಿನ್ನ ಸಂತೃಪ್ತಿಯನ್ನು ನಾನು ಸಫಲಗೊಳಿಸುವೆನು! ಶ್ರೇಷ್ಠವಾದ ಈ ದಿವ್ಯಪುಷ್ಪ ಈ ವಸ್ತ್ರ, ಈ ಆಭರಣಗಳನ್ನೂ ದೇಹಕ್ಕೆ ಕಾಂತಿಯನ್ನು ಕೊಡುವ ಅಮೂಲ್ಯವಾದ ಈ ದಿವ್ಯಗಂಧಾದ್ಯನುಲೇಪನವನ್ನೂ ನಿನಗೆ ಕೊಟ್ಟಿದ್ದೇನೆ. ವೈದೇಹಿ ಇವು ನಿನ್ನ ದೇಹಕ್ಕೆ ಶೋಭೆಯನ್ನುಂಟುಮಾಡುವುವು. ನಿನ್ನ ರೂಪಕ್ಕೆ ಅನುಗುಣವಾಗಿವೆ. ಇವು ಎಂದಿಗೂ ಬಾಡಿ ಕೊಳೆಯಾಗಿ ಹಾಳಾಗುವುದೇ ಇಲ್ಲ. ಜಾನಕಿ, ದಿವ್ಯವಾದ ಈ ಅಂಗರಾಗವನ್ನು ಲೇಪಿಸಿಕೊಂಡು ನಿನ್ನ ಪತಿಯ ಸನ್ನಿಧಿಯಲ್ಲಿದ್ದರೆ, ಶ್ರೀಮನ್ನಾರಾಯಣನ ಸಮೀಪದಲ್ಲಿ ಸಾಕ್ಷಾತ್ ಲಕ್ಷ್ಮಿಯಿದ್ದಂತೆ ಕಾಣಿಸುವೆ! ನಿನ್ನಿಂದ ರಾಮನಿಗೆ ಒಂದು ಶೋಭಾವಿಶೇಷವುಂಟಾಗುವುದು! ಎಂದು ಹೇಳಿ ಆ ವಸ್ತುಗಳನ್ನು ಕೊಟ್ಟಳು. ಪಾರಿತೋಷಕವಾಗಿ ಕೊಟ್ಟ ದಿವ್ಯವಾದ ಆ ವಸ್ತ್ರ, ಅಂಗರಾಗ, ಒಡವೆಗಳು ಮತ್ತು ಹೂವಿನ ಸರಗಳನ್ನು ಮೈಥಿಲಿಯು ಸ್ವೀಕರಿಸಿ ಆ ತಪೋಧನೆಗೆ ವಂದಿಸಿದಳು. ಮಾರನೆಯ ದಿನ ರಾಮನು ಸೀತಾಲಕ್ಷ್ಮಣ ಸಮೇತನಾಗಿ ದಂಡಕಾರಣ್ಯವನ್ನು ಪ್ರವೇಶಿಸಿದನು.

ದಂಡಕಾರಣ್ಯದಲ್ಲಿ ಮುಂದೆ ಸಾಗುತ್ತಿರುವಾಗ ಅತ್ಯಂತ ವಿಕಟಾಕಾರನಾದ ವಿರಾಧನೆಂಬ ರಾಕ್ಷಸನು ಎದುರಾದನು. ನರಮಾಂಸ ಭಕ್ಷಕನಾದ ಆತ ಸೀತಾರಾಮಲಕ್ಷ್ಮಣರ ಕಡೆಗೆ ಅಟ್ಟಿಸಿಕೊಂಡು ಬಂದನು. ಬಂದವನೇ ಅವನು ಸೀತಾದೇವಿಯ ಸೊಂಟಕ್ಕೆ ಕೈಹಾಕಿ ಅವಳನ್ನು ಸ್ವಲ್ಪ ದೂರ ಸೆಳೆದೊಯ್ದು ಹಿಂದಿರುಗಿ ನೋಡುತ್ತಾ 'ನೀವು ಯಾರು? ಜಟೆಯನ್ನು ಕಟ್ಟಿ ನಾರುಬಟ್ಟೆಯನ್ನುಟ್ಟಿದ್ದೀರಿ; ಹೆಂಗಸೊಬ್ಬಳನ್ನು ಕರೆತಂದಿದ್ದೀರಿ; ನಿಮ್ಮ ಆಯಸ್ಸು ಮುಗಿಯಿತು. ಧನುರ್ಬಾಣಗಳನ್ನೂ ಖಡ್ಗಗಳನ್ನೂ ಧರಿಸಿ ದಂಡಕಾರಣ್ಯಕ್ಕೆ ಬಂದಿದ್ದೀರಲ್ಲ? ನೀವು ತಾಪಸರಾಗಿದ್ದರೆ ಈ ತರುಣಿಯೊಡನೆ ವಾಸಮಾಡುವುದಾದರೂ ಏಕೆ? ನೀವು ಅಧರ್ಮನಿರತರಾದ ಪಾಪಿಗಳು! ನೀವಿಬ್ಬರೂ ಮುನಿಧರ್ಮಕ್ಕೆ ವಿರುದ್ಧವಾಗಿ ನಡೆಯುವ ದುಷ್ಟರು. ನಾನು ಯಾವಾಗಲೂ ಋಷಿಗಳ ಮಾಂಸವನ್ನು ಭಕ್ಷಿಸುತ್ತಾ ತಿರುಗುತ್ತೇನೆ. ಈ ಸುಂದರವಾದ ತರುಣಿಯು ನನ್ನ

ಹೆಂಡತಿಯಾಗುವಳು. ಈಗ ನಿಮ್ಮೊಡನೆ ಯುದ್ಧಮಾಡಿ ನಿಮ್ಮೀರ್ವರ ರಕ್ತವನ್ನು ಕುಡಿಯುವೆನು' ಎನ್ನುತ್ತಾನೆ. ಈ ಮಾತುಗಳನ್ನು ದಿಗ್ಭ್ರಾಂತಳಾದ ಸೀತೆ ಗಾಳಿಗೆ ಸಿಕ್ಕ ಬಾಳೆಯ ಗಿಡದಂತೆ ಹೆದರಿ ನಡುಗಿದಳು.

ಸೀತೆಯು ವಿರಾಧನ ಕೈಗೆ ಸಿಕ್ಕಿಬಿದ್ದಿರುವುದನ್ನು ಕಂಡ ರಾಮನು ಲಕ್ಷ್ಮಣನಿಗೆ ಹೇಳಿದನು: ತಮ್ಮ, ಇವಳು ಸುಖಸಮೃದ್ಧಿಯಿಂದ ಬೆಳೆದ ರಾಜಪುತ್ರಿ. ಲಕ್ಷ್ಮಣ, ಕೈಕೇಯಿಯ ಅಪೇಕ್ಷೆಯು ಕೈಗೂಡಿಹೋಯಿತು. ವರದ ನೆವದಿಂದ ನಮಗೆ ಏನಾಗಲೆಂದು ಅವಳು ಬಯಸಿದ್ದಳೋ ಅದು ಈಗಲೇ ನೆರವೇರಿತು! ಕೈಕೇಯಿಯು ದೂರದರ್ಶಿನಿ. ತನ್ನ ಮಗನಿಗೆ ರಾಜ್ಯ ಬಂದರೆ ಸಾಕೆಂದು ಅವಳು ತೃಪ್ತಳಾಗಲಿಲ್ಲ. ಸಕಲ ಪ್ರಾಣಿಗಳಿಗೂ ನಾನು ಹಿತವನ್ನು ಕೋರುತ್ತಿದ್ದರೂ ನನ್ನನ್ನು ಅವಳು ಕಾಡಿಗೆ ಕಳಿಸಿದಳು. ನನಗೆ ಮಧ್ಯಮಾಂಬೆಯಾದ ಅವಳ ಅಭಿಲಾಷೆ ಈಗ ನೆರವೇರಿತು. ಏಕೆಂದರೆ, ವೈದೇಹಿಗೆ ಪರಪುರುಷನ ಸ್ಪರ್ಶವಾಯಿತೆಂಬುದಕ್ಕಿಂತ ನನಗೆ ಹೆಚ್ಚು ದುಃಖಕರವಾದುದು ಇನ್ನೊಂದಿಲ್ಲ. ಪಿತೃವಿಯೋಗಕ್ಕಿಂತಲೂ ರಾಜ್ಯಭ್ರಂಶಕ್ಕಿಂತಲೂ ನನಗೆ ಸಂಕಟವಾಗುತ್ತಿದೆ[೩೮] ಎಂದನು.

ಮುಂದೆ ದಂಡಕಾರಣ್ಯದಲ್ಲಿ ಸಾಗುತ್ತಿದ್ದಂತೆ ಸೀತೆ ರಾಮನಿಗೆ ಕೆಲವು ವಿಚಾರಗಳ ಬಗ್ಗೆ ತನ್ನ ಅಭಿಪ್ರಾಯವನ್ನು ತಿಳಿಸುತ್ತಾಳೆ. 'ದಂಡಕಾರಣ್ಯದಲ್ಲಿ ವಾಸಿಸುವ ಋಷಿಗಳನ್ನು ರಕ್ಷಿಸುವುದಕ್ಕಾಗಿ ನೀನು ರಾಕ್ಷಸರನ್ನು ಯುದ್ಧದಲ್ಲಿ ಸಂಹರಿಸುತ್ತೇನೆಂದು ಪ್ರತಿಜ್ಞೆ ಮಾಡಿದ್ದೀಯೆ. ಆರ್ಯಪುತ್ರ, ನೀನು ಮಹತ್ತರವಾದ ಧರ್ಮಮಾರ್ಗವನ್ನು ಹಿಡಿದಿದ್ದೀಯ. ಅತ್ಯಂತ ಸೂಕ್ಷ್ಮವಾಗಿ ವಿಚಾರಮಾಡಿದರೆ ಮಾತ್ರ ಈ ಧರ್ಮಮಾರ್ಗದಲ್ಲಿ ನಡೆಯಲು ಸಾಧ್ಯ. ಕಾಮಜನ್ಯವಾದ ವ್ಯಸನವನ್ನು ತೊರೆದವನು ಧರ್ಮವನ್ನು ಆಚರಿಸಬಲ್ಲ. ಕಾಮಜನ್ಯವಾದ ವ್ಯಸನಗಳು ಮೂರು: ಸುಳ್ಳು ಹೇಳುವುದು, ಪರಸ್ತ್ರೀಗಮನ ಮತ್ತು ವೈರಕಾರಣವಿಲ್ಲದೆ ಮಾಡುವ ಪರಹಿಂಸೆ. ಮೊದಲೆರಡು ನಿನ್ನಿಂದ ಸಾಧ್ಯವಿಲ್ಲ. ಈ ಮೂರನೆಯ ವ್ಯಸನವು ನಿನಗೆ ಒದಗಿದೆಯೆಂದು ನನಗನ್ನಿಸುತ್ತದೆ. ಅದಕ್ಕಾಗಿಯೇ ನೀನು ಧನುರ್ಬಾಣಗಳೊಂದಿಗೆ ಈ ದಂಡಕಾರಣ್ಯವನ್ನು ಪ್ರವೇಶಿಸಿದ್ದೀಯೆ. ಕ್ಷತ್ರಿಯನ ಬಳಿ ಧನುಸ್ಸಿರುವುದು, ಬೆಂಕಿಯ ಹತ್ತಿರ ಸೌದೆ ಇರುವುದು ಎರಡೂ ಒಂದೇ. ನೀನು ಧನಸ್ಸನ್ನು ಹಿಡಿದು ದಂಡಕಾರಣ್ಯದಲ್ಲಿ ಇರುವ ರಾಕ್ಷಸರನ್ನು ನಿಷ್ಕಾರಣವಾಗಿ ಸಂಹರಿಸುವುದು ಸರ್ವಥಾ ಯುಕ್ತವಲ್ಲ. ವೀರಾಗ್ರಣಿ, ನಮಗೆ ತಪ್ಪುಮಾಡದೆ ಇರತಕ್ಕವರನ್ನು ಕೊಲ್ಲುವುದು ನನಗೆ ಇಷ್ಟವಿಲ್ಲ. ನಿನಗೆ ಧರ್ಮದ ಸ್ವರೂಪವನ್ನು ಹೇಳಿಕೊಡಲು ಯಾರಿಗೆ ಸಾಮರ್ಥ್ಯ ಉಂಟು? ನಿನ್ನ ತಮ್ಮನೊಡನೆ ಪರ್ಯಾಲೋಚಿಸಿ ನಿನಗೆ ಇಷ್ಟ ಬಂದಂತೆ ನಡೆಸು[೩೯] ಎಂದಳು. ರಾಮನು ಈ ಮಾತಿಗೆ 'ದೇವಿ, ನಿನ್ನ ಸೌಜನ್ಯಕ್ಕೂ ನಿನ್ನ ವಂಶಕ್ಕೂ ಅನುರೂಪವಾದ ತೂಕವಳ್ಳ ಮಾತನ್ನು ಆಡಿದ್ದೀಯೆ. ಆದರೆ ಮಾತು ಕೊಟ್ಟ ಮೇಲೆ ನನ್ನ ಪ್ರತಿಜ್ಞೆಯನ್ನು ಮಾತ್ರ ಎಂದಿಗೂ ತ್ಯಜಿಸಲಾರೆ. ಅದರಲ್ಲಿಯೂ ಬ್ರಹ್ಮಜ್ಞಾನಿಗಳಿಗೆ ಮಾತು ಕೊಟ್ಟು ತಪ್ಪುವೆನೆ'?[೪೦] ಎಂದು ಉತ್ತರಿಸುತ್ತಾನೆ.

ಮುಂದೆ ಅಗಸ್ತ್ಯಮುನಿಗಳನ್ನು ಭೇಟಿ ಮಾಡಿದಾಗ ಅವರು ಆನಂದಿಸಿದರು. ಆಯಾಸಗೊಂಡಿದ್ದೀರಿ. ಮಿಥಿಲೇಶ್ವರನ ಪುತ್ರಿಯಾದ ಈ ಜಾನಕಿಗೆ ವಿಶ್ರಾಂತಿ ಬೇಕಾಗಿದೆಯೆಂದು ನೋಡಿದರೇ ಕಾಣಿಸುತ್ತದೆ. ರಾಮ ಇಲ್ಲಿ ಅವಳಿಗೆ ಸಂತೋಷವಾಗುವಂತೆ ನೋಡಿಕೋ. ಸೀತೆಯು ನಿನ್ನನ್ನು ಹಿಂಬಾಲಿಸಿ ಬಂದು ಕಷ್ಟವಾದ ಕೆಲಸಕ್ಕೆ ಕೈಹಾಕಿದ್ದಾಳೆ.[೪೧] ಸ್ತ್ರೀ ಸಹಜವಾದ ಮಿಂಚುಗಳ ಚಂಚಲತೆ, ಶತ್ರುಗಳ ತೀಕ್ಷ್ಣತೆ, ಗರುಡನ-ವಾಯುವಿನ ಶ್ರೀಘ್ರತೆ ಇಂತಹ ಯಾವ ದೋಷಗಳೂ ನಿನ್ನ ಪತ್ನಿಯಲ್ಲಿ ಇಲ್ಲ. ಈಕೆ ಸಾಕ್ಷಾತ್ ಅರುಂಧತೀ ದೇವಿಗೆ ಸಮಾನಳು[೪೨] ಎನ್ನುತ್ತಾರೆ.

ಮಾಯಾ ಜಿಂಕೆಯ ಪ್ರಸಂಗದಲ್ಲಿ ಲಕ್ಷ್ಮಣನು ಆ ಜಿಂಕೆಯನ್ನು ನೋಡಿದೊಡನೆಯೇ ರಾಮನಿಗೆ ಇದು ಮಾರೀಚನೆಂಬ ಆ ರಾಕ್ಷಸನೇ ಎನಿಸುತ್ತದೆ ಎಂದು ನಿಖರವಾಗಿ ಹೇಳುತ್ತಾನೆ. ಆದರೆ ಸೀತೆಯು ರಾಮನಿಗೆ ಈ ಮೃಗವು ತುಂಬ ಚೆನ್ನಾಗಿದೆ, ಇದನ್ನು ಹಿಡಿದುಕೊಡು. ನಾವು ಇದರೊಡನೆ ಆಟವಾಡಬಹುದು ಎನ್ನುತ್ತಾಳೆ. ನಾವು ವನವಾಸ ಮುಗಿಸಿಕೊಂಡು ಹೋಗುವಾಗ ಈ ಮೃಗವು ನಮ್ಮ ಅಂತಃಪುರದಲ್ಲಿ ಅಲಂಕಾರಮಯವಾಗಿರುತ್ತದೆ ಎನ್ನುತ್ತಾಳೆ. ಇದು ಬದುಕಿರುವಾಗ ಸಿಗದಿದ್ದರೆ ಇದರ ಚರ್ಮವಾದರೂ ಸಿಗುತ್ತದೆ. ಹುಲ್ಲಿನ ಚಾಪೆಯ ಮೇಲೆ ಈ ಚರ್ಮವನ್ನು ಹಾಸಿ ಅದರಲ್ಲಿ ನಿನ್ನೊಡನೆ ಕುಳಿತುಕೊಳ್ಳಬೇಕೆಂದು ನನ್ನ ಆಸೆ! ನಾನು ಹೀಗೆ ಸ್ವೇಚ್ಛೆಯಿಂದ ಹಠಮಾಡುವುದು ಕ್ರೂರತನವೇನೋ ಹೌದು; ಸ್ತ್ರೀಯರಿಗೆ ಯೋಗ್ಯವೂ ಅಲ್ಲ. ಆದರೂ ಈ ಮೃಗವು ನನಗೆ ವಿಸ್ಮಯವನ್ನು ತರಿಸಿದೆ ಎನ್ನುತ್ತಾಳೆ.

ಮಾಯಾಮೃಗದ ಪ್ರಸಂಗದಲ್ಲಿ ಮಾರೀಚನು ಹಾ ಸೀತೇ! ಹಾ ಲಕ್ಷ್ಮಣಾ! ಎಂದು ಕೂಗಿದಾಗ ಸೀತೆಯು ಲಕ್ಷ್ಮಣನಿಗೆ ಹೊರಡೆನ್ನುತ್ತಾಳೆ. ಆಗ ಲಕ್ಷ್ಮಣನು "ಅದು ರಾಮನು ಕೂಗಿದ ಧ್ವನಿಯಲ್ಲ. ಯಾವನೋ ರಾಕ್ಷಸನು ಮಾಯೆಯಿಂದ ಅದೇ ಧ್ವನಿಯಲ್ಲಿ ಕೂಗಿದ್ದಾನೆ. ರಾಮನು ನ್ಯಾಸದಂತೆ ನಿನ್ನ ರಕ್ಷಣೆಯನ್ನು ನನಗೆ ವಹಿಸಿದ್ದಾನೆ. ಆದ್ದರಿಂದ ನಿನ್ನನ್ನು ತ್ಯಜಿಸಿ ಹೋಗಲಾಗದು" ಎನ್ನುತ್ತಾನೆ. ಈ ಸಂದರ್ಭದಲ್ಲಿ ಸೀತೆ ಮುಂದಿನಂತೆ ಹೇಳುತ್ತಾಳೆ.[೪೩]

"ಲಕ್ಷ್ಮಣ, ನೀನು ಅಣ್ಣನಿಗೆ ಮಿತ್ರನಂತೆ ನಟಿಸುವ ಶತ್ರು. ನಿನ್ನ ಅಣ್ಣನು ಇಂಥ ಸಂಕಟದಲ್ಲಿ ಸಿಕ್ಕಿರುವಾಗಲೂ ಅವನಿಗೆ ನೆರವಾಗಲು ನಿನಗೆ ಇಚ್ಛೆಯಿಲ್ಲ. ಶ್ರೀರಾಮನು ಸಾಯಲೆಂಬುದೇ ನಿನ್ನ ಇಚ್ಛೆ! ನನಗೋಸ್ಕರ ನೀನು ಹೀಗೆ ಮಾಡುತ್ತಿದ್ದೀಯೇ! ನನ್ನ ಮೇಲಿನ ಆಸೆಯಿಂದಲೇ ನೀನು ಶ್ರೀರಾಮನಿಗೆ ನೆರವಾಗಿ ಹೋಗಲು ಹಿಂಜರಿಯುತ್ತಿರಬೇಕು! ಅವನಿಗೆ ಕಷ್ಟ ಬಂದರೇ ನಿನಗೆ ಪ್ರಿಯವೆಂದು ತೋರುತ್ತದೆ. ಅಣ್ಣನಲ್ಲಿ ನಿನಗೆ ಸ್ನೇಹವಿಲ್ಲ. ಆದ್ದರಿಂದ ನಿಶ್ಚಿಂತನಾಗಿ ನಿಂತಿದ್ದೀಯೆ. ಆ ತೇಜಸ್ವಿಯನ್ನು ನೋಡಲು ನಿನಗೆ ಇಚ್ಛೆಯಿಲ್ಲ. ಶ್ರೀರಾಮನು ಪ್ರಾಣಸಂಶಯಕ್ಕೆ ಈಡಾದ ಮೇಲೆ, ಇಲ್ಲಿ ನಾನು ಜೀವಿಸಿದ್ದು ಆಗ ಬೇಕಾದ್ದೇನು? ನೀನು ಬೇರೆ ನನ್ನನ್ನು ಮುಖ್ಯವಾದ ಗುರಿಯಾಗಿಟ್ಟುಕೊಂಡು ಬಂದಿದ್ದೀಯೆ" ಎಂದು ಕಣ್ಣೀರು ಸುರಿಸುತ್ತ ಶೋಕದಿಂದ ಹಲುಬಿದಳು. ಆಗ ಲಕ್ಷ್ಮಣನು ರಾಮನ ಧೈರ್ಯವನ್ನೂ, ಶೌರ್ಯವನ್ನೂ, ರಾಕ್ಷಸರ

ಮಾಯಾವಿದ್ಯೆಯನ್ನು ಹೇಳಿ ಸಮಾಧಾನ ಹೇಳಿದನು. ಅದನ್ನು ಕೇಳಿ ಸೀತೆಗೆ ಕೋಪ ಹೆಚ್ಚಿ ಕಣ್ಣುಗಳು ಕೆಂಪಾದವು. ಸತ್ಯವನ್ನೇ ನುಡಿದಿದ್ದರೂ ಗಮನಿಸದ ಸೀತೆಯು ಲಕ್ಷ್ಮಣನಿಗೆ ಮತಷ್ಟು ಕಠೋರ ನುಡಿಗಳನ್ನಾಡಿದಳು.

'ಎಲಾ ಅಯೋಗ್ಯ, ಕರುಣೆಯ ಲೇಶವೂ ಇಲ್ಲದ ಘಾತುಕಿ ನೀನು! ಕುಲಗೇಡಿ! ಶ್ರೀರಾಮನಿಗೆ ಬಂದ ಘೋರ ವಿಪತ್ತು ನಿನಗೆ ಪ್ರಿಯವಾಗಿದೆಯೆಂದು ತೋರುತ್ತದೆ. ಶ್ರೀರಾಮನಿಗೆ ಕಷ್ಟಬಂದಿದೆ ಎಂಬುದನ್ನು ತಿಳಿದೇ ಈ ಮಾತುಗಳನ್ನಾಡುತ್ತಿದ್ದೀಯೆ. ನೀನು ಸವತಿಯ ಮಗನಾದ ದಾಯಾದಿಯಲ್ಲವೆ? ನಿನ್ನಂಥ ಘಾತುಕರೂ, ಮೋಸಗಾರರೂ ಆದವರಲ್ಲಿ ಕೆಟ್ಟ ಉದ್ದೇಶವಿದ್ದರೆ ಆಶ್ಚರ್ಯವೇನಿಲ್ಲ. ಮಹಾದುಷ್ಟ ನೀನು! ಕಾಡಿನಲ್ಲಿ ಅಸಹಾಯನಾದ ಶ್ರೀರಾಮನನ್ನು ನೀನು ಒಂಟಿಯಾಗಿ ಹಿಂಬಾಲಿಸಿ ಬಂದಿದ್ದೀಯೆ. ನನಗೋಸ್ಕರ ಕಪಟತನದಿಂದ ಬಂದಿದ್ದೀಯೆ. ಅಥವಾ ಭರತನೇ ನಿನ್ನನ್ನು ಕಳಿಸಿದ್ದಾನೋ ಏನೋ! ಆದರೆ ಲಕ್ಷ್ಮಣ, ನಿನ್ನ ಉದ್ದೇಶವೂ ನಡೆಯದು! ಭರತನದೂ ನಡೆಯದು ! ಇಂದೀವರಶ್ಯಾಮಲಾಂಗನೂ ಪದ್ಮದಳಾಯತಾಕ್ಷನೂ ಆದ ನನ್ನ ಪತಿಯನ್ನು ನಂಬಿರುವ ನಾನು ನಿನ್ನಂಥ ಅಲ್ಪನನ್ನು ಎಂದಿಗಾದರೂ ಬಯಸಿಯೇನೆ? ಲಕ್ಷ್ಮಣ, ನೋಡುತ್ತಿರು ನಿನ್ನೆದುರಿಗೇ ನಾನು ಪ್ರಾಣವನ್ನು ಬಿಡುತ್ತೇನೆ. ಇದು ನಿಶ್ಚಯ. ಶ್ರೀರಾಮನನ್ನಗಲಿ ಒಂದು ಕ್ಷಣವೂ ನಾನು ಈ ಭೂಮಿಯಲ್ಲಿ ಬದುಕಿರಲಾರೆ" ಎಂದು ಹೇಳಿದಳು.

ಇದಕ್ಕೆ ಲಕ್ಷ್ಮಣನು ಕೊಡುವ ಹೇಳಿಕೆ ಸ್ತ್ರೀಯರ ಸಹಜ ಸ್ವಭಾವವನ್ನು ಹೇಳುತ್ತದೆ. 'ನೀನು ನನಗೆ ಪ್ರತ್ಯಕ್ಷ ದೇವತೆಯಾಗಿದ್ದೀಯೆ. ಯಾರು ಆಡಲಾರದ ಅತ್ಯಂತ ಅನುಚಿತವಾದ ಮಾತು ಸ್ತ್ರೀಯರಲ್ಲಿ ಕಂಡುಬಂದರೆ ಅಚ್ಚರಿಯಲ್ಲ. ಲೋಕದಲ್ಲಿ ಹೆಂಗಸರ ಸ್ವಭಾವ ಹೀಗಿರುವುದು ಕಂಡುಬರುತ್ತದೆ. ಹೆಂಗಸರು ಚಂಚಲಚಿತ್ತರಾಗಿ ವಿನಯಾದಿ ಸದ್ಗುಣಗಳನ್ನು ಗಾಳಿಗೆ ತೂರುತ್ತಾರೆ. ಕ್ರೂರ ಹೃದಯರಾಗಿ ಜನರ ಸ್ನೇಹಕ್ಕೆ ಭಂಗವನ್ನು ತರುತ್ತಾರೆ. ಸಕಲ ವನದೇವತೆಗಳೂ ನನಗೆ ಸಾಕ್ಷಿಗಳಾಗಿ ಈ ವಿಷಯವನ್ನು ಕೇಳಿಕೊಂಡಿರಲಿ. ನಾನು ನ್ಯಾಯವಾದ ಮಾತನ್ನಾಡಿದರೂ ಎಷ್ಟು ಅನ್ಯಾಯವಾಗಿ ಎಂತಹ ಕಠೋರವಾದ ಮಾತನ್ನು ನನಗೆ ಹೇಳಿದೆ! ಥೂ! ನೀನು ಹಾಳಾಗಿಹೋಗು! ನನ್ನನ್ನು ಹೀಗೆ ಶಂಕಿಸುವೆಯಾ? ಶ್ರೀರಾಮನಿರುವಲ್ಲಿಗೇ ಹೋಗುವೆನು. ದೇವಿ, ನಿನಗೆ ಶುಭವಾಗಲಿ ಎನ್ನುತ್ತಾನೆ. ಈಗ ನನಗಾಗುತ್ತಿರುವ ಕೆಟ್ಟ ಶಕುನಗಳನ್ನು ಗಮನಿಸಿದರೆ– ಪುನಃ ನಾನು ಶ್ರೀರಾಮನೊಡನೆ ಬಂದು ನಿನ್ನನ್ನು ಕಾಣುವೆನೆ! ಎನ್ನುತ್ತಾನೆ.

ಸೀತೆಯು ಕಣ್ಣೀರು ಸುರಿಸುತ್ತ ಮತ್ತೆ ಕಠೋರವಾಗಿ "ಶ್ರೀರಾಮನಿಲ್ಲದಿದ್ದರೆ ನಾನು ಗೋದಾವರೀ ನದಿಯಲ್ಲಿ ಧುಮುಕುವೆನು; ನೇಣು ಹಾಕಿಕೊಳ್ಳುವೆನು; ಕೊರಕಲು ಹಳ್ಳದಲ್ಲಾದರು ಬಿದ್ದು ದೇಹವನ್ನು ಬಿಡುವೆನು; ಘೋರವಿಷವನ್ನಾದರೂ ಕುಡಿಯುತ್ತೇನೆ. ಇಲ್ಲವೇ, ಬೆಂಕಿಗೆ ಬೀಳುತ್ತೇನೆ! ಲಕ್ಷ್ಮಣ, ಶ್ರೀರಾಮನನ್ನು ಬಿಟ್ಟು ಇನ್ನೊಬ್ಬ ಗಂಡಸನ್ನು (ಎಡ) ಗಾಲಿನಿಂದಲೂ ಮುಟ್ಟಲಾರೆ!" ಎಂದು ದುಃಖಾವೇಶದಿಂದ ಕೂಗಿದಳು. ಕಣ್ಣೀರು ಸುರಿಸುತ್ತ ಶೋಕೋದ್ರೇಕದಿಂದ ಎರಡು ಕೈಗಳಿಂದಲೂ

ಹೊಟ್ಟೆಯನ್ನು ಬಡಿದುಕೊಂಡಳು. ಸಮಾಧಾನಿಸಲು ಪ್ರಯತ್ನಿಸಿದ ಲಕ್ಷ್ಮಣನೊಡನೆ ಸೀತೆಯು ಮಾತನಾಡಲಿಲ್ಲ.

ರಾವಣನು 'ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ' ಎಂದು ವೇದವಾಕ್ಯವನ್ನು ಘೋಷಿಸುತ್ತ ಬಂದನು. ಇನ್ನೂ ಹತ್ತಿರಕ್ಕೆ ಬಂದು ಮೆಲುನುಡಿಯಲ್ಲಿ ಸೀತೆಯ ಸೌಂದರ್ಯವನ್ನು ಹೊಗಳತೊಡಗಿದನು. ಸೀತೆಯು ಬ್ರಾಹ್ಮಣ ವೇಷದಲ್ಲಿದ್ದ ರಾವಣನನ್ನು ಕಂಡು ಅರ್ಘ್ಯಪಾದ್ಯಗಳನ್ನಿತ್ತು ಸತ್ಕರಿಸಿದಳು. ರಾವಣನು ಸೀತೆಯ ವೃತ್ತಾಂತವನ್ನು[೪೪] ಕೇಳಿದನು. ಸೀತೆಯು ಹಿಂದು ಮುಂದು ನೋಡಿದರೂ 'ಎಷ್ಟಾದರೂ ಬ್ರಾಹ್ಮಣ, ಅತಿಥಿಯಾಗಿ ಬಂದಿದ್ದಾನೆ. ಹೇಳದಿದ್ದರೆ ಶಪಿಸಿಬಿಟ್ಟಾನು' ಎಂದು ಯೋಚಿಸಿ ವೃತ್ತಾಂತವನ್ನು ತಿಳಿಸಿದಳು. ನಂತರ 'ಎಲೈ ಬ್ರಾಹ್ಮಣನೇ, ನಿನ್ನ ಹೆಸರೇನು ? ಗೋತ್ರ ಯಾವುದು? ವಂಶ ಯಾವುದು? ಈ ದಂಡಕಾರಣ್ಯದಲ್ಲಿ ಏಕಾಕಿಯಾಗಿ ಏಕೆ ಸಂಚರಿಸುತ್ತಿದ್ದೀಯ ?' ಎಂದಳು. ಆಗ ರಾವಣನು ಸತ್ಯವನ್ನು ಹೇಳುತ್ತಾನೆ. ಸೀತೆಯ ಸೌಂದರ್ಯವನ್ನು ವರ್ಣಿಸಿ, ನೀನು ನನ್ನ ರಾಣಿಯಾಗು ಎನ್ನುತ್ತಾನೆ. ರಾವಣನು ಗುಳ್ಳೆನರಿಯೆಂದೂ ರಾಮನನ್ನು ಸಿಂಹವೆಂದೂ ಹೇಳಿದ ಸೀತೆ ಗುಳ್ಳೇನರಿಯು ಸಿಂಹಿಣಿಯನ್ನು ಬಯಸಿದಂತೆ ಬಯಸುವೆಯಾ ಬುದ್ಧಿಗೇಡಿ ಎಂದು ನಾನಾ ವಿಧವಾಗಿ ನಿಂದಿಸಿ ಗಡುಸಾಗಿ ಉತ್ತರಿಸಿದಳು. ಸೀತೆಯ ಉತ್ತರದಿಂದ ಕ್ಷುದ್ರನಾಗಿ ರಾವಣನು ಆತ್ಮಪ್ರಶಂಸೆ ಮಾಡಿಕೊಂಡನು. ಸೀತೆಯ ವಿರೋಧವನ್ನು ಲೆಕ್ಕಿಸದೆ ರಾವಣನು ಕೆಟ್ಟ ಮಾತುಗಳಿಂದ ಗದರಿಸುತ್ತ, ಗರ್ಜಿಸುತ್ತ, ಅವಳ ಹಿಂಭಾಗವನ್ನು ಹಿಡಿದು ಹೊತ್ತು ರಥದೊಳಗೆ ಹೇರಿದನು.[೪೫] ಸೀತೆಯು ನಾನಾ ಬಗೆಯಲ್ಲಿ ಪ್ರಲಾಪಿಸಿದಳು, ಹಂಬಲಿಸಿದಳು. ಮರದ ಮೇಲೆ ಕಂಡ ಜಟಾಯುವಿಗೆ ತನ್ನ ವೃತ್ತಾಂತವನ್ನು ರಾಮನಿಗೆ ತಿಳಿಸು, ಲಕ್ಷ್ಮಣನಿಗೂ ತಿಳಿಸು ಎಂದು ಕೂಗಿ ಹೇಳಿದಳು.[೪೬] ಜಟಾಯುವು ಹೇಳಿದ ಬುದ್ಧಿವಾದವನ್ನು ಲೆಕ್ಕಿಸದ ರಾವಣನೊಂದಿಗೆ ಜಟಾಯುವು ಯುದ್ಧ ಮಾಡುತ್ತಾನೆ. ರಾವಣನು ಜಟಾಯುವಿನ ರೆಕ್ಕೆ ಮತ್ತು ಕಾಲುಗಳನ್ನು ಕತ್ತರಿಸಿದನು. ಅದನ್ನು ಕಂಡ ಸೀತೆಯು ಜಟಾಯುವನ್ನು ತಬ್ಬಿ ಅಳತೊಡಗಿದಳು.[೪೭]

ಅಳುತ್ತಿದ್ದ ಸೀತೆಯನ್ನು ಎಳೆದೊಯ್ಯುತ್ತಿದ್ದ ರಾವಣನನ್ನು ಸೀತೆಯು ನಿಂದಿಸಿದಳು. ದಾರಿಯಲ್ಲಿ ಋಷ್ಯಮೂಕ ಪರ್ವತದ ಮೇಲೆ ಕೆಲವು ವಾನರರನ್ನೂ ಕಂಡು ತನ್ನ ಒಡವೆಗಳನ್ನು ವಸ್ತ್ರದಲ್ಲಿ ಕಟ್ಟಿ ಅವರ ಮಧ್ಯದಲ್ಲಿ ಎಸೆದಳು. ದೈವಗತಿಯಿಂದ ರಾಮನೇನಾದರೂ ಅಲ್ಲಿಗೆ ಬಂದರೆ ಅವರು ತನ್ನ ವೃತ್ತಾಂತವನ್ನು ಹೇಳಲಿ ಎಂಬ ಆಶಯ ಸೀತೆಯದು.

ಹೊರಳಾಡುತ್ತಿದ್ದ ಸೀತೆಯನ್ನು ರಾವಣನು ಕಂಕುಳಲ್ಲಿ ಹಿಡಿದು, ಸಾಕ್ಷಾತ್ ಮೃತ್ಯು ದೇವತೆಯನ್ನು ಮನೆಗೆ ತರುವಂತೆ ಲಂಕಾನಗರವನ್ನು ಪ್ರವೇಶಿಸಿದನು. ತನ್ನ ಅಂತಃಪುರದ ಒಂದು ಕಡೆಯಲ್ಲಿ ಸೀತೆಯನ್ನಿರಿಸಿದನು. ಘೋರಾಕೃತಿಯ ಪಿಶಾಚಿಗಳಂತಿದ್ದ ಕೆಲವು ರಾಕ್ಷಸಿಯರನ್ನು ಕಾವಲಿಗೆ ನೇಮಿಸಿದನು.

ಯಾವ ಸ್ತ್ರೀ, ಪುರುಷರೂ ತನ್ನ ಅನುಮತಿಯಿಲ್ಲದೆ ಅವಳನ್ನು ನೋಡಬಾರದು. ಅವಳು ಅಪೇಕ್ಷಿಸಿದರೆ ಮುತ್ತು, ರತ್ನ, ಒಡವೆ, ವಸ್ತ್ರಗಳಲ್ಲಿ ಯಾವುದನ್ನು ಎಷ್ಟು ಕೇಳಿದರೂ ಕೊಡಬೇಕೆಂದು ತಿಳಿಸಿದನು. ಯಾರಾದರೂ ಅವಳೊಂದಿಗೆ ಅಪ್ರಿಯವಾಗಿ ಮಾತಾಡಿದರೆ ಅವಳು ತನ್ನ ಪ್ರಾಣದ ಆಸೆಯನ್ನು ತೊರೆದಿರಬೇಕೆಂದು ಆಜ್ಞಾಪಿಸಿ[೬೮] ಹೊರಟನು.

ರಾವಣನು ತನ್ನ ವೈಭವಯುತವಾದ ಅರಮನೆಯನ್ನು ಬಲವಂತವಾಗಿ ಸೀತೆಗೆ ತಿಳಿಸಿ ಪ್ರಲೋಭನೆಗೊಳಿಸಲು ಪ್ರಯತ್ನಿಸಿದನು. ದೈನ್ಯದಿಂದ ಕೇಳಿಕೊಂಡನು. ಆದರೆ ಸೀತೆಯು ರಾವಣನನ್ನು ಧಿಕ್ಕರಿಸಿ ಮಾತನಾಡಿದಳು. ಇದರಿಂದ ಕುಪಿತನಾದ ರಾವಣನು ಸೀತೆಗೆ ಹನ್ನೆರಡು ತಿಂಗಳ ಸಮಯವನ್ನು ನೀಡಿ ಅವಳನ್ನು ಅಶೋಕವನದಲ್ಲಿರಿಸಿದನು:

ಮುಂದೆ ರಾವಣನು ಆಗಾಗ ಬಂದು ಸೀತೆಗೆ ನಾನಾ ವಿಧವಾದ ಕಾಣಿಕೆಗಳನ್ನು ನೀಡುವ, ಪಟ್ಟದರಾಣಿಯಾಗಿಸುವ, ಬೇಕಾದ ವೈಭೋಗಗಳನ್ನು ಅನುಭವಿಸುವ ಮುಂತಾದ ಆಸೆಗಳನ್ನು ತೋರಿಸುತ್ತಾನೆ. ಆದರೆ ಸೀತೆ ಇದ್ಯಾವುದರ ಕಡೆಗೂ ಗಮನ ಹರಿಸದೆ ರಾಮಧ್ಯಾನದಲ್ಲಿರುತ್ತಾಳೆ. ಹನುಮಂತನು ಸೀತೆಯನ್ನು ಹುಡುಕಿಕೊಂಡು ಲಂಕೆಗೆ ಬಂದು ಅಶೋಕವನದಲ್ಲಿ ಸೀತೆಯನ್ನು ಕಾಣುತ್ತಾನೆ. ಅವಳೇ ಸೀತೆಯೆಂದು ನಿರ್ಧರಿಸುವ ಹೊತ್ತಿಗೆ ರಾವಣನ ಆಗಮನವಾಗುತ್ತದೆ. ರಾವಣನ ಮಾತುಗಳನ್ನು ಪದೇ ಪದೇ ಕೇಳಿ ದುಃಖಿತಳಾದ ಸೀತೆ ನಡುವೆ ಒಂದು ಹುಲ್ಲುಕಡ್ಡಿಯನ್ನಿಟ್ಟು ಅದಕ್ಕೆ ಉತ್ತರಿಸುತ್ತಿರುವಂತೆ ರಾವಣನಿಗೆ ಬುದ್ಧಿಯನ್ನು ಹೇಳುತ್ತಾಳೆ. ದುರ್ಬುದ್ಧಿಯನ್ನು ಬಿಡು ಉತ್ತಮ ಕುಲದಲ್ಲಿ ಹುಟ್ಟಿ ಉತ್ತಮ ಕುಲಕ್ಕೆ ಸೇರಿದವಳು ನಾನು ಪರಸ್ತ್ರೀಯಾದ್ದರಿಂದ ನಿನಗೆ ಯೋಗ್ಯಳಲ್ಲ. ಇಂದ್ರಿಯ ಚಾಪಲ್ಯದಿಂದ ಪರಸ್ತ್ರೀಯರನ್ನು ಕೆಣಕುವ ಬುದ್ಧಿಹೀನನಿಗೆ ಕೇಡು ತಪ್ಪಿದ್ದಲ್ಲ. ನಿನ್ನೊಬ್ಬನ ತಪ್ಪಿನಿಂದ ಈ ಲಂಕಾನಗರವೇ ನಾಶವಾಗುತ್ತದೆ. ವಿದ್ವಾಂಸನಿಗೆ ವಿದ್ಯೆ ಇರುವಂತೆ, ನಾನು ರಾಮನಿಗೆ ಧರ್ಮಪತ್ನಿಯಾಗಿದ್ದೇನೆ ಎನ್ನುತ್ತ ಅನೇಕ ವಿಧಗಳಿಂದ ಬುದ್ಧಿ ಹೇಳಿದಳು. ಆಶ್ರಮದಲ್ಲಿ ರಾಮಲಕ್ಷ್ಮಣರಿರುವ ಸುಳಿವು ಇದ್ದಿದ್ದರೆ ನೀನು ಬರುತ್ತಿದ್ದೆಯಾ ಹುಲಿಗಳ ವಾಸನೆ ಇದ್ದಲ್ಲಿಗೆ ನಾಯಿ ಬಂದೀತೆ? ಎನ್ನುವ ಮಾತುಗಳನ್ನಾಡುತ್ತಾಳೆ. ಕೋಪಗೊಂಡ ರಾವಣನು ಕ್ರೂರವಾದ ಮಾತುಗಳನ್ನಾಡಿ ಎಚ್ಚರಿಕೆ ನೀಡುತ್ತಾನೆ.[೬೯]

'ನಾನು ಕೊಟ್ಟಿದ್ದ ಒಂದು ವರ್ಷದ ಅವಧಿಯಲ್ಲಿ ಇನ್ನು ಎರಡು ತಿಂಗಳು ಮಾತ್ರ ಉಳಿದಿವೆ. ಅಷ್ಟರಲ್ಲಿ ನೀನು ನನ್ನ ಹಾಸಿಗೆಯನ್ನು ಏರಲೇಬೇಕು. ಎರಡು ತಿಂಗಳ ಮೇಲೂ ನನ್ನನ್ನು ಗಂಡನೆಂದು ಒಪ್ಪದಿದ್ದರೆ ಅಡಿಗೆ ಮನೆಯಲ್ಲಿ ಬೆಳಗಿನ ಊಟವನ್ನು ಸಿದ್ಧಪಡಿಸುವುದಕ್ಕಾಗಿ ನಿನ್ನನ್ನು ಕತ್ತರಿಸಿ ಹಾಕುತ್ತಾರೆ' ಎನ್ನುತ್ತಾನೆ. ಸೀತೆಯು[೭೦] ಧೈರ್ಯದಿಂದ ಉತ್ತರಿಸುತ್ತ 'ಮಹಾತೇಜಸ್ವಿಯಾದ ಶ್ರೀರಾಮನ ಪತ್ನಿಗೆ ಇಂತಹ ತುಚ್ಛವಾದ ಮಾತನಾಡಿದೆಯಾ? ಶ್ರೀರಾಮನೆಂದರೆ ಮದಿಸಿದ ಒಂದು ಮಹಾಗಜ, ಅವನೆದುರಿಗೆ ನೀನು ಒಂದು ಚಿಕ್ಕ ಮೊಲ! ಅಯೋಗ್ಯ! ನನ್ನನ್ನು ಹೀಗೆ ದಿಟ್ಟಿಸಿನೋಡುತ್ತಿರುವ ನಿನ್ನ ಈ ವಿಕಾರವಾದ

ಕೆಂಗಣ್ಣುಗಳು ಸಿಡಿದು ಬಿದ್ದು ಹೋಗಬಾರದೇ? ನಿನ್ನ ನಾಲಿಗೆ ಸೀಳಿಹೋಗಬಾರದೆ? ನನ್ನ ತೇಜಸ್ಸಿನಿಂದಲೇ ನಿನ್ನನ್ನು ಸುಟ್ಟು ಬೂದಿ ಮಾಡಬಲ್ಲೆನು. ಆದರೆ ಶ್ರೀರಾಮನು ಅನುಮತಿ ಕೊಟ್ಟಿಲ್ಲವೆಂದೂ, ತಪಃಶಕ್ತಿಯು ವ್ಯರ್ಥವಾಗುವುದೆಂದೂ ಸುಮ್ಮನಿದ್ದೇನೆ. ನನ್ನನ್ನು ಕಳ್ಳತನದಿಂದ ತಂದದ್ದೇಕೆ?' ಎಂದಳು. ರಾವಣನು[೫೧] 'ಎಲೆ, ನೀತಿ ಭ್ರಷ್ಟನಾದ ಆ ದರಿದ್ರನನ್ನು ನಂಬಿರುವೆಯಾ? ಸೂರ್ಯನು ಸಂಧ್ಯಾಕಾಲದ ಕತ್ತಲೆಯನ್ನು ನಾಶಮಾಡುವಂತೆ ನಿನ್ನನ್ನು ಈಗಲೇ ಧ್ವಂಸ ಮಾಡಿಬಿಡುತ್ತೇನೆ' ಎನ್ನುತ್ತಾನೆ. ಹಾಗೇ ಅಲ್ಲಿದ್ದ ರಾಕ್ಷಸಿಯರಿಗೆ ನೀವೆಲ್ಲರೂ ಸೇರಿ ಸೀತೆಯು ನನ್ನ ವಶವಾಗುವಂತೆ ಪ್ರಯತ್ನಿಸಿ. ಸಾಮದಾನ ಭೇದೋಪಾಯಗಳನ್ನು ಉಪಯೋಗಿಸಿರಿ. ದಂಡೋಪಾಯವನ್ನೂ ನೀವು ಕೈಗೊಳ್ಳಬಹುದು' ಎಂದು ಆಜ್ಞಾಪಿಸುತ್ತಾನೆ. ಅದರಂತೆ ರಾಕ್ಷಸಿಯರು ಹೆದರಿಸುತ್ತಿರಲು ಸೀತೆಯು ಹಲುಬುತ್ತಾ 'ಹೆಂಗಸಾಗಲಿ,[೫೨] ಗಂಡಸಾಗಲಿ ಕಾಲವು ಒದಗಿಬಂದ ಹೊರತು ಸಾಯುವುದಿಲ್ಲ' ಎಂಬ ಹೇಳಿಕೆ ಸತ್ಯವಾದದ್ದು, 'ಅಯ್ಯೋ, ಈ ಮನುಷ್ಯ ಜನ್ಮಕ್ಕೆ ಧಿಕ್ಕಾರ! ಈ ಪರಾಧೀನತೆಗೆ ಧಿಕ್ಕಾರ!' ಎಂದು ಗೋಳಾಡಿದಳು. ರಾವಣನು ಹೋದ ನಂತರ ಶ್ರೀರಾಮನು ತನ್ನನ್ನು ಬಿಡಿಸಿಕೊಂಡು ಹೋಗದಿರಲು ಕಾರಣವೇನೆಂದು ನಾನಾ ವಿಧದಲ್ಲಿ ಚಿಂತಿಸಿದಳು. 'ರಾವಣನು[೫೩] ವಿಧಿಸಿದ ಕಾಲವು ಮುಗಿಯುತ್ತಾ ಬಂದಿದೆ. ಆಮೇಲೆ ಈ ದುಷ್ಟನು ನನಗೆ ಮರಣವನ್ನು ವಿಧಿಸಿದ್ದಾನೆ. ಪ್ರಾತಃಕಾಲದಲ್ಲಿ ನನ್ನನ್ನು ಕತ್ತರಿಸಿ ಅಡಿಗೆ ಮಾಡಿಸುವನು. ಯಾರಾದರೂ ವಿಷವನ್ನು ತಂದುಕೊಟ್ಟಿದ್ದರೆ, ಯಮಲೋಕವನ್ನು ಸೇರಿಕೊಳ್ಳುತ್ತಿದ್ದೆನು. ರಾಮಲಕ್ಷ್ಮಣರಿಗೆ ನಾನು ಇಲ್ಲಿ ಜೀವಿಸಿದ್ದೇನೆಂದು ತಿಳಿದಿರಲಿಕ್ಕಿಲ್ಲ ಎಂದುಕೊಳ್ಳುತ್ತಾಳೆ.

ರಾವಣನ ಕಠೋರ ಮಾತುಗಳನ್ನು ಕೇಳಿದಾಗಿನಿಂದ ಸೀತೆಯಲ್ಲಿ ವಿಪರೀತವಾದ ಭಯವುಂಟಾಗಿ ತಲ್ಲಣಿಸುತ್ತಿದ್ದಳು. 'ಮೃತ್ಯುವೇ[೫೪] ಜಿಂಕೆಯ ರೂಪದಿಂದ ಬಂದು ಭಾಗ್ಯಹೀನಳಾದ ನನಗೆ ಆಸೆಯನ್ನು ಹುಟ್ಟಿಸಿರಬೇಕು. ಮೂಢೆಯಾದ ನಾನು ರಾಮನನ್ನು ಕಳುಸಿದ್ದಲ್ಲದೆ, ಲಕ್ಷ್ಮಣನನ್ನೂ ಕಳುಸಿಬಿಟ್ಟೆನು. ನಾನು ಆಚರಿಸಿದ ಧರ್ಮವೂ ಪಾತಿವ್ರತ್ಯವೂ ಫಲವನ್ನು ಕೊಡಲಿಲ್ಲ. ಪುನಃ ರಾಮನೊಡನೆ ಸಮಾಗಮವಾಗುತ್ತದೆಯೆಂಬುದರಲ್ಲಿ ನಿರಾಶಳಾಗಿದ್ದೇನೆ. ಹಾ! ರಾಮ, ನೀನು ಪಿತೃವಾಕ್ಯವನ್ನು ಪರಿಪಾಲಿಸಿ, ಅರಣ್ಯವಾಸದಿಂದ ಹಿಂದಿರುಗಿ, ಸುಂದರಿಯಾದ ಸ್ತ್ರೀಯರೊಡನೆ ವಿಹರಿಸಬಹುದು! 'ನಾನಾದರೋ[೫೫] ನಿನ್ನಲ್ಲಿಯೇ ಅನುರಾಗವನ್ನಿಟ್ಟು, ತಪೋನಿಯಮಗಳನ್ನಾಚರಿಸಿ ಪ್ರಾಣವನ್ನು ಬಿಡುತ್ತಿದ್ದೇನೆ. ಎಲ್ಲವೂ ನಿಷ್ಫಲವಾಯಿತು. ಮಂದಭಾಗ್ಯಳಾದ ನನಗೆ ಧಿಕ್ಕಾರ! ನಾನು ಆತ್ಮಹತ್ಯೆ ಮಾಡಿಕೊಳ್ಳುವುದೇ ಲೇಸು. ಆದರೆ ಇಲ್ಲಿ ವಿಷವನ್ನಾಗಲಿ, ಶಸ್ತ್ರವನ್ನಾಗಲೀ ನನಗೆ ಕೊಡುವವರು ಯಾರು?' ಎಂದು ಅನೇಕ ಬಗೆಯಲ್ಲಿ ಚಿಂತಿಸಿ ಕೊನೆಗೆ ತನ್ನ ನೀಳವಾದ ಕೂದಲನ್ನು ಕೈಯಲ್ಲಿ ಹಿಡಿದು 'ಇದರಿಂದ ನೇಣುಹಾಕಿಕೊಂಡು ಶೀಘ್ರದಲ್ಲಿಯೇ ಯಮನ ಬಳಿಗೆ ಹೋಗುವೆನು' ಎಂದು ಆಲೋಚಿಸಿದಳು.

ಹನುಮಂತನು ಸೀತೆಯನ್ನು ಕಂಡಾಗ ಒಂದೇ ಬಾರಿಗೆ ಆಕೆಯ ಮುಂದೆ ಹೋಗಲಿಚ್ಛಿಸದೆ ಮೆಲ್ಲಗೆ ಅವಳಿಗೆ ಕೇಳುವಂತೆ ರಾಮವೃತ್ತಾಂತವನ್ನು ಹೇಳುತ್ತಾನೆ. ಸೀತೆಗೆ ವಿಶ್ವಾಸ ಬಂದ ನಂತರ ಸೀತೆಯನ್ನು

ನೀನು ಯಾರೆಂದು ಕೇಳುತ್ತಾನೆ. ಆಗ ಸೀತೆಯು ತನ್ನ ವೃತ್ತಾಂತವನ್ನು ಅರುಹುತ್ತಾಳೆ. ಆಗ ಹನುಮಂತನು ತಾನು ರಾಮದೂತನೆಂದು ತಿಳಿಸಿ ರಾಮನ ಸಂದೇಶವನ್ನು ಹೇಳುತ್ತಾನೆ. ಆಗ ಸೀತೆಯು[೫೬] "ಆಹಾ! ಮನುಷ್ಯನು ಸಾಯದೆ ಬದುಕಿದ್ದರೆ, ನೂರು ವರ್ಷಗಳಿಗಾದರೂ ಒಮ್ಮೆ ಸುಖದ ದಿನವನ್ನು ಕಾಣುತ್ತಾನೆ ಎಂಬ ಹೇಳಿಕೆ ಸತ್ಯವಾಗಿಯೇ ತೋರುತ್ತದೆ!" ಎಂದಳು. ಸೀತೆ ಹನುಮಂತ ಇಬ್ಬರಿಗೂ ಪರಸ್ಪರ ನಂಬಿಕೆ ಬಂದಮೇಲೆ ಮಾತನಾಡತೊಡಗಿದರು. ಸೀತೆಯ ಮಾತನ್ನು ಕೇಳುತ್ತ ಹನುಮಂತನು ಮೆಲ್ಲಮೆಲ್ಲಗೆ ಅವಳ ಸಮೀಪಕ್ಕೆ ಬರತೊಡಗಿದನು. ಅವನು[೫೭] ಮುಂದೆ ಬಂದ ಹಾಗೆ, ಅವನು ರಾವಣನಿರಬಹುದೆಂದು ಸೀತೆಗೆ ಭಯವಾಯಿತು. 'ಅಯ್ಯೋ, ನನ್ನ ಪಾಪಕರ್ಮವೇ! ಇವನೊಡನೆ ಮಾತನಾಡಿದ್ದು ತಪ್ಪಾಯಿತು. ಅದೇ ರಾವಣನೇ ಈ ವೇಷದಿಂದ ಬಂದಿದ್ದಾನೆ! ಎಂದು ಕೊಳ್ಳುತ್ತ ತಾನು ಹಿಡಿದಿದ್ದ ಅಶೋಕವೃಕ್ಷದ ಕೊಂಬೆಯನ್ನು ಬಿಟ್ಟು ದುಃಖದಿಂದ ನೆಲದ ಮೇಲೆ ಕುಸಿದು ಹೋದಳು. ನಂತರ ಹನುಮಂತನು ನಾನಾ ವಿಧದಲ್ಲಿ ಸೀತೆಯನ್ನು ಸಮಾಧಾನಪಡಿಸಿದನು.

ಹನುಮಂತನು ಸೀತೆಯನ್ನು ತನ್ನ ಭುಜದ ಮೇಲೆ ಕುಳಿತು ರಾಮನ ಬಳಿಗೆ ಬರುವಂತೆ ಕೇಳುತ್ತಾನೆ. ಅದಕ್ಕೆ ಸೀತೆಯು ಒಪ್ಪದೆ ರಾಮನೇ ಇಲ್ಲಿಗೆ ಬಂದು ರಾವಣನನ್ನು ಸಂಹರಿಸಿ ತನ್ನನ್ನು ಕರೆದೊಯ್ಯುವುದು ಯುಕ್ತವೆಂದು ಹೇಳುತ್ತಾಳೆ. ಹನುಮಂತನು[೫೮] ನನ್ನೊಡನೆ ಬರಲು ನಿನಗೆ ಸಮ್ಮತಿಯಿಲ್ಲದಿದ್ದರೆ ನಾನು ನಿನ್ನನ್ನು ನೋಡಿ ಬಂದ ವಿಷಯದಲ್ಲಿ ನಂಬಿಕೆಯಾಗುವಂತೆ ಏನಾದರೂ ಒಂದು ಗುರುತನ್ನು ಕೊಡು ಎಂದು ಹೇಳುತ್ತಾನೆ. ಸೀತೆಯ ರಾಮನೊಡನೆ ಇರುವಾಗ ನಡೆದ ಒಂದು ಪ್ರಸಂಗವನ್ನು ಹೇಳಿ ರಾಮನು ನನಗಾಗಿ ಒಂದು ಕಾಗೆಯ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಈಗ ನಿನ್ನನ್ನು ವಂಚಿಸಿ ನನ್ನನ್ನು ಕದ್ದು ತಂದವನನ್ನು ಕ್ಷಮಿಸುವುದಾದರೂ ಏಕೆ? ಎಂದಳು. ಒಂದು ಅಮೂಲ್ಯವಾದ ಚೂಡಾಮಣಿಯನ್ನು ಪಡೆದನು. 'ಕಪಿ ಶ್ರೇಷ್ಠನೆ,[೫೯] ಸಸಿಗಳು ಅರ್ಧ ಬೆಳೆದು ನಿಂತಿರುವಾಗ ಒಣಗುತ್ತಿರುವ ಭೂಮಿಗೆ ಮಳೆಯು ಬಂದು ಉಲ್ಲಾಸವಾಗುವಂತೆ, ನಿನ್ನ ಮಾತನ್ನು ಕೇಳಿ ನನಗೆ ಉಲ್ಲಾಸವಾಯಿತು' ಎನ್ನುತ್ತಾಳೆ.

ಮುಂದೆ ಸೀತೆಯನ್ನು ಹೆದರಿಸಲು ವಿದ್ಯುಜ್ಜಿಹ್ವನು ರಾಮನ ಮಾಯಾಶಿರವನ್ನು ತಂದು ಅವಳ ಮುಂದಿಡುತ್ತಾನೆ. ಅದನ್ನು ಕಂಡು ಸೀತೆಯು ಪರಿಪರಿಯಾಗಿ ರೋಧಿಸುತ್ತಾಳೆ. 'ರಾವಣ,[೬೦] ಈಗಲಾದರೂ ನನ್ನನ್ನು ಕಡಿದು ಶ್ರೀರಾಮನ ದೇಹದ ಮೇಲೆ ಉರುಳಿಸಿಬಿಡು! ಪತಿಪತ್ನಿಯರನ್ನು ಒಟ್ಟುಗೂಡಿಸಿ ಒಂದು ಪುಣ್ಯಕಾರ್ಯವನ್ನು ಮಾಡು! ನನ್ನ ಶಿರಸ್ಸನ್ನು ಶ್ರೀರಾಮನ ಶಿರಸ್ಸಿನೊಡನೆಯೂ ದೇಹವನ್ನು ದೇಹದೊಡನೆಯೂ ಸೇರಿಸಿಬಿಡು! ರಾವಣ, ಮಹಾತ್ಮನಾದ ನನ್ನ ಪತಿಯನ್ನು ಹಿಂಬಾಲಿಸುವೆನು' ಎಂಬುದಾಗಿ ದುಃಖಾತಿರೇಕದಿಂದ ಕಂಗೆಟ್ಟು ಸೀತೆಯು ಪತಿಯ ಶಿರಸ್ಸನ್ನೂ ಧನಸ್ಸನ್ನೂ ಮತ್ತೆ ಮತ್ತೆ, ನೋಡಿ ನೋಡಿ, ಹಲುಬುತ್ತಾ ಗೋಳಾಡಿದಳು.

ರಾಮನ ಮಾಯಾಶಿರವನ್ನು ಕಂಡು ಸೀತೆಯು ಭ್ರಾಂತಿಯಿಂದ ದುಃಖಿಸುತ್ತಿದ್ದ ವೈದೇಹಿಯನ್ನು ಕಂಡು ಒಬ್ಬ ರಾಕ್ಷಸಿಯು ಬಂದಳು. ಈಕೆಗೆ ಸೀತೆಯು ಅತ್ಯಂತ ಪ್ರಿಯಳಾದ ಸಖಿಯಾಗಿದ್ದಳು. ಈಕೆಯ ಹೆಸರು ಸುರಮೆ.[೬೧] ಇವಳು ಸೀತೆಯನ್ನು ಸಂತೈಸುತ್ತಾಳೆ. ನೀನು ಅಂಜುಬುರುಕಿ! ರಾಮನು ಮಲಗಿದಾಗ ಕೊಲ್ಲುವುದೆಂದರೆ ಸಾಧ್ಯವೇ ಇಲ್ಲ. ಶ್ರೀರಾಮನು ಕ್ಷೇಮವಾಗಿದ್ದಾನೆ; ಮೃತನಾಗಿಲ್ಲ, ನೀನು ನೋಡಿದುದೆಲ್ಲವೂ ಮಾಯೆ. ಒಂದು ಪ್ರಿಯವಾದ ಸುದ್ದಿಯನ್ನು ಕೇಳು! ಶ್ರೀರಾಮನು ವಾನರಸೇನೆಯೊಡನೆ ಸಮುದ್ರವನ್ನು ದಾಟಿ ಬಂದಿದ್ದಾನೆ' ಎನ್ನುವ ಸುದ್ದಿಯನ್ನು ಹೇಳುತ್ತಾಳೆ. 'ಸೀತೆ,[೬೨] ನೀನು ಸಂದೇಶವನ್ನಿತ್ತರೆ ನಾನು ಯಾರಿಗೂ ಕಾಣದಂತೆ ಶ್ರೀರಾಮನ ಬಳಿಗೆ ಹೋಗಿ ನಿನ್ನ ಕುಶಲವಾರ್ತೆಯನ್ನು ಮುಟ್ಟಿಸಿ ಬರಬಲ್ಲೆನು' ಎನ್ನುತ್ತಾಳೆ. ಅದಕ್ಕೆ ಸೀತೆಯು[೬೩] 'ಸರಮೆ, ನೀನು ಗಗನವನ್ನಾದರೂ ಅಡರಬಲ್ಲೆ, ಪಾತಾಳವನ್ನಾದರೂ ಹೋಕ್ಕಬಲ್ಲೆ, ಆದರೆ ನನಗೋಸ್ಕರ ಈಗ ನೀನು ಮಾಡಬೇಕಾದ ಕೃತ್ಯವು ಇದು; ನನಗೆ ಪ್ರಿಯವಾದುದನ್ನು ಮಾಡಬೇಕೆಂದಿದ್ದರೆ, ಈ ವಿಷಯದಲ್ಲಿ ನಿನ್ನ ಬುದ್ಧಿಯು ದೃಢವಾಗಿದ್ದರೆ, ರಾವಣನು ಏನು ಮಾಡುತ್ತಿರುವನೆಂಬುದನ್ನು ತಿಳಿದು ಬರಬೇಕಾಗಿ ನನ್ನ ಅಪೇಕ್ಷೆ' ಅನ್ನುತ್ತಾಳೆ.

ಹಿಂದುರಿಗಿ ಬಂದ ಸರಮೆಯು 'ರಾವಣನು[೬೪] ನಾನು ಬದುಕಿರುವವರೆಗೆ ಸೀತೆಯನ್ನು ಬಿಡುವುದಿಲ್ಲ' ಎಂದು ನಿಶ್ಚಯಿಸಿಕೊಂಡಿದ್ದಾನೆ ಎಂದು ಹೇಳುತ್ತಾಳೆ. ಸಮಸ್ತ ರಾಕ್ಷಸರನ್ನೂ ತನ್ನನ್ನೂ ವಧಿಸಿದ ಮೇಲೆಯೇ ಸೀತೆಯ ಬಿಡುಗಡೆ ಎಂಬ ಛಲದಲ್ಲಿದ್ದಾನೆ; ಆದ್ದರಿಂದ ಸೀತೆಯೇ ಚಿಂತಿಸದಿರು, ಶ್ರೀರಾಮನು ರಣಮಧ್ಯದಲ್ಲಿ ನಿಶಿತಾಸ್ತ್ರಗಳಿಂದ ರಾವಣನನ್ನು ವಧಿಸಿ, ನಿನ್ನನ್ನು ಅಯೋಧ್ಯೆಗೆ ಕರೆದೊಯ್ಯುವನು' ಎನ್ನುತ್ತಾಳೆ.

ಮುಂದೆ ಯುದ್ಧದಲ್ಲಿ ಇಂದ್ರಜಿತುವು ರಾಮಲಕ್ಷ್ಮಣರನ್ನು ಸರ್ಪಾಸ್ತ್ರಬಂಧನದಿಂದ ನಿಶ್ಚೇಷ್ಟರನ್ನಾಗಿಯೂ, ನಿಸ್ತೇಜರನ್ನಾಗಿಯೂ ಮಾಡಿದ್ದೇನೆಂದು ತಂದೆ ರಾವಣನಿಗೆ ತಿಳಿಸುತ್ತಾನೆ. ಸುಪ್ರೀತನಾದ ರಾವಣನು ಸೀತೆಯ ಕಾವಲುಗಾರರಾಗಿದ್ದ ರಾಕ್ಷಸಿಯರನ್ನು ಬರುವಂತೆ ತಿಳಿಸುತ್ತಾನೆ. ಅವರಿಗೆ 'ರಾಕ್ಷಸಿಯರೇ,[೬೫] ರಾಮಲಕ್ಷ್ಮಣರನ್ನು ಇಂದ್ರಜಿತುವು ಕೊಂದುಹಾಕಿರುವನೆಂದು ವೈದೇಹಿಗೆ ತಿಳಿಸಿರಿ! ಆಕೆಯನ್ನು ಪುಷ್ಪಕವಿಮಾನದಲ್ಲಿ ಕರೆದೊಯ್ದು, ರಣರಂಗದಲ್ಲಿ ಸತ್ತುಬಿದ್ದಿರುವ ಅವರನ್ನು ತೋರಿಸಿರಿ! ಅವಳ ಆಸೆಯು ಮಣ್ಣು ಪಾಲಾಗುವುದು. ಆಶೋತ್ತರವನ್ನು ತೊರೆದು ಆ ವಿಶಾಲಾಕ್ಷಿಯು ಬೇರೊಂದು ಗತಿಯನ್ನು ಕಾಣದೆ ತಾನಾಗಿಯೇ ನನ್ನ ಬಳಿ ಬರುವಳು' ಎಂದು ಹೇಳಿದನು. ಅದರಂತೆ ಅವರು ಕರೆದೊಯ್ದರು. ಮೂರ್ಛಿತರಾಗಿದ್ದ ರಾಮಲಕ್ಷ್ಮಣರನ್ನು ಕಂಡು ಗೋಳಿಡುತ್ತಾಳೆ ಜೊತೆಯಲ್ಲಿದ್ದ ವೈದೇಹಿಯು ಅವಳನ್ನು ಸಂತೈಸುತ್ತಾ ಅವರಿಬ್ಬರೂ ಸತ್ತಿಲ್ಲವೆಂಬ ವಿಚಾರವನ್ನು ಹೇಳುತ್ತಾಳೆ.

ಮುಂದೆ ಇಂದ್ರಜಿತುವು ಮಾಯಾಸೀತೆಯನ್ನು[೬೬] ತನ್ನ ರಥದಲ್ಲಿ ತಂದು ವಾನರರೆದುರು ಸೀತೆಯ ತುರುಬನ್ನು ತುಡುಕಿದನು. ಹನುಮಂತನು ಉಳಿದ ವಾನರರಿಗೆ ಅವಳೇ ಸೀತೆಯೆಂದು ತಿಳಿಸಿದನು.

ಸೀತೆಯು 'ರಾಮ! ರಾಮ!' ಎಂದು ಕೂಗಿಕೊಳ್ಳುತ್ತಿರುವಾಗ ಇಂದ್ರಜಿತುವು ಅವಳನ್ನು ಹೊಡೆದನು! ಹನುಮಂತನು, ಸ್ತ್ರೀ ಘಾತುಕರಿಗೆ ಪ್ರಾಪ್ತವಾಗುವ ನರಕವು ಲೋಕದಲಿ ವಧ್ಯರಾದ ಕೊಲೆಗಡುಕರಿಗೂ ಬೇಡವಾದದ್ದು' ಎಂದು ಹೇಳುತ್ತಾನೆ. ಆಗ ಇಂದ್ರಜಿತುವು ಹನುಮಂತನನ್ನು ಕುರಿತು 'ಸುಗ್ರೀವನೂ, ನೀನೂ, ರಾಮನೂ ಯಾರಿಗೋಸ್ಕರ ಇಲ್ಲಿಗೆ ಬಂದಿದ್ದಿರೋ ಆ ಸೀತೆಯನ್ನು ಈಗಲೇ ನಿನ್ನೆದುರಿಗೇ ಕೊಂದಹಾಕುವೆನು! ಎನ್ನುತ್ತ ಅನಾಥೆಯಾಗಿ ಗೋಳಿಡುತ್ತಿದ್ದ ಮಾಯಾ ನಿರ್ಮಿತಳಾದ ಸೀತೆಯನ್ನು ಎಡಹೆಗಲಿನ ಮೇಲೆ ಹೊಡೆದು ಜನಿವಾರದ ಆಕಾರದಲ್ಲಿ ಉದ್ದವಾಗಿ ಸೀಳಿಬಿಟ್ಟನು! ಸುಂದರಾಕೃತಿಯ ಮಾಯಾಂಗನೆಯು ನೆಲದಲ್ಲಿ ಸತ್ತುಬಿದ್ದಳು. ಈ ವೃತ್ತಾಂತವನ್ನು ತಿಳಿದ ರಾಮನು ದುಃಖಿಸಿದನು, ಲಕ್ಷ್ಮಣನು ಅಣ್ಣನನ್ನು ಸಂತೈಸಿದನು. ಆಗ ವಿಭೀಷಣನು ಇದೆಲ್ಲವೂ ಇಂದ್ರಜಿತುವಿನ ಮಾಯಾಜಾಲವೆಂದು ತಿಳಿಸುತ್ತಾನೆ.

ಇಂದ್ರಜಿತುವು ಯುದ್ಧದಲ್ಲಿ ಹತನಾಗಲು ರಾವಣನು ರೋಷಾವಿಷ್ಟನಾದನು. ಇದಕ್ಕೆಲ್ಲ ಕಾರಣಳಾದವಳು ಸೀತೆ, 'ಇಂದ್ರಜಿತುವು ಮಾಯಾಸೀತೆಯನ್ನು ಕೊಂದು ಶತ್ರುಗಳಿಗೆ ಅವಳೇ ಸೀತೆ ಎಂಬಂತೆ ತೋರಿಸಿದನು. ಅದನ್ನೀಗ ಸತ್ಯವನ್ನಾಗಿಯೇ ಮಾಡುವೆನು. ಅದೇ ನನಗೆ ಪ್ರಿಯವಾದುದು! ಆ ಕ್ಷತ್ರಿಯ ನೀಚನನ್ನೇ ನಂಬಿದ ಸೀತೆಯನ್ನು ಕೊಂದುಹಾಕುವೆನು!' ಎಂದು ಅಶೋಕವನದೆಡೆಗೆ ಧಾವಿಸಿದನು. ರಾವಣನು ಖಡ್ಗಧಾರಿಯಾಗಿರುವುದನ್ನೂ ಆಪ್ತಜನರು ತಡೆಯುತ್ತಿದ್ದರೂ ಅವರನ್ನು ತಳ್ಳಿಕೊಂಡು ಅವನು ನುಗ್ಗಿ ಬರುವುದನ್ನೂ ಕಂಡು ಜಾನಕಿಯೂ ಗಾಬರಿಯಾದಳು. ರಾವಣನ ಉದ್ದೇಶವೇನಿರಬಹುದೆಂಬುದನ್ನೂ ಊಹಿಸಿ, ಅವಳು ದುಃಖಾರ್ತಳಾಗಿ ವಿಲಪಿಸತೊಡಗಿದಳು. 'ಆ ದುಷ್ಟನು ಸಿಟ್ಟಿನ ರಭಸದಿಂದ ನುಗ್ಗಿಬರುವುದನ್ನು ನೋಡಿದರೆ ನನ್ನನ್ನು ಅವನು ವಧಿಸುವನೆಂದು ತೋರುತ್ತದೆ! ನನ್ನ ನಾಥನು ಇಷ್ಟು ಹತ್ತಿರದಲ್ಲಿದ್ದರೂ ಅನಾಥೆಯಂತೆ ನಾನು ಹತಳಾಗುವೆನು. ನನ್ನ ಪತಿಯನ್ನೇ ದೃಢವಾಗಿ ನಂಬಿರುವ ನನಗೆ ಈ ರಾವಣನು ನನ್ನ ಮಡದಿಯಾಗು, ಉಲ್ಲಾಸದಿಂದ ನಲಿಯುತ್ತಿರು! ಎಂದು ಎಷ್ಟು ಸಲ ಹೇಳಲಿಲ್ಲ? ನಾನಂತೂ ಇವನನ್ನು ಧಿಕ್ಕರಿಸಿಬಿಟ್ಟಿದ್ದೇನೆ. ನಾನು ಈತನ ಕೋರಿಕೆಗೆ ಒಪ್ಪಲಿಲ್ಲವಾದ್ದರಿಂದ ಈತನಿಗೆ ಪೂರ್ಣ ನಿರಾಸೆಯಾಗಿದೆ. ಕ್ರೋಧ ಮೋಹಗಳಿಂದ ಆವಿಷ್ಟನಾಗಿ ಈ ರಾವಣನು ನನ್ನನ್ನೂ ಕೊಲ್ಲಲು ಬರುತ್ತಿದ್ದಾನೆ. ಅಥವಾ ಈ ಅನಾರ್ಯನು ಪುರುಷೋತ್ತಮರಾದ ರಾಮಲಕ್ಷ್ಮಣರನ್ನು ಯುದ್ಧದಲ್ಲಿ ಸಂಹರಿಸಿರಬಹುದೇ? ಅಯ್ಯೋ! ನನ್ನ ಬಾಳಿಗೆ ಧಿಕ್ಕಾರ! ನನಗೋಸ್ಕರ ಆ ರಾಜಪುತ್ರರು ಹತರಾಗಬೇಕಾಯಿತೇ? ಇಲ್ಲದಿದ್ದರೆ, ತನ್ನ ಮಗನು ಹತನಾದನೆಂಬ ಶೋಕಾವೇಶದಲ್ಲಿ ನನ್ನನ್ನು ಕೊಲ್ಲಬೇಕೆಂದು ಕ್ರೂರ ರಾಕ್ಷಸನು ಬರುತ್ತಿರಬಹುದೇ? ರಾಮಲಕ್ಷ್ಮಣರನ್ನು ಎದುರಿಸುವ ಸಾಮರ್ಥ್ಯವಿಲ್ಲದೆ ಈ ಪಾಪಿಯು ನನ್ನನ್ನು ಸಂಹರಿಸುವನು! ಅಯ್ಯೋ, ಅವಿವೇಕಿಯಾದ ನಾನು ಹನುಮಂತನ ಮಾತಿನಂತೆಯೂ ನಡೆಯಲಿಲ್ಲ. ಅವನ ಹೆಗಲ ಮೇಲೆ ಕುಳಿತು ನನ್ನ ಪತಿಯ ಬಳಿಗೆ ಹೋಗಿಬಿಟ್ಟಿದ್ದರೆ ಈ ಕಷ್ಟ ಬರುತ್ತಿರಲಿಲ್ಲ. ಯಾರೂ ನನ್ನನ್ನು ನಿಂದಿಸುತ್ತಿರಲಿಲ್ಲ. ನನ್ನ ಪತಿಯ ಸನ್ನಿಧಿಯಲ್ಲಿ ಇರುತ್ತಿದ್ದೆ. ಈ ದಿನ ಹೀಗೆ ಶೋಕಿಸಬೇಕಾಗಿರಲಿಲ್ಲ' ಎಂದು ಶೋಕಿಸಿದಳು.

**ಧಿಗಸ್ತು ಕುಬ್ಜಾಮಸತೀಂ ಮಂಥರಾಂ ಪಾಪನಿಶ್ಚಯಾಮ್ ।**

**ಯನ್ನಿಮಿತ್ತಮಿದಂ ದುಃಖಂ ಕೌಸಲ್ಯಾ ಪ್ರತಿಪತ್ಸ್ಯತೇ[20] ॥**

'ಪಾಪಿಯಾದ ಮಂಥರೆಗೆ ಧಿಕ್ಕಾರ! ಆ ಕೆಟ್ಟ ಗೂನಿಯನ್ನು ಈಗ ನಿಂದಿಸಬೇಕಾಗಿದೆ. ಅವಳಿಂದಲೇ ಕೌಸಲ್ಯೆಗೆ ಇಂತಹ ಸಂಕಟವು ಬಂದೊದಗುವುದು' ಎಂದು ಹಲುಬಿದಳು.

'ಯುದ್ಧದಲ್ಲಿ ಜಯವಾಯಿತೆಂಬ ವಿಜಯವಾರ್ತೆಯನ್ನು ತಲುಪಸಿ ತನ್ನ ಸಂದೇಶವನ್ನು ಕೂಡ ತಲುಪಿಸಬೇಕೆಂದು ರಾಮನು ಹನುಮಂತನನ್ನು ಕಳುಹಿಸುತ್ತಾನೆ. ಹನುಮಂತನ ಸಂದೇಶವನ್ನು ಕೇಳಿದ ಸೀತೆಯು ಆನಂದಭರಿತಳಾದಳು. ಮಾತೇ ಹೊರಡದಂತಾಯಿತು. ಇಷ್ಟು ಸಂತೋಷದ ಸುದ್ದಿಯನ್ನು ತಂದ ಹನುಮಂತನಿಗೆ ಏನಾದರೂ ಪಾರಿತೋಷಕ ಕೊಡಲಪೇಕ್ಷಿಸಿದಳಾದರೂ ತನ್ನ ಬಳಿ ಯಾವ ವಸ್ತುವೂ ಇಲ್ಲದಿರುವುದರ ಬಗ್ಗೆ ಖೇದವಾಯಿತು. ಇದನ್ನು ತಿಳಿದ ಹನುಮಂತನು ವಾತ್ಸಲ್ಯಪೂರ್ಣವಾದ ಸೀತೆಯ ನುಡಿಯೊಂದರಿಂದಲೇ ಸ್ವರ್ಗಾದಿ ಸಕಲ ಭಾಗ್ಯಗಳೂ ಲಭಿಸಿದಂತಾಯಿತೆಂದು ತಿಳಿಸುತ್ತಾನೆ. ಉತ್ಸಾಹದಿಂದ ಪ್ರಾರ್ಥಿಸುತ್ತಾನೆ 'ಈ ರಾಕ್ಷಸಿಯರು[21] ನಿನ್ನನ್ನು ಹೆದರಿಸುತ್ತಿದ್ದರಲ್ಲವೇ? ಇವರೆಲ್ಲರನ್ನೂ ಕೊಲ್ಲಬೇಕೆಂದಿದ್ದೇನೆ! ಅನುಮತಿಯನ್ನು ಕೊಡು! ಎನ್ನುತ್ತಾನೆ. ಸೀತೆಯು ಹನುಮಂತನಿಗೆ ಸಮಾಧಾನ ಹೇಳುತ್ತಾಳೆ. 'ಈ ರಾಕ್ಷಸಿಯರೆಲ್ಲ ರಾಜನಿಗೆ ಅಧೀನರಾಗಿ ನಡೆಯುವವರು. ಅವರ ಮೇಲೆ ಯಾರಾದರೂ ಕೋಪಿಸಬಹುದೇ? ನನ್ನ ದುರ್ಭಾಗ್ಯದಿಂದ ಯಾವುದೋ ನನ್ನ ಹಿಂದಿನ ದುಷ್ಕರ್ಮದಿಂದ ನನಗೆ ಈ ಕಷ್ಟವು ಪ್ರಾಪ್ತವಾಯಿತು. ತನ್ನ ಕರ್ಮದ ಫಲವನ್ನು ತಾನು ಅನುಭವಿಸಬೇಕಲ್ಲವೆ? ಈ ಸ್ತ್ರೀಯರು ರಾವಣನ ಆದೇಶದಂತೆ ನನ್ನನ್ನು ಹೆದರಿಸುತ್ತಿದ್ದರು. ಅವನು ಹತನಾದ ಮೇಲೆ ಇವನು ಎಂದಿಗೂ ನನ್ನನ್ನು ಹಿಂಸಿಸಲಾರರು. ಒಂದು ಕರಡಿಯು ಹುಲಿಗೆ ಹೇಳಿತೆಂಬ ಒಂದು ಪೌರಾಣಿಕ ಶ್ಲೋಕವುಂಟು ನೀತಿಯುಕ್ತವಾದ ಆ ಸುಭಾಷಿತವನ್ನು ಕೇಳು:

**ನ ಪರಃ ಪಾಪಮಾದತ್ತೇ ಪರೇಷಾಂ ಪಾಪಕರ್ಮಣಾಮ್ ।**

**ಸಮಯೋ ರಕ್ಷಿತವ್ಯಸ್ತು ಸಂತಶ್ಚಾರಿತ್ರಭೂಷಣಾಃ ॥**

ತನಗೆ ಅಪಕಾರವನ್ನು ಮಾಡಿದವರಿಗೆ ಪ್ರಾಜ್ಞನಾದವರು ತಿರುಗಿ ಅಪಕಾರವನ್ನು ಮಾಡುವುದಿಲ್ಲ. ಸದಾಚಾರವನ್ನು ಅವಶ್ಯವಾಗಿ ಪಾಲಿಸಬೇಕು. ಸಜ್ಜನರಿಗೆ ಒಳ್ಳೆಯ ನಡತೆಯೇ ಭೂಷಣ ಎಂದು ವಿವರಿಸುತ್ತಾಳೆ. ಹನುಮಂತನು ಸೀತೆಯ ನುಡಿಗಳನ್ನು ಕೇಳಿ 'ಅಮ್ಮ, ಶ್ರೀರಾಮಚಂದ್ರನಿಗೆ ಅನುರೂಪಳಾದ ಧರ್ಮಪತ್ನಿ ನೀನು! ನೀನೆ ಧನ್ಯಳು!' ಎನ್ನುತ್ತಾನೆ. ರಾಮನಿಗೆ ಸೀತೆಯು ಸಂದೇಶವೇನೆಂದು ಕೇಳಿದಾಗ 'ವಾನರೋತ್ತಮ, ನನ್ನ ಸ್ವಾಮಿಯನ್ನು ನೋಡಲಿಚ್ಛಿಸುವೆನು' ಎಂದಷ್ಟೇ ಉತ್ತರಿಸುತ್ತಾಳೆ.

ರಾಮನಿಗೆ ಸೀತೆಯ ಸಂದೇಶವು ತಲುಪಿದಾಗ ರಾಮನು ವಿಭೀಷಣನನ್ನು ಕುರಿತು 'ವಿಭೀಷಣ,[2] ಸೀತೆಗೆ ಅಭ್ಯಂಗ ಸ್ನಾನವನ್ನು ಮಾಡಿಸಿ ದಿವ್ಯಾಂಗರಾಗವನ್ನು ಲೇಪಿಸಿ ದಿವ್ಯಾಭರಣಗಳಿಂದ ಅಲಂಕರಿಸಿ

ಇಲ್ಲಿಗೆ ಕರೆದುಕೊಂಡು ಬಾ! ತಡಮಾಡಬೇಡ' ಎಂದನು. ಇದೇ ಸಂದೇಶವನ್ನು ವಿಭೀಷಣನು ಸೀತೆಗೆ ತಲುಪಿಸಿದಾಗ ಸೀತೆಯು 'ರಾಕ್ಷಸೇಂದ್ರ, ನಾನು ಸ್ನಾನ ಮಾಡದೆ ಈ ಸ್ಥಿತಿಯಲ್ಲಿಯೇ ನನ್ನ ಸ್ವಾಮಿಯನ್ನು ನೋಡಲಿಚ್ಛಿಸುತ್ತೇನೆ' ಎಂದಳು. ರಾಮನ ಆಜ್ಞೆಯನ್ನು ತಿಳಿಸಿದಾಗ ಸೀತೆಯು ಒಪ್ಪಿದಳು.

ಈ ಸಂದರ್ಭದಲ್ಲಿ ರಾಮನು ಹೇಳುವ ಮಾತುಗಳು ಹೀಗಿವೆ 'ಸೀತೆಯು[೭೩] ಯುದ್ಧಭೂಮಿಯಲ್ಲಿರುವುದಲ್ಲದೆ ಮಹತ್ತರವಾದ ವಿಪತ್ತಿನಲ್ಲಿದ್ದಾಳೆ. ಅದರಲ್ಲಿಯೂ ನನ್ನೆದುರಿನಲ್ಲಿ ಅವಳನ್ನು ಜನರು ನೋಡಿದರೆ ಯಾವ ದೋಷವೂ ಇಲ್ಲ. ಆದ್ದರಿಂದ, ವಿಭೀಷಣ ಆಕೆಯನ್ನು ಶೀಘ್ರವಾಗಿ ಕರೆದುಕೊಂಡು ಬಾ, ಮಿತ್ರಪರಿವಾರಡೊಡನೆ ನಿಂತಿರುವ ನನ್ನನ್ನು ಸೀತೆಯು ಯಾವ ಸಂಕೋಚವೂ ಇಲ್ಲದೆ ಸಂದರ್ಶಿಸಲಿ!' ಈ ಮಾತನ್ನು ಕೇಳಿದ ವಿಭೀಷಣನು ರಾಮನ ಆಶಯವೇನಿರಬಹುದೆಂದು ಚಿಂತಾಕುಲನಾದನು. ರಾಮನ ಮಾತಿನ ಧಾಟಿಯನ್ನು ಕೇಳಿ ಲಕ್ಷ್ಮಣ ಸುಗ್ರೀವರೂ ಹನುಮಂತನೂ ಬಹಳ ವ್ಯಥೆಪಟ್ಟರು. ಪತ್ನಿಯಲ್ಲಿ[೭೪] ಉಪೇಕ್ಷೆಯನ್ನು ಸೂಚಿಸುವ ಧಾರುಣವಾದ ರಾಘವನ ಮುಖಭಾವಗಳಿಂದ 'ಅಯ್ಯೋ, ವೈದೇಹಿಯ ವಿಷಯದಲ್ಲಿ ಇವನಿಗೆ ಅಸಮಾಧಾನವಾಗಿದೆ' ಎಂದು ಅವರು ಊಹಿಸಿದರು.

ಬಹುಕಾಲದಿಂದ ಸೀತೆಯು ರಾವಣನ ಗೃಹದಲ್ಲಿದ್ದುದರಿಂದ ರಾಮನು ಪರುಷ ವಾಕ್ಯಗಳನ್ನಾಡಿ ಅವಳನ್ನು ನಿಂದಿಸುತ್ತಾನೆ. ಸೀತೆಯನ್ನು ನೋಡಿ ತನ್ನ ಮನೋವಿಕಾರವನ್ನು ತೋಡಿಕೊಳ್ಳಲಾರಂಭಿಸಿದನು. 'ಭದ್ರೆ[೭೫], ರಣರಂಗದಲ್ಲಿ ಶತ್ರುವನ್ನು ವಧಿಸಿ ನಿನ್ನನ್ನು ವಶಪಡಿಸಿಕೊಂಡಿರುವೆನು! ಪೌರುಷವನ್ನು ಮೆರೆಸಿ ಏನನ್ನು ಮಾಡಬಹುದೋ ಅದನ್ನು ಸಾಧಿಸಿರುವೆನು. ನನ್ನ ಮೇಲೆಸಗಿದ ಆಕ್ರಮಣಕ್ಕೆ ತಕ್ಕ ಪ್ರತಿಕಾರವನ್ನು ಮಾಡಿ ನನ್ನ ಕ್ರೋಧವನ್ನು ತೀರಿಸಿಕೊಂಡಿರುವೆನು. ನನಗಾದ ಅವಮಾನವನ್ನೂ ನನ್ನ ವೈರಿಯನ್ನೂ ಒಟ್ಟಿಗೆ ತೊಡೆದುಹಾಕಿರುವೆನು. ನನ್ನ ಪೌರುಷವೇನೆಂಬುದನ್ನು ಜಗತ್ತು ಈಗ ಕಂಡಿತು! ನನ್ನ ಶ್ರಮವು ಫಲಿಸಿತು. ನನ್ನ ಪ್ರತಿಜ್ಞೆಯು ಕೈಗೂಡಿರುವುದರಿಂದ ಇನ್ನು ನಾನು ಸ್ವತಂತ್ರನಾಗಿದ್ದೇನೆ' ಎನ್ನುತ್ತಾನೆ. ಎದುರಿಗಿದ್ದ[೭೬] ಸೀತೆಯನ್ನು ನೋಡಿದಷ್ಟೂ ರಾಘವನ ತಾಳ್ಮೆಯು ತಪ್ಪುತ್ತ ಹೋಯಿತು. ಉರಿಯುವ ಬೆಂಕಿಗೆ ತುಪ್ಪವನ್ನು ಹೊಯ್ದಂತಾಗಿ ಅವನ ಕೋಪವು ಹೆಚ್ಚಿತು. ಹುಬ್ಬು ಗಂಟಿಕ್ಕಿತು. ಓರೆಗಣ್ಣಿನಿಂದ ಜಾನಕಿಯನ್ನು ನೋಡುತ್ತ ಅವಳನ್ನು ಉದ್ದೇಶಿಸಿ, ನೆರೆದಿದ್ದ ವಾನರ ರಾಕ್ಷಸರೆದುರಿಗೆ ರಾಘವನು ಪರುಷವಾಕ್ಯಗಳನ್ನಾಡಿದನು. 'ಸೀತೆ, ತನಗೊದಗಿದ ಅವಮಾನ ಪ್ರಸಂಗವನ್ನು ಸಹಿಸಲಾರದೆ ಅದನ್ನು ತೊಡೆದುಹಾಕುವುದಕ್ಕಾಗಿ, ಮನುಷ್ಯನು ಏನು ಮಾಡಬೇಕೋ – ಏನು ಮಾಡಲು ಸಾಧ್ಯವೋ ಅದೆಲ್ಲವನ್ನೂ ಮಾಡಿ ಸಾಧಿಸಿದ್ದಾಯಿತು, ಇಲ್ವಲಾದಿ ದಾನವರ ಕಾಟದಿಂದ ಜೀವಲೋಕಕ್ಕೆ ದುರ್ಗಮವಾಗಿದ್ದ ದಕ್ಷಿಣ ದಿಕ್ಕನ್ನು ಆತ್ಮಜ್ಞಾನಿಗಳಾದ ಅಗಸ್ತ್ಯ ಮುನಿಗಳು ವಶಪಡಿಸಿಕೊಂಡಂತೆ, ಸೀತೆ, ವೈರಿಯನ್ನು ಜಯಿಸಿ ಅವನ ಕೈಯಿಂದ ನಿನ್ನನ್ನು ಬಿಡಿಸಿದೆನು. ಈ ರಣಪರಿಶ್ರಮವೆಲ್ಲವೂ ನನ್ನ ಮಿತ್ರರ ಪರಾಕ್ರಮದಿಂದ ಫಲಿಸಿತು. ಭದ್ರೆ, ಈ ಪರಿಶ್ರಮವು ನಿನಗೋಸ್ಕರವಾಗಿ ಅಲ್ಲ ಎಂಬುದು ನಿನಗೆ ತಿಳಿದಿರಲಿ! ಸದಾಚಾರವನ್ನು ರಕ್ಷಿಸಿವುದಕ್ಕಾಗಿಯೂ, ಎಲ್ಲೆಡೆಯೂ ನನಗೆ ಬರುವ

ಅಪವಾದನ್ನು ನಿರ್ಮೂಲಗೊಳಿಸುವುದಕ್ಕಾಗಿಯೂ, ವಿಶ್ವ ವಿಖ್ಯಾತವಾದ ನನ್ನ ವಂಶಕ್ಕೆ ಅಂಟುವ ಅಪಕೀರ್ತಿಯನ್ನು ವಿಧ್ವಂಸಗೊಳಿಸುವುದಕ್ಕಾಗಿಯೂ ಈ ಪರಿಶ್ರಮವನ್ನು ವಹಿಸಿದೆನು.

ಪರಗೃಹ ವಾಸದಿಂದ ನಿನ್ನ ಚಾರಿತ್ರದಲ್ಲಿ ನನಗೆ ಸಂದೇಹ ಉಂಟಾಗಿದೆ! ನನ್ನೆದುರಿಗೆ ನಿಂತಿರುವ ನೀನು, ನೇತ್ರರೋಗಿಯ ಎದುರಿಗಿರುವ ದೀಪದಂತೆ, ಕಣ್ಣನ್ನು ಕೊರೆಯುತ್ತಿರುವೆ! ಆದ್ದರಿಂದ, ಎಲೌ ಜನಕರಾಜತನಯೇ, ಯಥೇಷ್ಟವಾಗಿ ಎಲ್ಲಿಗಾದರೂ ಹೋಗು, ಅನುಜ್ಞೆಯನ್ನು ಕೊಟ್ಟಿದ್ದೇನೆ! ಭದ್ರೆ, ಇದೋ ಹತ್ತು ದಿಕ್ಕಗಳೂ ಇವೆ. ನಿನ್ನಿಂದ ನನಗೆ ಆಗಬೇಕಾದ್ದು ಏನೂ ಇಲ್ಲ!

'ಉತ್ತಮ ಕುಲದಲ್ಲಿ ಜನಿಸಿದ ತೇಜಸ್ವಿಯಾದ ಯಾವ ಪುರುಷನು ತಾನೇ, ಚಿರಕಾಲದವರೆಗೆ ಪರಗೃಹದಲ್ಲಿರುವ ಸ್ತ್ರೀಯನ್ನು ಒಳ್ಳೆಯ ಅಭಿಪ್ರಾಯದಿಂದ ಹೃತ್ಪೂರ್ವಕವಾಗಿ ಸ್ವೀಕರಿಸಿಯಾನು? ನೀನು ಈಗಲಷ್ಟೇ ರಾವಣನ ಮಡಿಲಿಂದ ಜಾರಿಬಂದಿರುವೆ. ಅವನ ಕೆಟ್ಟ ಕಣ್ಣಿಗೆ ಸಿಕ್ಕಿದವಳು. ಮಹತ್ತರವಾದ ವಂಶ ನನ್ನದು' ಎಂದು ಹೇಳಿಕೊಳ್ಳುವ ನಾನು, ಮತ್ತೆ ನಿನ್ನನ್ನು ಹೇಗೆ ಸ್ವೀಕರಿಸಲಿ? ವಂಶದ ಹೆಸರನ್ನುಳಿಸುವುದಕ್ಕಾಗಿ ನಿನ್ನನ್ನು ಜಯಿಸಿ ತಂದು ಕೈ ಬಿಟ್ಟ ಕೀರ್ತಿಯನ್ನು ಮತ್ತೆ ಗಳಿಸಿದ್ದೇನೆ. ನಿನ್ನಲ್ಲಿ ನನಗೆ ಯಾವ ಆಸಕ್ತಿಯೂ ಇಲ್ಲ. ಮನಬಂದ ಕಡೆಗೆ ಇಲ್ಲಿಂದ ಹೊರಟುಹೋಗು ! ಎನ್ನುತ್ತಾನೆ.

ರಾಮನ ಮಾತು ಇಲ್ಲಿಗೇ ಮುಗಿಯುವುದಿಲ್ಲ 'ನಾನು ಈ ಮಾತನ್ನು ನಿಶ್ಚಯಿಸಿಕೊಂಡೇ ಹೇಳಿದ್ದೇನೆ. ಬೇಕಾದರೆ ಲಕ್ಷ್ಮಣನನ್ನೋ ಭರತನನ್ನೋ ಜೀವನಕ್ಕಾಗಿ ಆಶ್ರಯಿಸು. ವಾನರೇಂದ್ರನಾದ ಸುಗ್ರೀವನಿದ್ದಾನೆ, ರಾಕ್ಷಸೇಂದ್ರ ವಿಭೀಷಣನಿದ್ದಾನೆ ಯಾರನ್ನಾದರೂ ಆಶ್ರಯಿಸು ಜೀವಿಸು ಅಥವಾ ನಿನ್ನ ತವರು ಮನೆಗಾದರೂ ಹೋಗು, ಎಲ್ಲಿ ಸಂತೋಷವೋ ಅಲ್ಲಿರು. ಸೀತೆ, ರಾವಣನು ಮನೋಹರವಾದ ನಿನ್ನ ಈ ದಿವ್ಯರೂಪವನ್ನು ನೋಡಿ, ಅವನ ಗೃಹದಲ್ಲಿಯೇ ನೀನು ಸುತ್ತಾಡಿಕೊಂಡಿರುವಾಗ, ಬಹುಕಾಲದವರೆಗೆ ಹೇಗೆ ಸುಮ್ಮನಿದ್ದಾನು!' ಎಂದು ಹೇಳಿದನು. ತನ್ನ ಪ್ರಿಯನ ಪ್ರಿಯವಾದ ನುಡಿಗಳನ್ನು ಕೇಳಬೇಕೆಂದು ಹಾರೈಸುತ್ತಿದ್ದ ಸೀತೆಗೆ ತನ್ನ ಪ್ರಿಯನ ಅಪ್ರಿಯವಾದ ನಿಷ್ಠುರ ವಚನಗಳನ್ನು ಕೇಳಿ ಗಳಗಳನೇ ಕಣ್ಣೀರು ಹರಿಸಿದಳು. ಗಜರಾಜನ ಶುಂಡಾದಂಡದಿಂದ ಅಭಿಹತವಾದ ಸಲ್ಲಕೀಲತೆಯಂತೆ ಥರಥರನೇ ನಡುಗಿದಳು.

ರಾಮನ ಕೋಪದ ನುಡಿಗಳನ್ನು ಕೇಳಿದ ಸೀತೆಯು ದುಃಖ ಮತ್ತು ನಾಚಿಕೆಯಿಂದ ಕುಸಿದು ಕಣ್ಣಿರು ಸುರಿಸಿದಳು. ನಂತರ ಮೆಲ್ಲನೆ ರಾಮನನ್ನುದ್ದೇಶಿಸಿ ಹೀಗೆ ಹೇಳಿದಳು:

**ಕಿಂ ಮಾಮಸದೃಶಂ ವಾಕ್ಯಮೀದೃಶಂ ಶ್ರೋತ್ರದಾರುಣಮ್ ।**
**ರೂಕ್ಷಂ ಶ್ರಾವಯಸೇ ವೀರ ಪ್ರಾಕೃತಃ ಪ್ರಾಕೃತಾಮಿವ[೭೭] ॥**

ಈ ರೀತಿಯಲ್ಲಿ ನನಗೆ ಆಡಬಾರದ ಮಾತನ್ನೇಕೆ ಹೇಳುವೆ? ಕಿವಿಯನ್ನು ಸೀಳುವಂತಹ ಈ ಕಠೋರ ವಚನವನ್ನು ನೀನು ಹೇಳಬಹುದೇ? ವೀರಾಗ್ರಣಿ, ಅಸಂಸ್ಕೃತನಾದ ಒಬ್ಬ ಸಾಮಾನ್ಯ ಮನುಷ್ಯನು ಸಂಸ್ಕೃತಿ ಶೂನ್ಯಳಾದ ಒಬ್ಬ ಹೆಂಗಸಿಗೆ ನುಡಿಯುವಂತೆ ನುಡಿಯುತ್ತಿರುವೆಯಲ್ಲ ಎನ್ನುತ್ತಾಳೆ.

ನೀನೆಂದುಕೊಂಡಂತೆ ನಾನಿಲ್ಲ! ನನ್ನ ಚಾರಿತ್ರ್ಯದ ಮೇಲೆ ಆಣೆಯನ್ನು ಹೇಳುತ್ತಿದ್ದೇನೆ, ನನ್ನನು ನಂಬು. ಕೀಳು ಹೆಂಗಸರ ವ್ಯವಹಾರವನ್ನು ಕಂಡು ಸ್ತ್ರೀಜಾತಿಯನ್ನೇ ಶಂಕಿಸುವೆಯಾ? ನಾನು[೭೮] ದಿಕ್ಕಿಲ್ಲದೆ ಪರಾಧೀನವಾದಾಗ ಆತನ ದೇಹಸ್ಪರ್ಶವಾಗಿರಬಹುದು. ಅದು ದೈವಾಯತ್ತವಾದ ಅಪರಾಧ. ನನಗೆ ಅಧೀನವಾದುದು ನನ್ನ ಹೃದಯ. ಅದು ಸದಾ ನಿನ್ನಲ್ಲಿಯೇ ನೆಲೆಸಿದೆ ಎನ್ನುತ್ತಾಳೆ. ಮುಂದುವರಿದು ನನ್ನ ಮಾನರಕ್ಷಣೆ ನಿನ್ನದು, ಹೀಗಿದ್ದರೂ ನನ್ನ ಶೀಲವು ನಿನಗೆ ತಿಳಿದಿಲ್ಲವಾದರೆ, ಅಯ್ಯೋ, ನಾನು ಶಾಶ್ವತವಾಗಿ ಕೆಟ್ಟೆನು. ನನ್ನನ್ನು ಹುಡುಕಲು ಹನುಮಂತನನ್ನು ಕಳುಹಿಸಿದ್ದಾಗ ಈ ಮಾತನ್ನು ತಿಳಿಸಿದ್ದರೆ ಆ ವಾನರೋತ್ತಮನ ಮುಂದೆ ಆಗಲೇ ಪ್ರಾಣ ಬಿಡುತ್ತಿದ್ದೆನಲ್ಲ. ಆಗ ನೀನಿಷ್ಟು ಯುದ್ಧಮಾಡಬೇಕಾದ ಪ್ರಮೆಯವೇ ಇರುತ್ತಿರಲಿಲ್ಲ ಎನ್ನುತ್ತಾಳೆ. ಅಲ್ಪ ಮನುಷ್ಯರಂತೆ ಕೋಪವೊಂದನ್ನೇ ಆಶ್ರಯಿಸಿದ್ದೀಯ, 'ಹೆಂಗಸರು ಚಪಲರು' ಎಂದು ಸ್ತ್ರೀ ಸ್ವಭಾವವೊಂದನ್ನೇ ಮುಂದಿಟ್ಟು ಮಾತನಾಡುತ್ತಿದ್ದೀಯ ಎಂದುಸುರಿದಳು.

ದೈನ್ಯದಿಂದ[೭೯] ಚಿಂತಾಕುಲನಾಗಿ ನಿಂತಿದ್ದ ಲಕ್ಷ್ಮಣನನ್ನು ಕುರಿತು 'ಲಕ್ಷ್ಮಣ, ನನಗೆ ಚಿತೆಯೊಂದನ್ನು ನಿರ್ಮಿಸಿಕೊಡು. ನನ್ನ ವ್ಯಸನಕ್ಕೆ ಚಿತೆಯೇ ಔಷಧ. ಈ ಕೆಟ್ಟ ಅಪವಾದವನ್ನು ಹೊತ್ತು ನಾನು ಜೀವಿಸಲಾರೆ. ನನ್ನ ಗುಣಗಳನ್ನು ಮೆಚ್ಚದೆ ಮಹಾಜನರೆದುರಿಗೆ ನನ್ನನ್ನು ಪರಿತ್ಯಜಿಸಿದ ಮೇಲೆ, ನನಗಿರುವ ಗತಿ ಒಂದೇ ಅಗ್ನಿಯಲ್ಲಿ ಬೀಳುವೆನು' ಎಂದಳು. ರಾಮನ ಇಚ್ಛೆಯಂತೆ ಚಿತೆಯು ನಿರ್ಮಾಣವಾಯಿತು. ಚಿತೆಯ ಬಳಿ ನಿಂತ ಸೀತೆಯು ಪ್ರಾರ್ಥನೆ ಮಾಡಿಕೊಂಡು ಯಾವ ಆತಂಕವೂ ಇಲ್ಲದೆ ನೆಮ್ಮದಿಯ ಹೃದಯದಿಂದ ಅಗ್ನಿಯಲ್ಲಿ ಧುಮುಕಿದಳು. ಜನರ ಕೋಲಾಹಲ ಧ್ವನಿಯನ್ನು ಕೇಳಿ ರಾಮನ ಕಣ್ಣುಗಳಿಂದಲೂ ನೀರು ತುಳುಕಿತು. ಬ್ರಹ್ಮ ಮುಂತಾದ ದೇವತೆಗಳೆಲ್ಲ ಬಂದು ರಾಮನನ್ನು ಈ ಸಂಬಂಧವಾಗಿ ಪ್ರಶ್ನಿಸುತ್ತಾರೆ. ಆಗ ರಾಮನು ತಾನು ಯಾರೆಂದು ತಿಳಿಸಬೇಕೆಂದು ವಿನಂತಿಸುತ್ತಾನೆ. ಬ್ರಹ್ಮನು ರಾಮನ ವೃತ್ತಾಂತವನ್ನು ತಿಳಿಸಿ ಬ್ರಹ್ಮನು ರಾಮನನ್ನು ಸ್ತುತಿಸುತ್ತಾನೆ. ಅತ್ತ ಯಜ್ಞೇಶ್ವರನು[೮೦] ಸೀತೆಯನ್ನು ತನ್ನ ಮಡಿಲಿನಲ್ಲಿ ಕುಳ್ಳರಿಸಿಕೊಂಡು ಮೇಲೆದ್ದನು. ರಾಮನಿಗೆ ಅವಳನ್ನು ಒಪ್ಪಿಸಿ 'ರಾಮ ಸೀತೆಯಲ್ಲಿ ಯಾವ ದೋಷವೂ ಇಲ್ಲ. ಮಾತು ಮನಸ್ಸು ನೋಟಗಳಿಂದ ಇವಳು ನಿನ್ನನ್ನು ಮೀರಿ ನಡೆದವಳಲ್ಲ. ನಿನ್ನನ್ನೂ ಎಂದೂ ಅತಿಕ್ರಮಿಸಲಿಲ್ಲ. ರಾವಣನು ಸೀತೆಯನ್ನು ತನ್ನ ಅಂತಃಪುರಕ್ಕೆ ಸೇರಿದ ಉಪವನದಲ್ಲಿ ಸೆರೆಯಿಟ್ಟು ರಾಕ್ಷಸಿಯರ ಕಾವಲು ಹಾಕಿದ್ದನು. ವಿಕಾರಿಗಳೂ, ಭೀಕರಾಕೃತಿಗಳೂ ಆದ ರಾಕ್ಷಸಿಯರ ಹಿಂಡು ಎಡಬಿಡದೆ ಕಾಯುತ್ತಿತ್ತು. ರಾವಣನು ನಾನಾ ವಿಧವಾದ ಪ್ರಲೋಭನೆಗಳನ್ನೊಡ್ಡಿದರೂ, ಬೆದರಿಸಿದರೂ ಅವಳ ಅಂತರಾತ್ಮವು ಸದಾ ನಿನ್ನಲ್ಲಿ ನೆಲೆಸಿತ್ತು. ಇವಳಲ್ಲಿ ಯಾವ ಕಳಂಕವೂ ಇಲ್ಲ. ಇವಳನ್ನು ಸ್ವೀಕರಿಸು, ರಾಮ, ತಿರುಗಿ ಒಂದು ಮಾತನ್ನು ಆಡಬೇಡ. ಇದು ನನ್ನ ಆಜ್ಞೆ' ಎಂದನು. ಆಗ ರಾಮನು ಹೀಗೆ ಹೇಳುತ್ತಾನೆ 'ಸೀತೆಯ ವಿಷಯದಲ್ಲಿ ದೋಷವೆಣಿಸುವುದು ಸರ್ವಥಾ ಯುಕ್ತವಲ್ಲ. ರಾವಣನ ಗೃಹದಲ್ಲಿ ದೀರ್ಘಕಾಲವಿದ್ದ ಇವಳನ್ನು ಪರೀಕ್ಷಿಸದೆ

ಸ್ವೀಕರಿಸಿದ್ದರೆ 'ದಶರಥನ ಮಗನಾದ ರಾಮನು ಅವಿವೇಕಿ. ಇವನೊಬ್ಬ ಕಾಮುಕ ಎಂದು ಮಹಾಜನರು ಹೇಳುತ್ತಿದ್ದರು. ನೀವೆಲ್ಲರೂ ನನ್ನಲ್ಲಿ ಸ್ನೇಹವನ್ನಿಟ್ಟು ಹಿತವಚನಗಳನ್ನು ಹೇಳುತ್ತಿದ್ದೀರಿ. ನಿಮ್ಮ ಶುಭವಚನವನ್ನು ಪಾಲಿಸುವುದು ನನ್ನ ಕರ್ತವ್ಯ. ನಿಮ್ಮ ಮಾತಿನಂತೆ ನಡೆಯುವೆನು' ಎಂದನು.

ದಶರಥನು ಸ್ವರ್ಗದಿಂದ ಬಂದು ಆಶೀರ್ವದಿಸಿ ಹಿತವಚನವನ್ನಾಡುತ್ತಾನೆ. ಸೀತೆಗೆ ಸಮಾಧಾನ ಹೇಳುತ್ತಾನೆ. 'ವತ್ಸೆ[೮೧] – ವೈದೇಹಿ, ರಾಮನು ನಿನ್ನನ್ನು ತ್ಯಜಿಸುತ್ತೇನೆಂದು ಹೇಳಿದುದಕ್ಕಾಗಿ, ಮನಸ್ಸಿನಲ್ಲಿ ಯಾವ ಅಸಮಾಧಾನವನ್ನೂ ಇಟ್ಟುಕೊಳ್ಳಬೇಡ ನೀನು ಪರಿಶುದ್ಧಳೆಂದು ತೋರಿಸುವುದಕ್ಕಾಗಿ ನಿನ್ನ ಹಿತಾಪೇಕ್ಷೆಯಿಂದಲೇ ರಾಮನು ಹಾಗೆ ಮಾಡಿದ್ದಾನೆ. ಪತಿ ಶುಶ್ರೂಷೆಯ ವಿಷಯದಲ್ಲಿ ನಿನಗೆ ನಾನು ಹೇಳಬೇಕಾದ್ದೆ ಇಲ್ಲ! ಮುಖ್ಯವಾಗಿ ಒಂದು ಮಾತನ್ನಾಡುವೆನು! ರಾಮನೇ ನಿನಗೆ ಪರದೇವತೆ!' ಎಂದು ಹೇಳಿದನು.

ಅಯೋಧ್ಯೆಗೆ ಹಿಂದಿರುಗುವಾಗ ಸೀತೆಯು ವಾನರ ಸ್ತ್ರೀಯರನ್ನೂ ತಮ್ಮೊಂದಿಗೆ ಕರೆದುಕೊಂಡು ಹೋಗಲಪೇಕ್ಷಿಸುತ್ತಾಳೆ. ಅಯೋಧ್ಯೆಯಲ್ಲಿ ಅವರೆಲ್ಲರನ್ನೂ ಪ್ರೀತಿಯಿಂದ ಸತ್ಕರಿಸುತ್ತಾಳೆ.

ಉತ್ತರಕಾಂಡದಲ್ಲಿ ಸೀತೆಯ ಬದುಕಿನ ಎರಡನೆಯ ಹಂತವನ್ನು ಕಾಣಬಹುದು. ರಾಮನು ಒಂದು ದಿನ ಸೀತೆಯ ಗರ್ಭಿಣಿಯೆಂಬುದನ್ನು ಗುರುತಿಸಿ ಅವಳ ಬಯಕೆಯೇನೆಂದು ಕೇಳುತ್ತಾಳೆ.[೮೨]

ತನ್ನ ಮನೋಭಿಲಾಷೆಯನ್ನು ಹೇಳಿದಳು 'ರಾಘವ, ಪವಿತ್ರವಾದ ತಪೋವನಗಳನ್ನು ನೋಡಬೇಕೆಂದು ಇಚ್ಛೆಯಾಗಿದೆ. ಗಂಗಾತೀರದಲ್ಲಿ ನೆಲೆಸಿ ಫಲಮೂಲಗಳನ್ನು ತಿನ್ನುತ್ತ ತೇಜೋವಂತರಾದ ಋಷಿಗಳ ಪಾದ ಸಾನ್ನಿಧ್ಯದಲ್ಲಿ ಇರಬೇಕೆಂದು ಅಪೇಕ್ಷೆಯಾಗುತ್ತಿದೆ' ಎಂದಳು. 'ಒಂದು ರಾತ್ರಿಯಾದರೂ ನಾನು ತಪೋವನದಲ್ಲಿರಲು ಶಕ್ಯವಾದೀತೆ?' ಎಂದು ಕೇಳಿದಾಗ ರಾಮನು 'ಓಹೋ! ಆಗಬಹುದು ವೈದೇಹಿ ನಿಶ್ಚಿಂತಳಾಗಿರು. ನಾಳೆಯೇ ತಪೋವನಕ್ಕೆ ಹೋಗಬಹುದು, ಸಂದೇಹ ಬೇಡ' ಎನ್ನುತ್ತಾನೆ.

ಸೀತೆಯು ಅಭಿಲಾಷೆಯಂತೆ, ರಾಮನ ಆಜ್ಞೆಯಂತೆ ಲಕ್ಷ್ಮಣನು ರಥದೊಂದಿಗೆ ಸಿದ್ಧನಾಗಿ ಸೀತೆಗೆ 'ದೇವಿ[೮೩] ಮಹಾರಾಜರಲ್ಲಿ ನೀನು ಒಂದು ಪ್ರಾರ್ಥನೆಯನ್ನು ಸಲ್ಲಿಸಿರುವೆಯಂತೆ ಅದನ್ನು ಒಪ್ಪಿದ ನೃಪಾಲನು ಋಷ್ಯಾಶ್ರಮಕ್ಕೆ ನಿನ್ನನ್ನು ಕರೆದೊಯ್ಯಬೇಕೆಂದು ನನಗೆ ಆಜ್ಞಾಪಿಸಿದ್ದಾನೆ. ಗಂಗಾ ತೀರದಲ್ಲಿರುವ ಋಷಿಗಳ ಪುಣ್ಯಾಶ್ರಮಕ್ಕೆ ನಿನ್ನನ್ನು ರಾಜಾಜ್ಞೆಯಂತೆ ಕರೆದೊಯ್ಯಬೇಕಾಗಿದೆ. ಋಷಿಸೇವಿತರಾದ ಅರಣ್ಯದಲ್ಲಿ ಬಿಡಲು ನಿನ್ನನ್ನು ಕರೆದೊಯ್ಯುವೆನು!' ಎಂದು ತಿಳಿಸಿದನು. ಸೀತೆ ಮುನಿಪತ್ನಿಯರಿಗೆ ಕೊಡಲು ವಿವಿಧ ವಸ್ತ್ರಗಳನ್ನೂ, ಧನವನ್ನೂ, ರತ್ನಾಭರಣಗಳನ್ನೂ ತೆಗೆದುಕೊಳ್ಳುತ್ತಾಳೆ. ದಾರಿಯಲ್ಲಿ ಸೀತೆಗೆ ಅನೇಕ ದುಶ್ಶಕುನಗಳು ಉಂಟಾಗುತ್ತವೆ. ಗಂಗಾನದಿಯನ್ನು ಕಂಡೊಡನೆ ಇದುವರೆಗೂ ಮೌನವಾಗಿದ್ದ ಲಕ್ಷ್ಮಣನು ಶೋಕಾರ್ತನಾಗಿ ಬಿಕ್ಕಿ ಬಿಕ್ಕಿ ಗಟ್ಟಿಯಾಗಿ ಅಳತೊಡಗುತ್ತಾನೆ. ಗಂಗಾ ನದಿಯ ಆಚೆಯ ದಡ ಸೇರಿದ ನಂತರ ಲಕ್ಷ್ಮಣನು 'ಪ್ರಾಜ್ಞನಾದ[೮೪] ಅಣ್ಣನು ಈ ನಿಮಿತ್ತದಿಂದ ನನ್ನನ್ನು ಲೋಕನಿಂದೆಗೆ ಗುರಿಮಾಡಿದನು. ಪ್ರಸನ್ನಳಾಗು, ನನ್ನಲ್ಲಿ

ಪಾಪವೆಣಿಸಬೇಡ' ಎಂದು ರೋಧಿಸಿದನು. ಸೀತೆಯು ಸತ್ಯವೇನೆಂದು ತಿಳಿಯಲು ಒತ್ತಾಯಪಡಿಸಿದಾಗ ಲಕ್ಷ್ಮಣನು 'ನಿನ್ನ ವಿಷಯವಾಗಿ ನಗರದಲ್ಲಿಯೂ ರಾಷ್ಟ್ರದಲ್ಲಿಯೂ ಹುಟ್ಟಿರುವ ದಾರುಣವಾದ ಅಪವಾದವನ್ನು ಸಭಾಮಧ್ಯದಲ್ಲಿ ಕೇಳಿದನಂತೆ. ಅದರಿಂದ ನೊಂದ ರಾಘವನು, ಅದನ್ನೂ ನನಗೆ ತಿಳಿಸಿ ಹೊರಟುಹೋದನು. ಆ ಕೆಟ್ಟ ಮಾತುಗಳನ್ನು ನಾನು ಹೇಳಬಾರದು. ನನ್ನೆದುರಿಗೇ ನಿರ್ದೋಷಳೆಂದು ನಿಶ್ಚಿತಳಾದ ನಿನ್ನನ್ನು ನರೇಂದ್ರನು ತ್ಯಜಿಸಿದ್ದಾನೆ. ಜನಾಪವಾದಕ್ಕೆ ಹೆದರಿ ಹೀಗೆ ಮಾಡಿದ್ದಾನೆಯೇ ಹೊರತು ಬೇರೆಯಲ್ಲ. ಋಷ್ಯಾಶ್ರಮಗಳ ಬಳಿಯಲ್ಲಿ ನಿನ್ನನ್ನು ಬಿಟ್ಟು ಹೋಗಬೇಕಾಗಿದೆ. ಇದು ಮಹಾರಾಜರ ಆಜ್ಞೆ. ಆಶ್ರಮಕ್ಕೆ ಬರಬೇಕೆಂದು ನಿನ್ನ ಬಯಕೆಯಾಗಿತ್ತಂತೆ. ಇದು ಗಂಗಾತೀರದಲ್ಲಿರುವ ಬ್ರಹ್ಮರ್ಷಿಗಳ ತಪೋವನ.

ಹೇ ಮಂಗಳದೇವತೆ, ವಿಷಾದಿಸಬೇಡ. ಆ ಮಹಾತ್ಮರ ಪಾದದ ನೆರಳಲ್ಲಿ ನಿನಗೆ ಸುಖವೆನಿಸುವುದು. ಪತಿಧರ್ಮವನ್ನು ಪಾಲಿಸುತ್ತಾ, ಶ್ರೀರಾಮನನ್ನು ಹೃದಯದಲ್ಲಿ ಸದಾ ನೆನೆಯುತ್ತಿರು. ಆದ್ದರಿಂದ ನಿನಗೆ ಪರಮ ಶ್ರೇಯಸ್ಸು ದೊರೆಯುವುದು' ಎನ್ನುತ್ತಾನೆ.

ಲಕ್ಷ್ಮಣ[೮೫], ದುಃಖವನ್ನನುಭವಿಸಲೆಂದೇ ಬ್ರಹ್ಮನು ನನ್ನ ದೇಹವನ್ನು ನಿರ್ಮಿಸಿದ್ದಾನೆ. ಆದ್ದರಿಂದ ಇದು ದುಃಖದ ಮೂರ್ತಿಯಾಗಿ ಬಿಟ್ಟಿದೆ! ನೀನು[೮೬] ಯಾವ ಪಾಪ ಕೃತ್ಯವನ್ನು ಮಾಡಿದೆ? ಮಹಾತ್ಮನಾದ ರಾಘವನು ನಿನ್ನನ್ನು ತ್ಯಜಿಸಲು ಕಾರಣವೇನು?' ಎಂದು ಅವರು ಕೇಳಿದರೆ ಯಾವ ಉತ್ತರವನ್ನು ಕೊಡಲಿ? ಈಗಲೇ ಗಂಗೆಯಲ್ಲಿ ಬಿದ್ದು ಜೀವ ತೊರೆದರೆ ಗರ್ಭಿಣಿಯಾಗಿರುವುದರಿಂದ ನನ್ನ ಪತಿಯ ವಂಶವು ವಿಚ್ಛಿನ್ನವಾಗುವುದು. ಲಕ್ಷ್ಮಣ, ನಿನಗೆ ಆಜ್ಞೆಯಾದಂತೆ ಮಾಡು, ಸದಾ ದುಃಖಭಾಗಿನಿಯಾದ ನನ್ನನ್ನು ತ್ಯಜಿಸಿ ಹೋಗು. ರಾಜನ ಆಜ್ಞೆಯನ್ನು ಪಾಲಿಸು' ಎನ್ನುತ್ತಾಳೆ. ರಾಮನಿಗೆ ಒಂದು ಸಂದೇಶವನ್ನು ಕಳುಹಿಸಿಕೊಡುತ್ತಾಳೆ. 'ಅಪಕೀರ್ತಿಗೆ[೮೭] ಹೆದರಿ ನನ್ನನ್ನು ತೊರೆದಿದ್ದೆಯೇ, ಜನಾಪವಾದದಿಂದ ನಿನಗೆ ಬಂದಿರುವ ನಿಂದೆಯನ್ನು ಪರಿಹರಿಸಬೇಕಾದವಳು ನಾನಲ್ಲವೇ? ಈ ದೇಹಕ್ಕಾಗಿ ನಾನು ಶೋಕಿಸುವುದಿಲ್ಲ. ಜನರ ಅಪವಾದವು ಹೇಗಿದೆಯೋ ಹಾಗೆ, ರಘುನಂದನ, ಅದನ್ನು ನಿನಗಾಗಿ ಹೊರುವೆನು. ಹೆಂಗಸಿಗೆ ಪತಿಯೇ ದೇವತೆ, ಪತಿಯೇ ಬಂಧು, ಪತಿಯೇ ಗುರು. ಆದ್ದರಿಂದ ಪ್ರಾಣವನ್ನಾದರೂ ಕೊಟ್ಟು ಪತಿಗೆ ಪ್ರಿಯವಾದ್ದನ್ನು ಪತ್ನಿಯು ಮಾಡಬೇಕು' ಇದನ್ನು ರಾಮನಿಗೆ ಹೇಳೆನ್ನುತ್ತಾಳೆ.

ಅರಣ್ಯದಲ್ಲಿ ರೋಧಿಸುತ್ತಿದ್ದ ಸೀತೆಯ ಬಳಿಗೆ ವಾಲ್ಮೀಕಿಗಳು ಬರುತ್ತಾರೆ. ಸೀತೆಯನ್ನು ಕಂಡು ಹೀಗೆಂದರು[೮೮], 'ನೀನು ಈ ಪ್ರಕಾರದಲ್ಲಿ ಬರುವೆಯೆಂದು ತಪೋಬಲದಿಂದ ತಿಳಿದಿದ್ದೆನು! ನಿನ್ನ ಪರಿಶುದ್ಧ ಚಾರಿತ್ರವನ್ನು ಪೂರ್ಣವಾಗಿ ಬಲ್ಲೆ. ನೀನು ಧೈರ್ಯವಾಗಿರು. ನನ್ನ ಆಶ್ರಮದಲ್ಲಿ ತಾಪಸಿಯರೊಂದಿಗೆ ಇರು' ಎನ್ನುತ್ತಾರೆ. ತಾಪಸಿಯರಿಗೆ 'ನೀವು ಸೀತೆಯನ್ನು ಪರಮಸ್ನೇಹದಿಂದ ಕಾಣಿರಿ ನಾನು ಹೇಳಿದ್ದೇನೆಂದು ನನ್ನಲ್ಲಿರುವ ಗೌರವದಿಂದ ಇವಳನ್ನು ಸತ್ಕರಿಸುತ್ತಿರಿ, ಅಷ್ಟೇ ಅಲ್ಲ, ಇವಳು ನಿಮಗೆ ಪೂಜ್ಯಳೆಂದು ತಿಳಿಯಿರಿ' ಎಂದು ಹೇಳಿದನು.

ಲವಕುಶರು ಸೀತೆಯ ಮಕ್ಕಳೆಂದು ತಿಳಿದು ತನ್ನ ಇಚ್ಛೆಯಂತೆ ಶುದ್ಧಚಾರಿತ್ರರಾದ ದೂತರನ್ನು ಕರೆದು ಸಭಾಮಧ್ಯದಲ್ಲಿ ಹೀಗೆಂದನು 'ಎಲೈ ದೂತರೆ, ಭಗವಾನ್ ವಾಲ್ಮೀಕಿ ಮಹರ್ಷಿಗಳ ಬಳಿಗೆ ಹೋಗಿ ನಾನು ಹೇಳಿದ್ದೇನೆಂದು ಈ ಮಾತನ್ನು ತಿಳಿಸಿರಿ. 'ಸೀತೆಯು ಶುದ್ಧಚಾರಿತ್ರಳೂ, ದೋಷರಹಿತಳೂ ಆಗಿರುವುದಾದರೆ, ವಾಲ್ಮೀಕಿ ಮುನಿಗಳ ಅನುಜ್ಞೆಯನ್ನು ಪಡೆದು ತನ್ನ ಶುದ್ಧತೆಯನ್ನು ತೋರಿಸಿಕೊಡಲಿ' ಎಂದು ಹೇಳಿರಿ. 'ನಾಳೆ ಪ್ರಾಥಃಕಾಲ ಸಭಾಮಧ್ಯದಲ್ಲಿ ಶಪಥ ಮಾಡಬೇಕು' ಎಂದು ಆಜ್ಞಾಪಿಸಿದನು.

ವಾಲ್ಮೀಕಿ ಋಷಿಗಳು ಸೀತಾ ಸಮೇತರಾಗಿ ಸಭೆಗೆ ಆಗಮಿಸಿ 'ಎಲೈ ದಶರಥನಂದನ, ಸುಶೀಲೆಯೂ, ಧರ್ಮಚಾರಿಣಿಯೂ ಆದ ಸೀತೆಯು ಲೋಕಾಪವಾದ ನಿಮಿತ್ತವಾಗಿ ನನ್ನ ಆಶ್ರಮದ ಬಳಿಯಲ್ಲಿ ಪರಿತ್ಯಕ್ತಳಾದಳು. ನೀನು ಅಪವಾದರಹಿತವಾಗಿರಬೇಕೆಂದು ವ್ರತನಿಷ್ಠೆಯುಳ್ಳವನು. ಲೋಕಾಪವಾದಕ್ಕೆ ಹೆದರಿದವನು. ಈ ಕುಶಲವರಿಬ್ಬರೂ ಜಾನಕಿಯ ಪುತ್ರರು. ನಿನ್ನ ಮಕ್ಕಳೇ ಎಂಬುದು ನಿಶ್ಚಿತ. ಸೀತೆಯಲ್ಲಿ ದೋಷಲೇಶವಾದರೂ ಇರುವುದಾದರೆ, ಆ ತಪಸ್ಸಿನ ಫಲವು ನನಗೆ ದೊರಕದೆ ಹೋಗಲಿ! ಮನೋವಾಕ್ಕರ್ಮಗಳಿಂದ ನಾನು ಯಾವ ಪಾಪಕೃತ್ಯವನ್ನೂ ಮಾಡಿದವನಲ್ಲ. ಅಂತಹ ಸದ್ವೃತ್ತದಿಂದ ಬರುವ ಫಲವು ಜಾನಕಿಯು ನಿರ್ದೋಷಳಾಗಿದ್ದರೆ ಮಾತ್ರ ನನಗೆ ಲಭಿಸಲಿ! ಸೀತೆಯನ್ನು ವನ, ನದೀ ಸಮೀಪದಲ್ಲಿ ಕಂಡಾಗ, ಪಂಚೇಂದ್ರಿಯಗಳಲ್ಲೂ ಮನಸ್ಸಿನಲ್ಲಿಯೂ ಇವಳು ಪರಿಶುದ್ಧಳೆಂದು ತಿಳಿದೇ ಆಶ್ರಮಕ್ಕೆ ಕರೆದೊಯ್ದೆನು. ಲೋಕಾಪವಾದಕ್ಕೆ ಅಂಜಿರುವ ನಿನಗೆ ವಿಶ್ವಾಸಕರವಾದ ಕಾರ್ಯವನ್ನು ಮಾಡಿತೋರಿಸುವಳು. ಮಹಾರಾಜ, ನಿನ್ನ ಪ್ರಿಯತಮೆಯು ಪರಿಶುದ್ಧಳು ಎಂದು ತಿಳಿದಿದ್ದರೂ ಲೋಕಾಪವಾದದಿಂದ ನಿನ್ನ ಮನಸ್ಸು ಕಲುಷಿತವಾದ್ದರಿಂದ ಇವಳನ್ನು ತ್ಯಜಿಸಿದ್ದೀಯೆ. ಆಗ ನಾನು ದಿವ್ಯದೃಷ್ಟಿಯಿಂದ ಸೀತೆಯು ಶುದ್ಧಚಾರಿತ್ರ್ಯಳೆಂಬುದನ್ನರಿತು ನನ್ನ ಆಶ್ರಮದಲ್ಲಿ ಇವಳಿಗೆ ಪ್ರವೇಶವನ್ನಿತ್ತೆನೆಂದು' ಹೇಳುತ್ತಾರೆ.

ರಾಮನು ವಾಲ್ಮೀಕಿಗಳ ಮಾತಿನಿಂದ ತೃಪ್ತನಾಗಿ 'ಮಹಾತ್ಮರೇ, ಧರ್ಮಜ್ಞರಾದ ನೀವು ಹೇಳುವುದು ಸತ್ಯ. ನಿಮ್ಮ ನುಡಿಗಳಿಂದ ನನಗೆ ವಿಶ್ವಾಸವಾಗಿದೆ. ಮಹರ್ಷಿಗಳೇ ಲೋಕಾಪವಾದವು ಪ್ರಬಲವಾದುದು. ಮೈಥಿಲಿಯು ನಿರ್ದೋಷಳೆಂದು ನನಗೆ ತಿಳಿದಿದ್ದರೂ ಲೋಕಾಪವಾದಕ್ಕೆ ಅಂಜಿ ತೊರೆದೆನು. ಇದಕ್ಕಾಗಿ ನನ್ನನ್ನು ಕ್ಷಮಿಸಿರಿ ಈ ಜನತೆಯ ಮಧ್ಯದಲ್ಲಿ ಮೈಥಿಲಿಯು ಪರಿಶುದ್ಧಳೆಂದು ಸ್ಪಷ್ಟವಾದ ಮೇಲೆ ಅವಳನ್ನು ಪ್ರೀತಿಯಿಂದ ಅಂಗೀಕರಿಸುವೆನು' ಎಂದು ಹೇಳಿದನು. ಸೀತೆಯು ಶಪಥ ಮಾಡುವಳೆಂದು ತಿಳಿದು, ಇಂದ್ರಾದಿ ದೇವತೆಗಳು ಬ್ರಹ್ಮದೇವನೊಡನೆ ಆಗಮಿಸಿದರು. ಆದಿತ್ಯರು, ರುದ್ರರು, ವಸುಗಳು, ಅಶ್ವಿನಿ ದೇವತೆಗಳು, ಮರುತ್ತುಗಳು, ಗಂಧರ್ವರು, ಅಪ್ಸರೆಯರು ಎಲ್ಲರೂ ಬಂದರು. ಸಾಧ್ಯರು, ವಿಶ್ವೇದೇವರು, ಪರಮರ್ಷಿಗಳು, ನಾಗ ಸುಪರ್ಣಸಿದ್ಧರೂ ಸರ್ವರೂ ಉತ್ಸಾಹದಿಂದ ಆಗಮಿಸಿದರು.

ತಪಸ್ಸಿಗೆ[೨] ಉಚಿತವಾದ ಕಾಷಾಯ ವಸ್ತ್ರಗಳನ್ನುಟ್ಟಿದ್ದ ಜಾನಕಿಯು ಕೈಮುಗಿದುಕೊಂಡು ತಲೆತಗ್ಗಿಸಿ ಕೆಳಗೆ ನೋಡುತ್ತಾ ಹೀಗೆಂದಳು:[೩]

'ಶ್ರೀರಾಮನನ್ನು ಹೊರತಾಗಿ ಇನ್ನೊಬ್ಬರನ್ನೂ ನಾನು ಮನಸ್ಸಿನಲ್ಲಿಯೂ ಚಿಂತಿಸುವುದಿಲ್ಲವೆಂಬುದು ಸತ್ಯ. ಈ ಸತ್ಯಬಲದಿಂದ ಮಾಧವ ಪತ್ನಿಯಾದ ಭೂದೇವಿಯು ತನ್ನ ಗರ್ಭದಲ್ಲಿ ಸೇರಿಸಿಕೊಳ್ಳುವುದಕ್ಕಾಗಿ ನನಗೆ ರಂಧ್ರವನ್ನೀಯಲಿ! ಮನಸ್ಸಿನಿಂದ ಕ್ರಿಯೆಯಿಂದ, ವಾಕ್ಕಿನಿಂದ ನಾನು ಶ್ರೀರಾಮನನ್ನೇ ಅರ್ಚಿಸುತ್ತಿರುವುದು ಸತ್ಯವಾದರೆ, ಭೂದೇವಿಯು ನನಗೆ ರಂಧ್ರವನ್ನೀಯಲೀ! ಶ್ರೀರಾಮನನ್ನು ಹೊರತಾಗಿ ಇನ್ನೊಬ್ಬ ಪುರುಷನನ್ನು ನಾನರಿಯೆನು ಎಂಬ ನನ್ನ ನುಡಿ ಸತ್ಯವಾದರೆ. ಭೂದೇವಿಯು ನನಗೆ ರಂಧ್ರವನ್ನೀಯಲಿ!' ಎಂದು ಶಪಥ ಮಾಡಿದಳು. ಸೀತೆಯು ಹೀಗೆ ಶಪಥ ಮಾಡಿದೊಡನೆಯೇ ಒಂದು ಅದ್ಭುತವು ನಡೆಯಿತು. ಭೂತಳವನ್ನು ಭೇದಿಸಿಕೊಂಡು ಶ್ರೇಷ್ಠವಾದ ಒಂದು ದಿವ್ಯ ಸಿಂಹಾಸನವು ಮೇಲೆದ್ದಿತು. ದಿವ್ಯ ದೇಹಧಾರಿಗಳೂ ದಿವ್ಯರತ್ನಭೂಷಿತರೂ ಬಲಾಢ್ಯರೂ ಆದ ತಕ್ಷಕಾದಿ ನಾಗರು ತಮ್ಮ ಶಿರಸ್ಸುಗಳಿಂದ ಆ ಸಿಂಹಾಸನವನ್ನು ಹೊತ್ತಿದ್ದರು.

**ತಸ್ಮಿಂಸ್ತು ಧರಣೀ ದೇವೀ ಬಾಹುಭ್ಯಾಂ ಗೃಹ್ಯ ಮೈಥಿಲೀಮ್ ।**
**ಸ್ವಾಗತೇನಾಭಿನಂದ್ಯೈನಾಮಾಸನೇ ಚೋಪವೇಶಯತ್[೪] ॥**

ಆ ಸಿಂಹಾಸನದಲ್ಲಿ ಕುಳಿತಿದ್ದ ಭೂದೇವಿಯು ಮೈಥಿಲಿಯನ್ನು ಸ್ವಾಗತದಿಂದ ಅಭಿನಂದಿಸಿ ಎರಡು ಕೈಗಳಿಂದಲೂ ಆಲಂಗಿಸಿ. ತನ್ನ ಸಿಂಹಾಸನದಲ್ಲಿ ಕುಳ್ಳಿರಿಸಿಕೊಂಡಳು. ಹಾಗೆಯೇ ಸಿಂಹಾಸನವು ಭೂಗರ್ಭದಲ್ಲಿ ರಸಾತಳಕ್ಕೆ ಇಳಿಯತೊಡಗಿತು. ವೈದೇಹಿಯು ರಸಾತಳವನ್ನು ಪ್ರವೇಶಿಸಿದಾಗ ಎಲ್ಲೆಡೆಯೂ ಕೋಲಾಹಲವಾಯಿತು. ರಾಮನಿಗೆ ಮತ್ತೆ ಶೋಕವುಂಟಾಯಿತು. ಅದರೊಂದಿಗೆ ಕ್ರೋಧವೂ ಉಕ್ಕಿತು. 'ನೋಡುತ್ತಿರುವಂತೆಯೇ[೫] ಸಾಕ್ಷಾಲ್ಲಕ್ಷ್ಮೀದೇವಿಯಂತಿರುವ ಸೀತೆಯು ಕಾಣದಾದಳು. ಹಿಂದೆ ಸೀತೆಯು ಮಹಾಸಾಗರದ ಆಚೆಗಿರುವ ಲಂಕೆಗೆ ಕಾಣದಂತೆ ಒಯ್ಯಬಲ್ಪಟ್ಟಳು. ಅಲ್ಲಿಂದ ಬಿಡಿಸಿಕೊಂಡು ಬಂದಿದ್ದೇನೆ. ಹೀಗಿರುವಾಗ ಭೂಗರ್ಭದಿಂದ ಅವಳನ್ನು ತರಲಾರೆನೇ? ಹೇ ವಸುಧೆ, ನನ್ನ ಸೀತೆಯನ್ನು ನನಗೆ ಒಪ್ಪಿಸಿಬಿಡು. ಅಥವಾ ನನ್ನ ರೋಷದ ಪ್ರಕಾರವೇನೆಂಬುದನ್ನು ತೋರಿಸಲೋ! ಸೀತೆಯನ್ನಾದರೂ ಒಪ್ಪಿಸು, ಇಲ್ಲವೇ ಭೂಮಿಯಲ್ಲಿ ಇಳಿದುಹೋಗುವಂತೆ ರಂಧ್ರವನ್ನಾದರೂ ಕಲ್ಪಿಸು. ಭೂದೇವಿ, ಮೈಥಿಲಿಯನ್ನು ಕರೆದುಕೊಂಡು ಬಾ, ಅವಳಿಗಾಗಿ ನಾನು ಹುಚ್ಚನಾಗಿದ್ದೇನೆ. ಸೀತೆಯನ್ನು ತಂದೊಪ್ಪಿಸದಿದ್ದಲ್ಲಿ ಪರ್ವತಾರಣ್ಯ ಸಹಿತವಾದ ನಿನ್ನ ಸಮಸ್ತ ಭೂಭಾಗವನ್ನು ವಿಧ್ವಂಸಗೊಳಿಸುವೆನು. ಭೂಮಂಡಲವನ್ನು ನಾಶಮಾಡುವೆನು, ಜಗತ್ತೆಲ್ಲವೂ ಜಲಮಯವಾಗಿ ಹೋಗಲಿ'! ಎಂದು ಆರ್ಭಟಿಸಿದನು.

ಬ್ರಹ್ಮದೇವನು[೬] ಕ್ರೋಧೋನ್ಮತ್ತನಾದ ರಾಮನನ್ನು ಸಮಾಧಾನಗೊಳಿಸಿದನು. ರಾಮನು ಯಾರೆಂಬುದನ್ನು ನೆನಪಿಸಿದನು. ರಾಮನು ಜನ್ಮತಳೆದ ಕಾರಣವನ್ನು ಸ್ಮರಿಸಿಕೊಳ್ಳಲು ಹೇಳಿದನು.

ಪರಿಶುದ್ಧಳೂ, ಪತಿವ್ರತೆಯೂ ಆದ ಸೀತೆಯು ನಿನ್ನ ನಿಜಸ್ವರೂಪವನ್ನಡರಲು ಸಮುತ್ಸುಕಳಾಗಿದ್ದಳು. ಅವಳು ನಿನ್ನ ಆಶ್ರಯವೆಂಬ ತಪಸ್ಸಿನ ಬಲದಿಂದ ನಾಗಲೋಕಕ್ಕೆ ಸುಖವಾಗಿ ಪ್ರಯಾಣ ಮಾಡಿದಳು. ಮತ್ತೆ ಅವಳ ಸಂಗವು ಸ್ವರ್ಗದಲ್ಲಿ– ವಿಷ್ಣುಲೋಕದಲ್ಲಿ ನಿನಗೆ ದೊರೆಯುವುದು' ಎಂದನು.

'ಸೀತೆಯು[೭] ತನ್ನ ಸತ್ಯಬಲದಿಂದ ಭೂಗರ್ಭವನ್ನು ಪ್ರವೇಶಿಸಿದಳು. ಯಜ್ಞವು ಮುಗಿದ ಮೇಲೆ ಮಕ್ಕಳಿಬ್ಬರನ್ನೂ ಕರೆದುಕೊಂಡು ಅಯೋಧ್ಯೆಗೆ ಬಂದನು. ಆನಂತರ ರಾಮನು ಬೇರೆ ಯಾರನ್ನೂ ವಿವಾಹವಾಗಲಿಲ್ಲ. ಮುಂದೆ ಅವನು ನಡೆಸಿದ ಪ್ರತಿಯೊಂದು ಯಜ್ಞದಲ್ಲಿಯೂ ಪತ್ನಿಯ ಸ್ಥಾನದಲ್ಲಿ ಸೀತೆಯ ಸುವರ್ಣ ಪ್ರತಿಮೆಯನ್ನಿರಿಸಿಕೊಳ್ಳುತ್ತಿದ್ದನು.'

**ರಾಮಚಂದ್ರ ಚರಿತ ಪುರಾಣದಲ್ಲಿ ಸೀತೆ**

ಈ ಕೃತಿಯ ಪ್ರಕಾರ ಸೀತೆಯು ಜನಕರಾಜರ ಸ್ವಂತ ಮಗಳಾಗಿದ್ದಾಳೆ. ಜನಕನ ಪತ್ನಿಯಾದ ಇಂದುಮತಿಯು ಅವಳಿ ಮಕ್ಕಳಿಗೆ ಜನ್ಮ ನೀಡುತ್ತಾಳೆ. ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಾಗಿದ್ದು ಹೆಣ್ಣು ಮಗುವೇ ಸೀತೆಯಾಗಿದ್ದಾಳೆ.

ಇಲ್ಲೊಂದು ವಿಚಿತ್ರ ಸನ್ನಿವೇಶವನ್ನು ಕವಿ ಮೂಡಿಸಿದ್ದಾನೆ. ರಾಮನ ಪರಾಕ್ರಮಕ್ಕೆ ಮನಸೋತ ಜನಕ ಸೀತೆಯನ್ನು ರಾಮನಿಗೆ ವಿವಾಹ ಮಾಡಿಕೊಡಬೇಕೆಂದು ಅಭಿಪ್ರಾಯಪಡುತ್ತಾನೆ. ಈ ಸಂದರ್ಭದಲ್ಲಿ ನಾರದನು ಸೀತೆಯನ್ನು ನೋಡುವ ಕುತೂಹಲದಿಂದ ಮಿಥಿಲೆಗೆ ಬರುತ್ತಾನೆ.

ಹೆಣ್ಣಿನ ಚೆಲುವನ್ನು ನೋಡುವ ಕುತೂಹಲ ನಾರದ ಮುನಿಗೆ ಮೂಡಿದ್ದು ಸರಿಯೇ? ಜನಿವಾರ, ಕೌಪೀನ, ಜುಟ್ಟು, ಚೋಳುಮುಂಡೆ, ಜಪಮಣಿಸರ ದಂಡಗಳೊಂದಿಗೆ ಕೂಡಿದ ವ್ಯಕ್ತಿಯನ್ನು ಹೆಣ್ಣು ನೋಡಿದರೆ ಅಸಹ್ಯಪಟ್ಟುಕೊಳ್ಳುವುದಿಲ್ಲವೇ? ಆಕಾಶಮಾರ್ಗದಿಂದ ಕನ್ನೆಮಾಡದ ಬಾಗಿಲಿಗೆ ಬರುತ್ತಾನೆ. ಅಲ್ಲಿ ನಿಂತು ವೈಢೂರ್ಯಮಯ ವೇದಿಕೆಯಲ್ಲಿ ತಾವರೆಗೊಳದಲ್ಲಿ ನಲಿಯುತ್ತಿರುವ ಹಂಸೆಯಂತಿರುವ ಸೀತೆಯನ್ನು ಕಂಡ. ಅಕಸ್ಮಾತ್ತಾಗಿ ಅವನನ್ನು ಕಂಡ ಸೀತೆ ಹೆದರಿದ ಹರಿಣಿಯಂತೆ ಓಡಿದಳು. ವಿವೇಕಶೂನ್ಯನಾದ ನಾರದನು ಅವಳತ್ತ ಆಕರ್ಷಿತನಾಗಿ ಹಿಂದೆಯೇ ಓಡಿದನು. ಈ ಓಟದಿಂದ ಮತ್ತು ಇಂದ್ರಿಯಲೋಭದಿಂದ ಸೀತೆಯನ್ನು ದೃಷ್ಟಿಸಿ ಪಾಪವನ್ನು ಹೊಂದಿದ. ಹಾರಿ ನೆಗೆದು ಓಡಿದ ನಾರದನು ಕೈಲಾಸವನ್ನು ಸೇರಿ ವಿಶ್ರಮಿಸಿದ. ವಿಷಾದ ಮತ್ತು ಖೇದದಿಂದ ನೊಂದರೂ ತನ್ನನ್ನು ನೋಯಿಸಿದ ಅವಳಿಗೂ ಅಪಾರ ನೋವುಂಟುಮಾಡಬೇಕೆಂಬ ಯೋಚನೆ ಮಾಡಿದ್ದು ವಿಪರೀತ. ಸೀತೆಯ ಚೆಲುವಾದ ರೂಪವನ್ನು ಬಟ್ಟೆಯ ಮೇಲೆ ಬರೆದ. ನಂತರ ವಿದ್ಯಾಧರ ರಾಜಧಾನಿಯಾದ ರಥನೂಪುರ ಚಕ್ರವಾಳಪುರದ ಹೊರವಲಯದಲ್ಲಿದ್ದ ಮಣಿಭವನವನ್ನು ಹೊಕ್ಕು ಚಿತ್ರವನ್ನು ಅಲ್ಲಿರಿಸಿದ. ಅಲ್ಲಿಗೆ ಬಂದ ಪ್ರಭಾಮಂಡಲನು ಆ ಚಿತ್ರವನ್ನು ಕಂಡು ಕಾಮ ಬಯಕೆಯಿಂದ, ಕಣ್ಮುಚ್ಚಿ ಮೂರ್ಛಿತನಾದ. ವಿಷಯ ತಿಳಿದ ಇಂದುಮತಿಯು

ಬಂದು ಮಗನಿಗೆ ಶೈತ್ಯೋಪಚಾರವನ್ನು ಮಾಡಿದನು. ಆ ಚಿತ್ರವು ಅಲ್ಲಿಗೆ ಬಂದುದು ಹೇಗೆಂದು ವಿಚಾರಿಸಲಾಗಿ ನಾರದನು ಬಂದು ಪ್ರಭಾಮಂಡಲನಿಗೆ ಅನುರೂಪಳಾದ ಕನ್ಯೆಯು ಇವಳಾದ್ದರಿಂದ ನಾನೇ ಈ ಚಿತ್ರವನ್ನು ತಂದಿಟ್ಟೆನ್ನೆನ್ನುತ್ತಾನೆ. ಸೀತೆಯ ಚಿತ್ರವು ಪ್ರಭಾಮಂಡಲಲ್ಲಿ ಮೋಹಾಂಧಕಾರವನವನ್ನೇ ಉಂಟುಮಾಡಿತು. ಮುಂದೆ ಪ್ರಭಾಮಂಡಲನಿಗೆ ಪೂರ್ವಭವದ ಸ್ಮರಣೆಯುಂಟಾಗಿ ಸೀತೆಯು ತನ್ನ ಸಹೋದರಿ ಎಂದು ತಿಳಿಯುತ್ತದೆ. ತಂಗಿಯ ಮೇಲೆ ಮೋಹಗೊಂಡ ತನ್ನ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾನೆ.

ಮುಂದೆ ಸೀತಾಪಹರಣವಾದ ನಂತರ ಸೀತೆ ತನ್ನ ವಶವಾಗದಿರಲು ಚಿಂತಿತನಾಗಿ ಕುಳಿತಿದ್ದಾಗ ಮಂಡೋದರಿಯು ಅವನ ಪರವಾಗಿ ಸೀತೆಯನ್ನು ಒಪ್ಪಿಸಲು ಹೋಗುತ್ತಾಳೆ. ಸೀತೆಯ ರೂಪವನ್ನು ಕಂಡು ಮಂಡೋದರಿ ಹೀಗೆನ್ನುತ್ತಾಳೆ.[೯೮]

'ನಿನ್ನ ನವಯೌವ್ವನವನ್ನು ಕಣ್ಣುಗಳಿಗೆ ಹಬ್ಬವೆನಿಸುವ ರೂಪವನ್ನು ಎಷ್ಟು ಹೊಗಳಿದರೂ ಕಡಿಮೆಯೇ. ಮೇನಕೆಯೇ ಮನಸೋತು ಬಂದಾಗ ದಶಾನನು ಅವಳಿಗೆ ವಶನಾಗಲಿಲ್ಲ, ಅಂತಹವನು ನಿನ್ನನ್ನು ಒಲಿದಿದ್ದಾನೆಂದರೆ ನಿನ್ನ ರೂಪವನ್ನು ಹೊಗಳಲು ಸಾಧ್ಯವೇ ಎನ್ನುತ್ತಾಳೆ.'[೯೯]

ಮಂಡೋದರಿಯ ಮಾತನ್ನು ಕೇಳಿದ ಸೀತೆ ಕುಪಿತಳಾದಳು. ನೀನಾಡುತ್ತಿರುವ ಮಾತು ಮದದಿಂದ ಕೂಡಿದವಳ ಮಾತೇ ಹೊರತು ಕುಲವಧುವಾಡುವ ಮಾತಲ್ಲ. ಒಳಿತನ್ನು ಆಲೋಚಿಸದೆ, ಅಪಕೀರ್ತಿ ಪಾಪಗಳಿಗೆ ಹೆದರದೆ ಇಂತಹ ಅಸಂಬದ್ಧ ಮಾತುಗಳನ್ನು ಬೇರೆ ಯಾರೂ ಆಡಲು ಸಾಧ್ಯವಿಲ್ಲ. ನನ್ನ ಒಡೆಯನು ರಾಮ ಮಾತ್ರ, ಅವನನ್ನು ಬಿಟ್ಟು ಬೇರೆಯವರೆಲ್ಲರೂ ನನಗೆ ಪರಪುರುಷರು ಎನ್ನುತ್ತಾಳೆ.

ರಾವಣನು ಸೀತೆಯನ್ನು ಒಲಿಸಿಕೊಳ್ಳಲು ಹಲವು ಬಗೆಯಲ್ಲಿ ಪ್ರಯತ್ನಪಡುತ್ತಾನೆ. ಸೀತೆಯ ವಿರೋಧದ ನುಡಿಗಳು ಅವನಿಗೆ ಸುಗ್ಗಿಯ ಕಾಲದ ಕೋಗಿಲೆಯ ದನಿಯಂತೆ ಇಂಪಾಗಿ ಕೇಳಿಸುತ್ತಿತ್ತು. ಹೀಗಾಗಿ ಅವಳನ್ನು ಹೆದರಿಸಿಯಾದರೂ ಒಲಿಸಿಕೊಳ್ಳುವ ಪ್ರಯತ್ನಪಡುತ್ತಾನೆ. ರಾವಣನು ಭಯಾನಕವಾದ ಸನ್ನಿವೇಷವನ್ನು ಸೃಷ್ಟಿಸಿದಾಗ ಸೀತೆಯು ಜಿನ ಚರಣಗಳನ್ನು ನೆನೆಯುತ್ತ ಪಂಚಮಂತ್ರಗಳನ್ನು ಪುನರುಚ್ಚರಿಸುತ್ತ ಹೋದಳು. ಇದರಿಂದ ಆ ಭಯಂಕರ ಸನ್ನಿವೇಶಗಳನ್ನು ಎದುರಿಸಲು ಸಾಧ್ಯವಾಯಿತು.

ಸೀತೆಯು ದುಃಖದಿಂದ ರೋಧಿಸುತ್ತಿದ್ದಾಗ ಆ ಧ್ವನಿಯನ್ನು ಕೇಳಿ ವಿಭೀಷಣನು ಬರುತ್ತಾನೆ. ಸೀತೆಯನ್ನು ವಿಚಾರಿಸಲು ಆಕೆ ತನ್ನ ವೃತ್ತಾಂತವನ್ನು ಹೇಳುತ್ತಾಳೆ. ಇದನ್ನು ಕೇಳಿದ ವಿಭೀಷಣನಿಗೆ ಇದೊಂದು ಅಪಶಕುನವಾಗಿ ಕಾಣುತ್ತದೆ. 'ಪರಸ್ತ್ರೀಯರನ್ನು ಅಪಮಾನಿಸಿದರೆ ಪುರುಷ ಧರ್ಮವೇ ನಾಶವಾಗುತ್ತದೆ, ದುರ್ಗತಿಯುಂಟಾಗಿ ಭೂಮಿಯು ನಾಶವಾಗುತ್ತದೆ' ಎನ್ನುವ ವಿಭೀಷಣನ ಮಾತನ್ನು ಕೇಳಿದ ರಾವಣನು 'ಸ್ತ್ರೀರತ್ನಕ್ಕೆ ನಾನಲ್ಲದೆ ಬೇರಾರು ಒಡೆಯರಾಗಲು ಸಾಧ್ಯ? ನನ್ನ ಭುಜಬಲವನ್ನು ಮೀರುವವರು ಯಾರಿದ್ದಾರೆ? ಎಂದು ಅಹಂಕಾರದಿಂದ ಹೂಂಕರಿಸಿದ. ತಾನೊಂದು ಆನೆಯೇರಿ

ಸೀತೆಯನ್ನು ಪುಷ್ಪಕವಿಮಾನದಲ್ಲಿ ಕುಳ್ಳರಿಸಿ ಸೇನೆಯೊಂದಿಗೆ ಮೆರವಣಿಗೆ ಹೊರಟು ದಾರಿಯಲ್ಲಿ ಊರಿನ ಗೋಪುರಗಳು, ಬಹಿರೋದ್ಯಾನ ಮುಂತಾದವುಗಳನ್ನು ಸೀತೆಗೆ ತೋರಿಸುತ್ತ ಹೋಗುತ್ತಾನೆ. ಆದರೆ ಸೀತೆ ಇವಾವುದೂ ಕಿವಿಗೆ ಬೀಳದಷ್ಟು ದುಃಖಿತಳಾಗಿದ್ದಳು. ಈ ಪ್ರಸಂಗಗಳು ಮೂಲ ರಾಮಾಯಣದಲ್ಲಿ ಇರುವುದಿಲ್ಲ.

**ರಾಮಚರಿತ ಮಾನಸದಲ್ಲಿ ಸೀತೆ**

ತುಲಸೀ ರಾಮಾಯಣದಲ್ಲಿ ಸೀತೆಯ ಮೊದಲ ಪ್ರವೇಶವಾಗುವುದು ಮಿಥಿಲಾನಗರಿಯ ತೋಟದಲ್ಲಿ. ಅಲ್ಲಿನ ಗಿರಿಜೆಯ ದೇವಾಲಯದಲ್ಲಿ ಗೌರಿ ಪೂಜೆಯನ್ನು ಮಾಡಲು ತಾಯಿಯ ಅಪ್ಪಣೆಯಂತೆ ಅಲ್ಲಿಗೆ ಬಂದಿದ್ದಳು. ಪೂಜೆಯನ್ನು ಮುಗಿಸಿ ತನಗೆ ಅನುರೂಪನಾದ ವರನನ್ನು ಕರುಣಿಸಬೇಕೆಂದು ವರವನ್ನು ಬೇಡಿದಳು. ಅವಳ ಸಖಿಯರು ಹೂದೋಟವನ್ನು ನೋಡಲು ಹೋಗಿದ್ದವರು ಹಿಂದಿರುಗಿ ಬಂದು ಇಬ್ಬರು ರಾಜಕುಮಾರರ ಬಗ್ಗೆ ಹೇಳತೊಡಗಿದರು. ದರ್ಶನೀಯರಾದ ಇವರನ್ನು ತಪ್ಪದೇ ನೋಡಬೇಕು ಎಂದಾಗ ಆ ಸಖಿಯ ಮಾತುಗಳು ಸೀತೆಗೆ ಬಹು ಪ್ರಿಯವೆನಿಸಿತು. ಅವರ ದರ್ಶನಕ್ಕಾಗಿ ಕಣ್ಣುಗಳು ಹಾತೊರೆದವು.[೧೦೦]

ಸೀತಾದೇವಿಯು ರಾಜಕುಮಾರರ ದರ್ಶನ ಮಾಡಲು ಸುತ್ತಲೂ ನೋಡುತ್ತ ಬರುತ್ತಿದ್ದಳು. ಎಲ್ಲಿ ಹೋಗಿದ್ದಾರೆ ಕಾಣುತ್ತಲೇ ಇಲ್ಲವಲ್ಲ ಎಂದು ಯೋಚಿಸುತ್ತಾ ಬರುತ್ತಿದ್ದಳು. ಅವಳು ದೃಷ್ಟಿ ಹರಿಸಿದ ಕಡೆಯೆಲ್ಲ ಸಾತ್ವಿಕ ಭಾವವೇ ಕಾಣುತ್ತಿತ್ತು. ಆಗ ಸಖಿಯರು ಲತಾನಿಕುಂಜದ ಮರೆಯಲ್ಲಿದ್ದ ರಾಜಕುಮಾರರನ್ನು ತೋರಿಸಿದರು. ಶ್ರೀರಾಮನ ರೂಪವೈಭವಗಳಿಗೆ ಆಕರ್ಷಿತಳಾದ ಸೀತೆ ಕಳೆದುಹೋದ ನಿಧಿಯು ದೊರಕಿದಂತೆ ತನ್ನ ಕಣ್ಣುಗಳಿಂದ ಆತನ ಸೌಂದರ್ಯ ಪಾನ ಮಾಡಿದಳು. ನಿಶ್ಚಲ ನೇತ್ರಳಾಗಿ, ಪ್ರೇಮ ವಿಹ್ವಲಳಾಗಿ, ಶರತ್ಕಾಲದ ಚಂದ್ರನನ್ನು ನೋಡಿದ ಚಕೋರಿಯಂತೆ ಪರವಶಳಾಗಿ ನೋಡುತ್ತ ನಿಂತುಬಿಟ್ಟಳು. ತನ್ಮೂಲಕ ರಾಮನನ್ನು ಹೃದಯ ಮಂದಿರದಲ್ಲಿ ಬಂಧಿಸಿ ರೆಪ್ಪೆಗಳೆಂಬ ಕದವನ್ನು ಮುಚ್ಚಿದಳು. ರಾಮಧ್ಯಾನದಲ್ಲಿ ನಿರತಳಾದಳು. ಅರಮನೆಗೆ ಹಿಂದಿರುಗುವ ಸೀತೆಯು ಶಿವಧನಸ್ಸು ಅತಿ ಕಠೋರವೆಂದು ನೆನೆದು ನಿಡುಸುಯ್ಯುತ್ತ ಹೋದಳು. ಭವಾನಿಯ ಪಾದಗಳನ್ನು ಆಶ್ರಯಿಸಿದಳು. ಆಕೆಯನ್ನು ಅಲಂಕರಿಸಿದ ಕೊರಳ ಹೂವಿನ ಮಾಲೆಯು ಜಾರಿಬಿತ್ತು. ಸೀತೆಯು ಆ ಹೂವನ್ನು ತಲೆಯಲ್ಲಿ ಮುಡಿದುಕೊಂಡಳು.

ರಾಮನು ಶಿವಧನಸ್ಸಿನ ಬಳಿಗೆ ಹೋಗುತ್ತಿರುವಾಗ ಸೀತೆಯು ಕಂಡಕಂಡ ದೇವರಿಗೆಲ್ಲ ಕೈಮುಗಿದು, ಮನದಲ್ಲೇ ಹರಕೆ ಹೊರುತ್ತಿದ್ದಳು "ಪಾರ್ವತೀ ಪರಮೇಶ್ವರರೇ ನನಗೆ ಒಲಿಯಿರಿ. ನಾನು ಮಾಡಿದ ಸೇವೆಗೆ ಪ್ರಸನ್ನರಾಗಿ, ನನ್ನ ಮೇಲೆ ಕೃಪೆಗೈದು ಶಿವಧನುಸ್ಸಿನ ಭಾರವನ್ನು ತಗ್ಗಿಸಿಬಿಡಿ 'ಓ ಗಣನಾಯಕಾ! ವರದಾಯಕಾ! ಇಂದಿನ ದಿನದ ನಿರೀಕ್ಷೆಯಲ್ಲೇ ನಿನ್ನನ್ನು ನಾನು ಸೇವಿಸುತ್ತಾ ಬಂದಿರುವೆನು. ನನ್ನ ಪ್ರಾರ್ಥನೆಯನ್ನು ಮನ್ನಿಸಿ ಧನುಸ್ಸಿನ ಭಾರವನ್ನು ಹಗುರಮಾಡು' ಎಂದು ಬೇಡಿಕೊಂಡಳು.

ಸೀತಾರಾಮರ ವಿವಾಹಕ್ಕೆ ಕೋಸಲದಿಂದ ದಶರಥನ ಪರಿವಾರವು ಮಿಥಿಲೆಗೆ ಬಂದಿತು. ದಿಬ್ಬಣಿಗರು ಜನಕಪುರಿಗೆ ಬಂದಿದ್ದನ್ನು ತಿಳಿದು ಸೀತೆಯು ತನ್ನ ಮಹಿಮೆಯನ್ನು ಸ್ವಲ್ಪ ತೋರಿಸಿದಳು. ಅವಳು ತನ್ನ ಎಲ್ಲ ಸಿದ್ಧಿಗಳನ್ನೂ ಮನದಲ್ಲಿ ನೆನೆದು ಅವರನ್ನು ದಶರಥನ ಆತಿಥ್ಯಕ್ಕೆ ನೆರವಾಗಲು ಕಳುಹಿಸಿದಳು. ಆ ಸಿದ್ಧಿಗಳು ಸೀತೆಯ ಅಪ್ಪಣೆಯಂತೆ ಬಿಡದಿ ಮನೆಗಳಲ್ಲಿರುವವರಿಗೆ ಸಕಲ ಸುಖ ಸಂಪತ್ತು ಹಾಗೂ ಇಂದ್ರನ ಅಮರಾವತಿಯ ಭೋಗ ವಿಲಾಸವನ್ನು ಒದಗಿಸಿದರು.[೧೦೧]

ರಾಮನ ವನವಾಸದ ವಾರ್ತೆಯನ್ನು ಕೇಳಿದ ಸೀತಾದೇವಿ ವ್ಯಾಕುಲಳಾಗಿ ಕೌಸಲ್ಯೆಯ ಬಳಿ ಬಂದಳು. ತಾನೂ ರಾಮನೊಂದಿಗೆ ಹೋಗುವ ಇಂಗಿತವನ್ನು ವ್ಯಕ್ತಪಡಿಸಿದಳು. ಅದಕ್ಕೆ ರಾಮನು ಎಲೈ ರಾಜಕುಮಾರಿಯೇ! ನನ್ನ ಬುದ್ಧಿವಾದವನ್ನು ಶ್ರದ್ಧೆಯಿಂದ ಕೇಳು. ಮನಸ್ಸಿನಲ್ಲಿ ಅನ್ಯಥಾ ಭಾವಿಸಬೇಡ. ನನ್ನ ಮತ್ತು ನಿನ್ನ ಒಳಿತನ್ನೇ ಎಣಿಸುವೆಯಾದರೆ ನನ್ನ ಮಾತನ್ನು ಪಾಲಿಸಿ ಮನೆಯಲ್ಲಿದ್ದರೆ ನನ್ನ ಅಪ್ಪಣೆಯನ್ನು ಪಾಲಿಸಿದಂತಾಗುತ್ತದೆ. ಅತ್ತೆ ಮಾವಂದಿರ ಸೇವೆ ಮಾಡಲು ಸಾಧ್ಯ. ಅದಕ್ಕಿಂತ ಮಿಗಿಲಾದ ಧರ್ಮವಿಲ್ಲ ಎನ್ನುತ್ತಾನೆ. ಪ್ರೇಮವಶಳಾಗಿ ಹಟ ಮಾಡಿದರೆ ಅದರ ಪರಿಣಾಮ ದುಃಖಪಡಬೇಕಾಗುವುದು ಎನ್ನುತ್ತಾನೆ. ಕಾಡಿನಲ್ಲಿ ಒದಗಬಹುದಾದ ನಾನಾ ವಿಧವಾದ ಕಷ್ಟಗಳನ್ನು ಹೇಳುತ್ತಾನೆ. ಸೀತೆಯು ರಾಮನಿಗೆ ಉತ್ತರಿಸಲಾಗದೆ ಕೌಸಲ್ಯೆಯ ಕಾಲಿಗೆರಗಿ ಹೇಳಲಾರಂಭಿಸಿದಳು. 'ಅತ್ತೆಮ್ಮನವರೇ! ನನ್ನ ದಿಟ್ಟತನವನ್ನು ಮನ್ನಿಸಿರಿ. ನನಗೆ ಹಿತವಾಗುವಂತಹ ಬುದ್ಧಿವಾದವನ್ನೇ ನನ್ನ ಪ್ರಾಣೇಶನು ನೀಡಿರುವನು. ಆದರೆ ನನಗೆ ಪತಿಯ ಅಗಲಿಕೆಗಿಂತ ಮಿಗಿಲಾದ ದುಃಖ ಈ ಜಗತ್ತಿನಲ್ಲಿ ಬೇರಾವುದೂ ಇಲ್ಲ ಎನ್ನಿಸುತ್ತದೆ' ಎನ್ನುತ್ತಾಳೆ.

**ದೋ– ಖಗ ಮೃಗ ಪರಿಜನ ನಗರು ಬನು ಬಲಕಲ ಬಿಮಲದುಕೂಲ ।**

**ನಾಥ ಸಾಥ ಸುರಸದನ ಸಮ ಪರನಸಾಲ ಸುಖ ಮೂಲ[೧೦೨] ॥**

ಸ್ವಾಮಿಯೇ ನಿನ್ನೊಡನೆ ಇದ್ದಾಗ ಪಶುಪಕ್ಷಿಗಳೇ ನನ್ನ ಕುಟುಂಬ, ವನವೇ ನಗರ, ನಾರುಬಟ್ಟೆಯೇ ನಿರ್ಮಲ ವಸ್ತ್ರ, ಪರ್ಣಕುಟಿಯೇ ಸ್ವರ್ಗತುಲ್ಯ ಸುಖ ಕೊಡುತ್ತದೆ ಎನ್ನುತ್ತಾಳೆ. ಅಲ್ಲಿ ನಿಮ್ಮೆಲ್ಲ ಸೇವೆಗಳನ್ನೂ ಮಾಡುತ್ತೇನೆ ಎನ್ನುತ್ತಾಳೆ.

**ದೋ– ದೋ–ಐಸೆಉ ಬಚನ ಕಠೋರ ಸುನಿ ಜೌಂ ನ ಹೃದಉ ಬಿಲಗಾನ ।**

**ತೌ ಪ್ರಭು ಬಿಷಮ ಬಿಯೋಗ ದುಃಖ ಸಹಿಹಹಿಂ ಪಾವಂರ ಪ್ರಾನ[೧೦೩] ॥**

ಇಂಥ ವಚನಗಳನ್ನು ಕೇಳಿಯೂ ನನ್ನ ಎದೆ ಒಡೆದುಹೋಗಿದಿದ್ದರೆ, ಈ ಪಾಮರ ಪ್ರಾಣಗಳು ನಿಮ್ಮ ವಿಯೋಗ ದುಃಖವನ್ನೂ ಸಹಿಸಿಯಾವೋ ಏನೋ ಆದರೆ ನನ್ನ ಪ್ರಾಣವಂತೂ ನಿಲ್ಲವು ಎನ್ನುತ್ತಾಳೆ. ಆಗ ರಾಮನು ಹಟದಿಂದ ಈಕೆಯನ್ನು ಇಲ್ಲೇ ಇರಿಸಿದರೆ ಇವಳು ಪ್ರಾಣಗಳನ್ನೇ ತೊರೆದಾಳು ಎಂದು ಭಾವಿಸಿ ಅವಳು ಕಾಡಿಗೆ ಬರಲು ಅನುಮತಿ ನೀಡಿದನು. ಇದೇ ಸಂದರ್ಭದಲ್ಲಿ ಸೀತೆ ಕೌಸಲ್ಯೆಗೆ ಹೇಳುತ್ತಾಳೆ 'ಅಮ್ಮಾ! ನಾನು ತುಂಬಾ ನಿರ್ಭಾಗ್ಯೆ, ನಿಮ್ಮ ಸೇವೆ ಮಾಡುವ ಹೊತ್ತಿಗೆ ದೈವವು ನನಗೆ ವನವಾಸವನ್ನು ತಂದೊಡ್ಡಿತು.

ನನ್ನ ಮನೋರಥ ಕೈಗೂಡಲಿಲ್ಲ. ನೀವು ಚಿತ್ತಕ್ಷೋಭೆಯನ್ನು ತೊರೆಯಿರಿ. ಆದರೆ ಕೃಪೆಯನ್ನು ಮಾತ್ರ ತೊರೆಯಬೇಡಿರಿ. ಕರ್ಮಗತಿಯು ತುಂಬಾ ಕಠೋರವಾದದು ನನ್ನದೇನೂ ತಪ್ಪಿಲ್ಲ' ಎಂದಳು.

ಮುಂದೆ ವನದಲ್ಲಿ ಹಲವಾರು ಪ್ರದೇಶಗಳನ್ನು ಸುತ್ತಿ ವಾಲ್ಮೀಕಿ ಮುನಿಗಳ ಆಶ್ರಮವನ್ನು ಸೇರಿದರು. ವಾಲ್ಮೀಕಿಗಳನ್ನು ತಮ್ಮ ವಾಸಕ್ಕೆ ಅನುಕೂಲಕರವಾದ ಪ್ರದೇಶ ಯಾವುದೆಂದು ಕೇಳಿದಾಗ ಅವರು ಚಿತ್ರಕೂಟ ಪರ್ವತವನ್ನು ಸೂಚಿಸುತ್ತಾರೆ. ಅದರಂತೆ ಸೀತಾರಾಮ ಲಕ್ಷ್ಮಣರು ಅಲ್ಲಿಯೇ ಪರ್ಣಕುಟಿಯನ್ನು ಕಟ್ಟಿಕೊಂಡು ವಾಸಿಸತೊಡಗುತ್ತಾರೆ. ಮುಂದೊಂದು ದಿನ ಸೀತೆಗೆ ಒಂದು ಕನಸು ಬೀಳುತ್ತದೆ ಅದರಲ್ಲಿ ಭರತನು ಪರಿವಾರ ಸಮೇತ ತಾವಿರುವೆಡೆಗೆ ಬಂದಿರುತ್ತಾನೆ. ಅವನ ಮೈ ರಾಮವಿಯೋಗಾಗ್ನಿಯಿಂದ ಸುಡುತ್ತಿತ್ತು. ಜೊತೆಯಲ್ಲಿದ್ದ ಅಯೋಧ್ಯೆಯ ಜನರೆಲ್ಲರೂ ದುಃಖಿಗಳಾಗಿದ್ದರು ಎನ್ನುತ್ತಾಳೆ. ಇದು ಸೀತೆಗೆ ಭರತನು ಆಗಮಿಸುವ ವಿಷಯವನ್ನು ಮೊದಲೇ ಸೂಚಿಸಿತ್ತು.

ವನದಲ್ಲಿ ಅನಸೂಯಾದೇವಿಯನ್ನು ಭೇಟಿಮಾಡಿದಾಗ ಅವಳು ಸೀತೆಗೆ ಸ್ತ್ರೀಧರ್ಮವನ್ನು ವಿವರಿಸಿದಳು. ತನ್ನ ಮಧುರ ನಡವಳಿಕೆಯಿಂದ ಅನಸೂಯೆಯ ಮನಗೆದ್ದಳು. ಶೂರ್ಪಣಖಿಯ ಪ್ರಸಂಗವಾದ ನಂತರ ರಾಮನು ಸೀತೆಗೆ ಅಗ್ನಿಯಲ್ಲಿ ವಾಸವಾಗಿರುವಂತೆ ಹೇಳುತ್ತಾನೆ. ಅದರಂತೆ ಸೀತೆಯು ಅಗ್ನಿಯಲ್ಲಿ ಬೆರೆತುಹೋದಳು. ಛಾಯಾ ರೂಪದ ಸೀತೆಯು ರಾಮನೊಂದಿಗಿದ್ದಳು. ರಾಮನ ಈ ಲೀಲೆಯನ್ನು ಲಕ್ಷ್ಮಣನೂ ಅರಿಯದೆ ಹೋದನು. ನಂತರ ಮಾಯಾಮೃಗದ ಸನ್ನಿವೇಶದಲ್ಲಿ ಮಾರೀಚನು ಹಾ ಲಕ್ಷ್ಮಣಾ! ಎಂದು ಕೂಗಿದಾಗ ಹೆದರಿದ ಸೀತೆ ಲಕ್ಷ್ಮಣನಿಗೆ ಹೋಗೆನ್ನುತ್ತಾಳೆ. 'ಅಮ್ಮಾ! ಶ್ರೀರಾಮನು ಭೃಕುಟಿ ವಿಲಾಸಮಾತ್ರದಿಂದ ಇಡೀ ಸೃಷ್ಟಿಯನ್ನು ಲಯಗೊಳಿಸಬಲ್ಲನು. ಅಂತಹ ಸ್ವಾಮಿಗೆ ಕನಸಿನಲ್ಲಿಯೂ ಸಂಕಟಗಳು ಬರಲಾರದು' ಎಂದಾಗ ಸೀತೆಯು ಲಕ್ಷ್ಮಣನಿಗೆ ಮರ್ಮಘಾತಕವಾಗುವಂತಹ ಮಾತುಗಳನ್ನಾಡುತ್ತಾಳೆ.

ಲಕ್ಷ್ಮಣನು ದೂರ ಹೋಗುವ ಸಂದರ್ಭಕ್ಕಾಗಿ ಕಾದಿದ್ದ ರಾವಣನು ಸೀತೆಯ ಬಳಿ ಅನೇಕ ಸಂಗತಿಗಳನ್ನು, ರಾಜನೀತಿಯನ್ನು ಹೇಳುತ್ತಾನೆ. ಅವಳಿಗೆ ಭಯ ತೋರಿ, ತನ್ನ ಪ್ರೇಮವನ್ನು ಪ್ರಕಟಿಸುತ್ತಾನೆ. 'ಎಲೈ ಸನ್ಯಾಸಿಯೇ! ನೀನು ಓರ್ವ ದುಷ್ಟನಂತೆ ಮಾತನಾಡುತ್ತಿರುವೆ. ಅಲ್ಪ ಮೊಲವು ಸಿಂಹಿಣಿಯನ್ನು ಬಯಸಿದಂತೆ ನನ್ನನ್ನು ಬಯಸಿ ಕಾಲವಶನಾಗಿರುವೆ' ಎನ್ನುತ್ತಾಳೆ. ಇದರಿಂದ ರಾವಣನು ಕುಪಿತನಾಗುತ್ತಾನೆ.

**ದೋ– ಕ್ರೋಧವಂತ ತಬ ರಾವನ ಲಿನ್ಹಿಸಿ ರಥ ಬೈಠಾಇ ।**

**ಚಲಾ ಗಗನಪಥ ಆತುರ ಭಯಂ ರಥ ಹಾಂಕಿ ನ ಜಾಇ**[೧೦೪] **॥**

ಕ್ರೋಧೋನ್ಮತ್ತನಾದ ರಾವಣನು ಸೀತೆಯನ್ನು ಬಲವಂತವಾಗಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಆತುರದಿಂದ ಆಕಾಶಮಾರ್ಗದಿಂದ ಹೊರಟನು. ಆದರೆ ಆಶ್ಚರ್ಯವೆಂದರೆ ಭಯ ವಿಹ್ವಲನಾದ ಅವನು ರಥವನ್ನು ಸರಿಯಾಗಿ ನಡೆಸಲಾಗಲಿಲ್ಲ. ರಥದಲ್ಲಿ ಸೀತೆಯು ದುಃಖಿಸುತ್ತಿದ್ದಳು. ತನ್ನ ಯಾವ ಅಪರಾಧಕ್ಕಾಗಿ

ಈ ಶಿಕ್ಷೆಯೆಂದು ವಿಲಾಪಿಸಿದಳು. ಲಕ್ಷ್ಮಣನದೇನೂ ದೋಷವಿಲ್ಲ. ನಾನೇ ಸಿಟ್ಟುಗೊಂಡು ಮಾತನಾಡಿದೆ. ಅದರ ಫಲವನ್ನು ಅನುಭವಿಸುತ್ತಿದ್ದೇನೆ. ಯಜ್ಞದ ಹಸುವನ್ನು ಪುರೋಡಾಶ(ಕತ್ತೆ)ವು ತಿನ್ನಬಯಸುತ್ತಿದೆ ಎಂದು ಗೋಳಿಟ್ಟಳು. ಜಟಾಯುವಿನೊಂದಿಗೆ ಹೋರಾಡಿ ಅವನ ರೆಕ್ಕೆಗಳನ್ನು ಕತ್ತರಿಸಿ ಭಯಾಂದೋಳನದಿಂದ ಸೀತೆಯನ್ನು ರಥದಲ್ಲಿ ಕುಳ್ಳರಿಸಿಕೊಂಡು ಹೊರಟುಹೋದನು. ಬೇಡನ ಬಲೆಗೆ ಬಿದ್ದ ಚಿಗರೆಯಂತೆ ದುಃಖಿಸುತ್ತ ಹೋಗುತ್ತಿರುವಾಗ ಕೆಳಗೆ ಒಂದು ಪರ್ವತದ ಮೇಲೆ ಕುಳಿತಿದ್ದ ಕಪಿಗಳನ್ನು ಕಂಡು ಸೀತೆಯು ತನ್ನ ಆಭರಣಗಳನ್ನು ತನ್ನ ಉತ್ತರೀಯದಲ್ಲಿ ಕಟ್ಟಿ ಕೆಳಗೆ ಎಸೆದಳು.[೧೦೫]

ದುಷ್ಟನಾದ ರಾವಣನು ಹೆದರಿಕೆಯಿಂದಲೂ, ಪ್ರೀತಿಯಿಂದಲೂ ಸೀತೆಯನ್ನು ಒಲಿಸಿಕೊಳ್ಳಲು ಸಾಧ್ಯವಾಗದಿದ್ದಾಗ ರಾಕ್ಷಸ ಸ್ತ್ರೀಯರ ರಕ್ಷಣೆಯಲ್ಲಿರಿಸಿದನು. ಸೀತೆಯಾದರೋ ಜಿಂಕೆಯನ್ನು ಬೆನ್ನಟ್ಟಿಹೋದ ರಾಮನ ರೂಪವನ್ನು ಮನಸ್ಸಿನಲ್ಲಿಟ್ಟುಕೊಂಡು ಧ್ಯಾನಿಸತೊಡಗಿದಳು.

ಹನುಮಂತನು ಸೀತೆಯನ್ನು ಹುಡುಕಿಕೊಂಡು ಲಂಕೆಗೆ ಬಂದು ಅಶೋಕ ವನದಲ್ಲಿ ಸೀತೆಯನ್ನು ಕಂಡನು. ಆ ಸಮಯಕ್ಕೆ ಅಲ್ಲಿಗೆ ಬಂದ ರಾವಣನು ಸೀತೆಗೆ ನಾನಾ ಬಗೆಯ ಪ್ರಲೋಭನೆಗಳನ್ನೊಡುತ್ತಾನೆ. ಆಗ ಸೀತೆಯು ರಾಮನನ್ನು ಸ್ಮರಿಸಿ, ಒಂದು ಹುಲ್ಲುಕಡ್ಡಿಯನ್ನು ಅವನಿದಿರು ಅಡ್ಡವಿಟ್ಟು ನುಡಿದಳು 'ಎಲವೋ ದಶಾನನಾ! ಕೇಳು. ಮಿಣುಕುಹುಳುವಿನ ಬೆಳಕಿನಿಂದ ಕಮಲವು ಅರಳಲು ಸಾಧ್ಯವೇ? ರಘುವೀರನ ಬಾಣದ ಮಹಿಮೆ ನಿನಗೆ ತಿಳಿಯದು. ನೀಚನೂ, ನಿರ್ಲಜ್ಜನೂ ಆದ ನೀನು ಒಂಟಿಯಾಗಿದ್ದ ನನ್ನನ್ನು ಕದ್ದು ತಂದಿರುವೆಯಲ್ಲ! ನಾಚಿಕೆಯಿಲ್ಲವೇ ನಿನಗೆ?' ಎನ್ನುತ್ತಾಳೆ. ಆಗ ರೋಷಾವಿಷ್ಟನಾದ ರಾವಣನು ಕತ್ತಿಯನ್ನು ಹಿರಿದು 'ನೀನು ನನ್ನನ್ನು ಅಪಮಾನಿಸಿದ್ದೀಯೇ. ನಿನ್ನ ಶಿರವನ್ನು ಚಂಡಾಡಿಬಿಡುತ್ತೇನೆ' ಎನ್ನುತ್ತಾನೆ. ಹೆದರದ ಸೀತೆಯು 'ಶ್ಯಾಮಲ ಕಮಲದಂತೆ ಸುಂದರವಾದ, ಆನೆಯ ಸೊಂಡಿಲಿನಂತೆ ಬಲಿಷ್ಠವಾದ ನನ್ನ ಪ್ರಭುವಿನ ವಿಶಾಲವಾದ ಭುಜಗಳು ನನ್ನ ಕೊರಳಿಗೆ ಅಲಂಕರಿಸೀತು. ಇಲ್ಲವೇ ನಿನ್ನ ಕರವಾಲವು ನನ್ನ ಕತ್ತನ್ನು ಕತ್ತರಿಸೀತು. ಶಠನೇ ! ಕೇಳು. ಇದೇ ನನ್ನ ಸತ್ಯಪ್ರಜ್ಞೆಯು ಆನಂತರ ಸೀತೆಯು ಆ ಖಡ್ಗವನ್ನು ಕುರಿತು ಹೇಳಿದಳು. 'ಓ ಚಂದ್ರಹಾಸವೇ! ರಘುಪತಿಯ ವಿರಹದ ದಳ್ಳುರಿಯನ್ನು ನೀನು ಹರಿಸು, ಖಡ್ಗವೇ! ನಿನ್ನ ಅಲಗು ಶೀತಲವೂ, ತೀವ್ರವೂ, ಶ್ರೇಷ್ಠವೂ ಆಗಿದೆ, ಈಗ ನೀನು ನನ್ನ ದುಃಖದ ಹೊರೆಯನ್ನು ಇಳಿಸು' ಎಂದಳು.[೧೦೬]

ಸೀತೆಯ ಸುತ್ತ ಇದ್ದ ರಾಕ್ಷಸಿಯರೆಲ್ಲ ಬೇರೆ ಬೇರೆ ದಿಕ್ಕುಗಳಿಗೆ ಹೊರಟುಹೋದರು. ಇತ್ತ ಸೀತೆಯು ಒಂದು ತಿಂಗಳು ಕಳೆಯುತ್ತಿದ್ದಂತೆ ರಾವಣನು ತನ್ನನ್ನು ಕೊಂದೇ ಬಿಡುವನು ಎಂದು ಯೋಚಿಸತೊಡಗಿದಳು. ಸೀತೆಯು ಕೈ ಜೋಡಿಸಿ ಸಾತ್ವಿಕಳಾದ ತ್ರಿಜಟೆ ಎಂಬ ರಾಕ್ಷಸಿಯ ಬಳಿ ಹೇಳಿದಳು 'ಅಮ್ಮಾ! ಈ ದುಃಖಮಯ ಸಮಯದಲ್ಲಿ ನೀನೇ ನನಗೆ ಒಡನಾಡಿಯಾಗಿದ್ದೀಯೆ. ನನ್ನ ಈ ಶರೀರವನ್ನು ತ್ಯಜಿಸಲು ಬೇಕಾದ ಯಾವುದಾದರೂ ಉಪಾಯವನ್ನು ಹೇಳು. ವಿರಹವು ಅಸಹನೀಯವಾಗಿದೆ.

ಕಟ್ಟಿಗೆಗಳನ್ನು ತಂದು ಚಿತೆಯನ್ನು ನಿರ್ಮಿಸಿ ಬೆಂಕಿಯಿಡು. ನೀನು ನನ್ನ ಪ್ರೀತಿಯೆಂಬ ಪತಿಭಕ್ತಿಯನ್ನು ಸತ್ಯಗೊಳಿಸಲು ಸಹಕಾರ ನೀಡು. ಶೂಲದಂತಹ ರಾವಣನ ಮಾತುಗಳನ್ನು ನಾನು ಸಹಿಸಲಾರೆ ಎನ್ನುತ್ತಾಳೆ. ತ್ರಿಜಟೆಯು ಈ ಸಮಯದಲ್ಲಿ ಬೆಂಕಿ ಸಿಗದು ಎಂದು ಹೇಳಿ ಸೀತೆಯ ಕಾಲಿಗೆರಗಿ ಅವಳನ್ನು ಸಂತೈಸಿ ತನ್ನ ಮನೆಗೆ ಹೊರಟುಹೋದಳು. ಸೀತೆಯು ವಿಧಿಯೂ ತನಗೆ ಪ್ರತಿಕೂಲನಾಗಿರುವನು ಎಂದು ಹಲುಬಿದಳು. ಆಕಾಶದಲ್ಲಿ ಬೆಂಕಿಯ ನಕ್ಷತ್ರಗಳೆಂದೂ ನೆಲಕ್ಕೆ ಬೀಳದು. ಚಂದ್ರನು ಅಗ್ನಿಮಯನಾದರೂ ನಾನು ಹತಭಾಗ್ಯಳಾಗಿರುವುದರಿಂದ ಬೆಂಕಿಯನ್ನು ಸುರಿಸುವುದಿಲ್ಲ. ಎಲೈ ಅಶೋಕ ವೃಕ್ಷವೇ ನನ್ನ ಶೋಕವನ್ನು ಕಳೆದು ಅಶೋಕವೆಂಬ ನಿನ್ನ ಹೆಸರನ್ನು ಸಾರ್ಥಕಪಡಿಸಿಕೋ. ನಿನ್ನ ಹೊಸ ಹೊಸ ಚಿಗುರುಗಳು ಬೆಂಕಿಯಂತಿವೆ. ಯಾವ ಸಂಕೋಚವನ್ನೂ ಇಟ್ಟುಕೊಳ್ಳದೆ ಬೆಂಕಿಯನ್ನು ಕೊಡು. ಈ ವಿರಹವನ್ನು ತುತ್ತತುದಿಗೆ ಮುಟ್ಟಿಸಬೇಡ ಎಂದು ವಿರಹದಿಂದ ವ್ಯಾಕುಲಳಾದ ಸೀತೆಯು ಪರಿತಪಿಸಿದಳು.

ಅಶೋಕವೃಕ್ಷದ ಮೇಲೆ ಕುಳಿತಿದ್ದ ಹನುಮಂತನು ಬಂದು ಸೀತೆಯೊಡನೆ ಮಾತನಾಡುತ್ತಾ ತಾಯೆ! ನಾನೇ ನಿಮ್ಮನ್ನು ಇಲ್ಲಿಂದ ಕರೆದೊಯ್ಯಬಲ್ಲೆ. ಆದರೆ ಇದಕ್ಕೆ ರಾಮನ ಅಪ್ಪಣೆಯಿಲ್ಲವಾದ್ದರಿಂದ ನೀವು ಧೈರ್ಯವಾಗಿರಿ ರಾಮನು ಬಂದೇ ಬರುವನು ಎಂದು ಹೇಳಿ ರಾಮನ ಸಂದೇಶವನ್ನು ಹೇಳುತ್ತಾನೆ. ಲಂಕೆಯಲ್ಲಿ ಸಾಕಷ್ಟು ನಷ್ಟಮಾಡಿ ಮತ್ತೆ ಸೀತೆಯ ಮುಂದೆ ಬಂದು ರಾಮನು ನೀಡಿದಂತೆ ಯಾವುದಾದರೂ ಕುರುಹನ್ನು ಕೊಡಿ ಎಂದಾಗ ಸೀತೆಯು ತನ್ನ ಚೂಡಾಮಣಿಯನ್ನು ಹನುಮಂತನಿಗೆ ನೀಡಿದಳು. ಒಂದು ತಿಂಗಳೊಳಗಾಗಿ ತನ್ನನ್ನು ಬಿಡಿಸಿಕೊಂಡು ಕರೆದೊಯ್ಯದಿದ್ದರೆ ನಾನು ಪ್ರಾಣ ತ್ಯಾಗ ಮಾಡುತ್ತೇನೆಂಬ ಸಂದೇಶವನ್ನು ಕಳುಹಿಸಿದಳು.

ರಾಮ ರಾವಣರ ಯುದ್ಧವು ನಡೆಯುತ್ತಿದ್ದಾಗ ರಾವಣನು ಪ್ರಜ್ಞಾಶೂನ್ಯನಾದನು. ಅದೇ ರಾತ್ರಿ ತ್ರಿಜಟೆಯು ಸೀತೆಯ ಬಳಿಗೆ ಹೋಗಿ ಅಂದಿನ ಯುದ್ಧದ ವೃತ್ತಾಂತವನ್ನು ಹೇಳುತ್ತಾಳೆ. ರಾವಣನ ತಲೆ ಭುಜಗಳು ವೃದ್ಧಿಯಾಗುತ್ತಿರುವ ವಿಚಾರವನ್ನು ಕೇಳಿ ಸೀತೆಯು ಹೆದರಿದಳು. ತ್ರಿಜಟೆಯು ಕೇಳುತ್ತಾಳೆ 'ತಾಯೇ! ಏಕೆ ಮಾತನಾಡುತ್ತಿಲ್ಲ ಮುಂದೇನಾಗುವುದು? ವಿಶ್ವಕ್ಕೆ ದುಃಖಕಾರಕನಾಗಿರುವ ಇವನು ಸಾಯುವುದಾದರೂ ಹೇಗೆ? ನನ್ನ ದೌರ್ಭಾಗ್ಯದಿಂದಲೇ ಅವನು ಬದುಕಿದ್ದಾನೆ. ಆ ದೈವವು ಇನ್ನೂ ನನ್ನ ಮೇಲೆ ಮುನಿದಿದೆ. ಲಕ್ಷ್ಮಣನ ಕುರಿತು ಕಠೋರ ಮಾತುಗಳನ್ನಾಡಿಸಿತು. ಇಂತಹ ದುಃಖದಲ್ಲಿಯೂ ನನ್ನ ಪ್ರಾಣಗಳನ್ನು ಉಳಿಸಿರುವ ವಿಧಿಯೇ ಆ ರಾವಣನನ್ನು ಬದುಕಿಸುತ್ತಿದೆ ಎನ್ನುತ್ತ ಹಲವು ಬಗೆಯಿಂದ ವಿಲಾಪಿಸತೊಡಗಿದಳು. ಇದಕ್ಕೆ ತ್ರಿಜಟೆಯು ಹೀಗೆಂದಳು– 'ಓ ರಾಜಕುಮಾರಿಯೇ ಕೇಳು; ದೇವತೆಗಳ ಶತ್ರುವಾದ ರಾವಣನ ಎದೆಗೆ ಬಾಣ ತಗುಲಿದರೆ ಮಾತ್ರ ಅವನು ಸಾಯುತ್ತಾನೆ ಆದರೆ ರಾಮಚಂದ್ರನು ಅವನ ಎದೆಗೆ ಬಾಣ ಹೊಡೆಯುತ್ತಿಲ್ಲ ಏಕೆಂದರೆ ಅಲ್ಲಿ ನೀವು ವಾಸವಾಗಿದ್ದೀರಿ ಎಂಬುದಾಗಿ[೧೦೭]

ರಾಮನು ಈ ರೀತಿ ಆಲೋಚಿಸುತ್ತಿದ್ದಾನೆ – 'ಇವನ ಹೃದಯದಲ್ಲಿ ಜಾನಕಿಯು ನೆಲೆಸಿದ್ದಾಳೆ. ಜಾನಕಿಯ ಹೃದಯದಲ್ಲಿ ನಾನು ನೆಲೆಸಿದ್ದೇನೆ. ನನ್ನ ಉದರದಲ್ಲಿ ಅನೇಕ ಬ್ರಹ್ಮಾಂಡಗಳಿವೆ. ಆದ್ದರಿಂದ ರಾವಣನ ಹೃದಯಕ್ಕೆ ಬಾಣ ತಗುಲಿದರೆ ಸರ್ವನಾಶವಾದೀತು. ಇದನ್ನು ಕೇಳಿದ ಸೀತೆಯ ಮನಸ್ಸಿನಲ್ಲಿ ಅತ್ಯಂತ ಹರ್ಷ ಮತ್ತು ವಿಷಾದಗಳುಂಟಾಯಿತು.

ರಾಮನು ಯುದ್ಧದಲ್ಲಿ ವಿಜಯಿಯಾದ ನಂತರ ಹನುಮಂತನನ್ನು ಸೀತೆಯ ಬಳಿಗೆ ಕಳುಹಿಸುತ್ತಾನೆ. ಅದನ್ನು ಕೇಳಿದ ಸೀತೆಯ ಹೃದಯವು ಹರ್ಷದಿಂದ ತುಂಬಿತು. ಶರೀರವು ಪುಲಕಿತವಾಗಿ ಆನಂದಾಶ್ರುಗಳು ಉದುರಿದವು. ಹನುಮಂತನಿಗೆ 'ಇಂತಹ ಶುಭವಾರ್ತೆಯನ್ನು ತಂದ ನಿನಗೆ ನಾನೇನು ಕೊಡಬಲ್ಲೆ? ನೀನು ತಂದ ಸುದ್ದಿಗೆ ಸಮನಾದುದು ಮೂರು ಲೋಕದಲ್ಲಿ ಯಾವುದೂ ಇಲ್ಲ' ಎನ್ನುತ್ತಾಳೆ.[೧೦೮]

ಸೀತೆಯು ಹೇಳುತ್ತಾಳೆ 'ಮಗು! ಕೇಳು ಸಕಲ ಸದ್ಗುಣಗಳೂ ನಿನ್ನ ಹೃದಯದಲ್ಲಿ ಸದಾ ನೆಲೆಸಿರಲಿ. ಲಕ್ಷ್ಮಣ ಸಮೇತನಾಗಿ ಕೋಸಲಾಧಿಪತಿ ಸದಾ ನಿನ್ನ ಮೇಲೆ ಪ್ರಸನ್ನರಾಗಿರಲಿ' ಎಂಬುದಾಗಿ ಹೇಳಿ ನಂತರ ರಾಮನ ಮಾತಿನಂತೆ ಸೀತೆಯು ರಾಮನ ಬಳಿಗೆ ಹೊರಡಲು ಸಿದ್ಧನಾಗಿ ಬಂದಿದ್ದ ಅಂದಣವನ್ನೇರಿದಳು. ರಾಮನು ತನ್ನ ಆತ್ಮೀಯರಿಗೆ ಹೇಳುತ್ತಾನೆ 'ಸೀತೆಯನ್ನು ಪಾದಚಾರಿಯನ್ನಾಗಿಯೇ ಕರೆದುಕೊಂಡು ಬನ್ನಿ, ಅದರಿಂದ ವಾನರರೆಲ್ಲ ಆಕೆಯನ್ನು ತಾಯಿಯಂತೆ ನೋಡುವರು' ಎಂದು ಹೇಳಿ ನಕ್ಕುಬಿಟ್ಟನು. ನಿಜವಾದ ಸೀತೆಯನ್ನು ಅಗ್ನಿದೇವನ ಬಳಿ ಇರಿಸಲಾಗಿದ್ದರಿಂದ ಅಂತಃಸಾಕ್ಷಿಯಾದ ರಾಮನು ಈಗ ಅವಳನ್ನು ಪ್ರಕಟಗೊಳಿಸಬಯಸುತ್ತಾನೆ.[೧೦೯]

ನಿಜ ಸೀತೆಯನ್ನು ಪ್ರಕಟಗೊಳಿಸುವ ಕಾರಣದಿಂದ ಕರುಣಾಮಯಿ ರಾಮನು ಲೀಲೆಗಾಗಿ ಕೆಲವು ಕಟುವಚನಗಳನ್ನಾಡಿದನು. ಅದನ್ನು ಕೇಳಿದ ರಾಕ್ಷಸ ಸ್ತ್ರೀಯರೆಲ್ಲರೂ ದುಃಖಿತರಾದರು.[೧೧೦]

ಪ್ರಭುವಿನ ವಚನಗಳನ್ನು ಶಿರಸಾವಹಿಸಿ, ಮನ, ವಚನ, ಕಾಯದಿಂದ ಪವಿತ್ರಳಾದ ಸೀತಾದೇವಿಯು ಹೇಳಿದಳು – 'ಲಕ್ಷ್ಮಣಾ! ನೀನು ನನ್ನ ಧರ್ಮರಕ್ಷಣೆಯ ಕಾರ್ಯದಲ್ಲಿ ಸಹಾಯಕನಾಗು, ಕೂಡಲೇ ಅಗ್ನಿಯನ್ನು ಉರಿಸಿ ಸಿದ್ಧಗೊಳಿಸು. "ವಿರಹ, ವಿವೇಕ, ಧರ್ಮ, ನೀತಿಯುಕ್ತವಾದ ಸೀತಾದೇವಿಯ ವಚನಗಳನ್ನು ಕೇಳಿ, ಲಕ್ಷ್ಮಣನ ಕಣ್ಣುಗಳಲ್ಲಿ ದುಃಖಾಶ್ರುಗಳು ತೊಟ್ಟಿಕ್ಕಿದವು. ತನ್ನ ಎರಡೂ ಕೈಗಳನ್ನು ಜೋಡಿಸಿ ನಿಂತು ಬಿಟ್ಟನು. ಅವನೂ ಕೂಡ ಶ್ರೀರಾಮನಲ್ಲಿ ಏನೂ ಹೇಳದಾದನು. ಮತ್ತೆ ಶ್ರೀರಾಮನ ಸಂಕೇತವನ್ನು ಗಮನಿಸಿ ಲಕ್ಷ್ಮಣನು ಕೂಡಲೇ ಕಟ್ಟಿಗೆಗಳನ್ನು ರಾಶಿಹಾಕಿ ಅಗ್ನಿಯನ್ನು ಪ್ರಜ್ವಲಿಸಿದನು. ಪ್ರಜ್ವಲಿತವಾದ ಅಗ್ನಿಯನ್ನು ನೋಡಿ ಸೀತೆಯು ಹರ್ಷಿತಳಾದಳು. ಆಕೆಗೆ ಲೇಶವೂ ಭಯವಾಗಲಿಲ್ಲ, ಅವಳು ಲೀಲೆಯಿಂದ ಇಂತೆಂದಳು 'ಓ ಯಜ್ಞೇಶ್ವರಾ! ಮನೋವಾಕ್ಯಕರ್ಮಗಳಿಂದ ನಾನು ನನ್ನ ಹೃದಯದಲ್ಲಿ ಸರ್ವಜ್ಞನಾದ ಶ್ರೀ ರಘುವೀರನನ್ನು ಮಾತ್ರ ಆಶ್ರಯಿಸಿದ್ದರೆ ಎಲ್ಲರ ಮನೋಗತಿಯನ್ನು ಬಲ್ಲ ನೀನು ನನ್ನ ಮನೋಗತಿಯನ್ನು ಅರಿತು ಚಂದನದಂತೆ ಶೀತಲವಾಗು' ಎನ್ನುತ್ತಾಳೆ.[೧೧೧]

ಶ್ರೀ ಮಹಾದೇವನಿಂದ ಸದಾಕಾಲ ಪೂಜಿಸಲ್ಪಡುವ, ಸೀತಾದೇವಿಗೆ ಅತ್ಯಂತ ಪ್ರೀತಿಪಾತ್ರನಾದ ಶ್ರೀರಾಮಚಂದ್ರ ಪ್ರಭುವಿನ ಚರಣಕಮಲಗಳನ್ನು ಸ್ಮರಿಸುತ್ತಾ ಕೋಸಲಾಧೀಶನಿಗೆ ಜಯ ಜಯಕಾರ ಮಾಡುತ್ತ ಸೀತಾದೇವಿಯು ಚಂದನದಂತೆ ಶೀತಲವಾದ ಅಗ್ನಿಯಲ್ಲಿ ಪ್ರವೇಶಿಸಿದಳು. ಆ ಸೀತಾದೇವಿಯ ಪ್ರತಿಬಂಬವು ಬಿಂಬದಲ್ಲಿ ಸೇರಿಹೋಯಿತು. ಲೌಕಿಕ ಕಳಂಕವೆಲ್ಲ ಆ ಪ್ರಚಂಡಾಗ್ನಿಯಲ್ಲಿ ಭಸ್ಮವಾಯಿತು. ಪ್ರಭುವಿನ ಈ ಲೀಲಾರಹಸ್ಯವು ಯಾರಿಗೂ ತಿಳಿಯಲೇ ಇಲ್ಲ. ಸುರರು, ಸಿದ್ಧರು, ಮುನಿಗಳು ಆಕಾಶದಲ್ಲಿ ನಿಂತು ಇದನ್ನು ಸ್ತಬ್ಧರಾಗಿ ನೋಡುತ್ತಿದ್ದರು. ಆಗ ಅಗ್ನಿದೇವನು ಶರೀರಧಾರಿಯಾಗಿ ಪ್ರಕಟಿತನಾಗಿ, ವೇದಪ್ರತಿಪಾದ್ಯಳಾದ ಜಗದ್ವಿಖ್ಯಾತಳಾದ ನಿಜವಾದ ಸೀತಾದೇವಿಯ ಕೈಹಿಡಿದುಕೊಂಡು, ಕ್ಷೀರಸಾಗರನು ಲಕ್ಷ್ಮೀದೇವಿಯನ್ನು ಮಹಾವಿಷ್ಣುವಿಗೆ ಸಮರ್ಪಿಸುವಂತೆ ಸೀತಾದೇವಿಯನ್ನು ಶ್ರೀರಾಮಚಂದ್ರನಿಗೆ ಅರ್ಪಿಸಿದನು. ಆಕೆಯು ಶ್ರೀರಾಮನ ವಾಮಭಾಗದಲ್ಲಿ ವಿರಾಜಿಸಿದಳು. ಆಕೆಯ ಪರಮಶೋಭೆ ಅತಿಮನೋಜ್ಞವಾಗಿತ್ತು. ಆಗತಾನೆ ಅರಳಿದ ನೀಲಕಮಲದ ಬಳಿ, ಕನಕಕಮಲದ ಮೊಗ್ಗಿನಂತೆ ಆಕೆಯು ಶೋಭಿಸಿದಳು.

ಸಾಕೇತದ ಸೀತೆಯ[೧೧೨] ಮೊದಲ ದರ್ಶನ ರಾಮನ ಪಟ್ಟಾಭಿಷೇಕದ ಹಿಂದಿನ ದಿನ ಆಗುತ್ತದೆ. ಕೌಸಲ್ಯೆಯು ಸೀತೆಯನ್ನು ವಸ್ತ್ರಾಭರಣಗಳಿಂದ ಅಲಂಕರಿಸುತ್ತಾ ಸೀತೆಗೆ ಯುವರಾಣಿಯೋಗ್ಯವಾದ ಉಪದೇಶಗಳನ್ನು ನೀಡುತ್ತಿರುವುದು. ನಂತರ ದಶರಥನು ಕೈಕೇಯಿಗೆ ನೀಡಿದ ವರದ ಫಲವಾಗಿ ಕಾಡಿಗೆ ಹೊರಡುವ ವಿಚಾರವನ್ನು ಕೌಸಲ್ಯೆಗೆ ಹೇಳಲು ಬಂದಾಗ ಸೀತೆಯು ಅಲ್ಲಿಯೇ ಇರುತ್ತಾಳೆ. ಅವಳು ಕೌಸಲ್ಯೆಯು ಕೇಳಿದ ಪೂಜಾ ಪರಿಕರಗಳನ್ನು ಸಿದ್ಧಪಡಿಸುತ್ತಿದ್ದಳು. ಅಲ್ಲಿಗೆ ಬಂದ ರಾಮನು ಕೌಸಲ್ಯೆಗೆ ವನವಾಸದ ಸುದ್ದಿಯನ್ನು ತಿಳಿಸಿದಾಗ ಅವಳಿಗೆ ನಂಬಿಕೆ ಬರಲಿಲ್ಲವಾದ್ದರಿಂದ ಹೆದರಲಿಲ್ಲ. ಆದರೆ ಸೀತೆಗೆ ಸತ್ಯವೆಂದು ತಿಳಿಯಿತು. ಚಿಂತಾಕುಲಳಾದಳು.

'ವನದಲ್ಲಿರುವ ಸ್ವರ್ಗ ಸುಖವನ್ನು ಅನುಭವಿಸಬಲ್ಲೆ. ಪತಿವ್ರತಾಧರ್ಮ ಮತ್ತು ಗೃಹಿಣೀ ಧರ್ಮಗಳನ್ನು ವನವಿಹಾರದಲ್ಲೇ ಅನುಭವಿಸಬಲ್ಲೆ' ಎಂದು ಸೀತೆಯು ಮನದಲ್ಲೇ ಯೋಚಿಸಿದಳು. ಊರ್ಮಿಳೆಯು ಸೀತೆಯ ಭುಜದ ಮೇಲೆ ತಲೆಯಿಟ್ಟು ಧಾರಾಕಾರವಾಗಿ ಅತ್ತಳು. ಸೀತೆಯು ಅವಳಿಗೆ ಸಮಾಧಾನವನ್ನು ಹೇಳುತ್ತಾಳೆ. ನಮಗೆ ಮನೆಯಲ್ಲೇ ಆಗಲಿ ಕಾಡಿನಲ್ಲೇ ಆಗಲಿ ಈಶ್ವರನೇ ರಕ್ಷಕ ಎಂಬುದಾಗಿ.

ರಾಮನು ಸೀತೆಗೆ ವನವಾಸದ ಕಷ್ಟವನ್ನು ಮನದಟ್ಟು ಮಾಡುಕೊಡಲು ಪ್ರಯತ್ನಿಸಿದನು. ಸೀತೆಯು ಹೇಳುತ್ತಾಳೆ: ನಿಮ್ಮ ಮಾತಿನಿಂದ ಪ್ರಯೋಜನವಾಗಲಾರದು, ನೀವು ಏನನ್ನು ಯಾರಿಗೆ ಹೇಳುತ್ತಿದ್ದೀರಿ? ನನ್ನನ್ನು ಅನ್ಯಳೆಂದು ಭಾವಿಸಬೇಡಿ, ನನ್ನ ಮತ್ತು ನಿಮ್ಮ ಏಕಭಾವವನ್ನು ಹಾಳುಮಾಡಬೇಡಿ. ಕಷ್ಟದ ಸಮಯದಲ್ಲಿ ಪತಿಯಿಂದ ದೂರವಾದವಳನ್ನು ಯಾರು ನೋಡಬಯಸುತ್ತಾರೆ. ಅಂತಹವಳು ಸಾಯುವುದೇ ಒಳಿತೆನ್ನುತ್ತಾಳೆ. ಯಾವ ಗೌರವವನ್ನು ಪಡೆದು ನೀವು ವನಕ್ಕೆ ಹೋಗುತ್ತಿರುವಿರೋ ಅದರಲ್ಲಿ ಅರ್ಧಭಾಗ

ನನ್ನದು. ನನ್ನನ್ನು ತ್ಯಜಿಸಿ ಹೋಗಬೇಡಿ, ತಾಯಿ ಕೈಕೇಯಿಯ ಇಚ್ಛೆಯಾಗಲೀ ತಂದೆಯ ಸತ್ಯಪಾಲನೆಯಾಗಲೀ, ಅರ್ಧಾಂಗಿಯಾದ ನನ್ನನ್ನು ಬಿಟ್ಟರೇ ಅಪೂರ್ಣವಾಗುತ್ತದೆ. ಎಲ್ಲರ ಹಿತಕ್ಕಾಗಿ ನಿರ್ಜನವಾದ, ಗಹನವಾದ ವನದಲ್ಲಿಯೂ ಎಲ್ಲ ವ್ರತ ನಿಯಮಗಳನ್ನೂ ಪಾಲಿಸುತ್ತೇನೆ. ತನ್ಮೂಲಕ ಎಲ್ಲರ ಮಂಗಳವನ್ನೂ ಬಯಸುತ್ತೇನೆ. ನನಗೆ ಭಯವನ್ನು ತೋರಿಸಬೇಡಿ, ನಾನು ಯಮನನ್ನು ಜಯಿಸುವಂತಹ ಧೃತಿಯನ್ನು ಪಡೆದಿದ್ದೇನೆ. ಪತಿಯೊಡನಿರುವ ಸತಿಗೆ ವನಪ್ರವೇಶವೇಕೆ, ಅಗ್ನಿಪ್ರವೇಶವೂ ಕಷ್ಟವೆನಿಸಲಾರದು.

ಸೀತೆಯು ಗುಹನಿಗೆ 'ಈ ಸಾಧಾರಣ ವಸ್ತು ನಮ್ಮ ಮಿಲನದ ಗುರುತಾಗಿ ನಿನ್ನಲ್ಲಿ ಇರಲಿ' ಎಂದು ಸ್ವರ್ಣ ಮುದ್ರಿಕೆಯನ್ನು ಕೊಡುತ್ತಾಳೆ. ರಾಮನನ್ನು ಅಯೋಧ್ಯೆಗೆ ಹಿಂದಿರುಗಿ ಕರೆದೊಯ್ಯಲು ಭರತನು ಬರುತ್ತಾನೆ. ಈ ಸಂದರ್ಭದಲ್ಲಿ ಜಾಬಾಲಿ, ವಸಿಷ್ಠ, ರಾಮ ಇತ್ಯಾದಿಗಳೆಲ್ಲರೂ ಇರುತ್ತಾರೆ. ಭರತನು, ರಾಮನು ಕಾಡಿನಲ್ಲಿರುವವರೆಗೂ ಅತ್ತಿಗೆಯಾದ ಸೀತೆಯು ಅಯೋಧ್ಯೆಯಲ್ಲಿಯೇ ಇದ್ದು ರಾಜ್ಯಭಾರ ಮಾಡಲೆಂದು ಆಶಿಸುತ್ತಾನೆ. ಆಗ ಸೀತೆಯು ಜಾಬಾಲಿ ಮುನಿಗಳು ತಿಳಿಸಿದ ಅಭಿಪ್ರಾಯವಾದ 'ಎಲ್ಲರಲ್ಲೂ ಸ್ವಾರ್ಥವಿರುತ್ತದೆ' ಎಂಬುದನ್ನು ನೆನಪಿಸಿ 'ನನಗೂ ಸ್ವಾರ್ಥ'ವಿದೆಯೆಂದು ಹೇಳುತ್ತಾಳೆ.

ಆಗ ಭರತನು, 'ಅತ್ತಿಗೆಯವರೇ ನಿಮ್ಮ ಮೇಲೆ ನನಗೆ ನಂಬಿಕೆ ಇದೆ. ನನಗೆ ಸರಿಯಾದ ತಾಯಿಯು ಇಲ್ಲ ಎನ್ನುವ ಕೊರತೆಯನ್ನು ನೀವು ಪೂರ್ಣಮಾಡಿರಿ' ಎನ್ನುತ್ತಾನೆ. ಸೀತೆಯು 'ನಿನ್ನ ಅಣ್ಣನಿಗಿಂತಲೂ ಶ್ರೇಷ್ಠನಾದ ಯಶಸ್ಸನ್ನು ಪಡೆ' ಎಂದು ಆಶೀರ್ವದಿಸುತ್ತಾಳೆ.

ಹನುಮಂತನು ಭರತನಿಗೆ ಸೀತಾರಾಮ ಲಕ್ಷ್ಮಣರ ವೃತ್ತಾಂತವನ್ನು ಹೇಳುತ್ತಾನೆ. ರಾವಣನ ಆಣತಿಯಂತೆ ಮಾರೀಚನು ಮಾಯಾಜಿಂಕೆಯಾಗಿ ಸೀತೆಯ ಮುಂದೆ ಸುಳಿದಾಡಿದನು. ರಾಮನು ಲಕ್ಷ್ಮಣನಿಗೆ ಎಚ್ಚರದಿಂದಿರುವಂತೆ ತಿಳಿಸಿ ಅದರ ಹಿಂದೆ ಹೊರಟನು. ಹಾ! ಲಕ್ಷ್ಮಣಾ, ಹಾ ಸೀತೆ!' ಎಂದು ಕೂಗಿ ಮಾರೀಚನು ಪ್ರಾಣಬಿಟ್ಟನು. ಕೂಗಿದ ಧ್ವನಿಯನ್ನು ಕೇಳಿ ಬೆಚ್ಚಿದ ಸೀತೆಯು ಲಕ್ಷ್ಮಣನಿಗೆ ಬೇಗ ರಾಮನ ಸಹಾಯಕ್ಕೆ ಹೋಗಬೇಕೆನ್ನುತ್ತಾಳೆ. ಲಕ್ಷ್ಮಣನು ಸಮಾಧಾನಗೊಳಿಸಿ ಧೈರ್ಯ ಹೇಳುತ್ತಾನೆ. ಸೀತೆಯು ಕುಪಿತಳಾಗಿ ಲಕ್ಷ್ಮಣನನ್ನು ನಿರ್ಧಯಿ, ಕಲ್ಲು ಹೃದಯದವನೆಂದು ಜರಿಯುತ್ತಾಳೆ. ನಾನು ಕ್ಷತ್ರಿಯಳಾದ್ದರಿಂದ ನಾನೇ ಹೋಗುತ್ತೇನೆ. ನೀವು ಮನೆಯಲ್ಲಿ ಕುಳಿತಿರಿ ಎನ್ನುತ್ತಾಳೆ. ಆಗ ಲಕ್ಷ್ಮಣನು ಅಣ್ಣನ ಆಜ್ಞೆಯನ್ನು ಮೀರಿ ಹೋಗಲಾರೆ ನೀವು ಕೂಡ ಪತಿಯ ಆಜ್ಞೆಯಿಲ್ಲದೆ ಹೊರಗೆ ಹೋಗಲಾಗದು ಎನ್ನುತ್ತಾನೆ. 'ನಿಮ್ಮ ತಪ್ಪನ್ನು ಕ್ಷಮಿಸಿದ್ದೇನೆ ನೀವು ಪೂಜ್ಯರು ಹಾಗೂ ಅಬಲೆ, ಅಬಲೆಯರ ಅತಿ ಪ್ರೀತಿಯು ಕಿವುಡು ಮತ್ತು ಕುರುಡು ಎರಡೂ ಆಗಿರುತ್ತದೆ' ಎಂದು ಹೇಳಿ ಆರ್ತನಾದವು ಬಂದ ಕಡೆ ಹೊರಟನು. ಇತ್ತ ರಾವಣನು ಗಿಡುಗವು ಪಾರಿವಾಳವನ್ನು ಹೊತ್ತುಕೊಂಡು ಹೋದಂತೆ ಸೀತೆಯನ್ನು ಹೊತ್ತೊಯ್ದನು.

ನಾನು (ಹನುಮಂತ) ಸೀತೆಯನ್ನು ಹುಡುಕುತ್ತ ಹೊರಟು ಭಿನ್ನ ಸ್ಥಳದಲ್ಲಿ ಭಿನ್ನಲತೆಯಂತೆ ಕಾಂತಿಹೀನಳಾದ, ಸೀತೆಯನ್ನು ಅಶೋಕವನದಲ್ಲಿ ಗುರುತಿಸಿದೆನು.

ಒಬ್ಬ ಅಬಲೆಯ ಮನಸ್ಸನ್ನು ಗೆಲ್ಲಲಾರದ ನೀನು ವಿಶ್ವವಿಜಯಿ ಹೇಗೆ ಆಗುವಿ? ಯಾರನ್ನು ತುಚ್ಛನೆಂದು ಹೇಳುತ್ತಿರುವೆಯೋ, ಅವನಿಂದ ಕಳ್ಳನಂತೆ ಏಕೆ ಓಡಿಬಂದೆ? ಇಂದು ಯುದ್ಧದಲ್ಲಿ ಗೆದ್ದು ತರದೇ ಕಳ್ಳನಂತೆ ಕದ್ದು ತಂದುದ್ದೇಕೆ? ಎಂದಳು. ಈ ಜ್ವಾಲೆಯನ್ನು ಏಕೆ ನಿನ್ನ ಮನೆಯಲ್ಲಿ ತಂದಿರಿಸಿಕೊಂಡೇ?

'ನಿನ್ನ ಜೊತೆಯಲ್ಲಿ ಮಾತನಾಡಿದರೂ ಸಹ ನನಗೆ ಪಾಪವು ಬರುತ್ತದೆ. ನಾನು ಈ ಶರೀರವನ್ನು ಅಗ್ನಿಗೆ ಅರ್ಪಿಸಿ ಶುದ್ಧಮಾಡಿಕೊಳ್ಳುತ್ತೇನೆ' ಪತಿವ್ರತೆಯಾದ ಸೀತೆಯು ಒಂದು ತಿಂಗಳ ಅವಧಿಯನ್ನು ಪಡೆದಳು ಎನ್ನುತ್ತಾನೆ. ತಾನು ಸೀತೆಯನ್ನು ಆ ಕ್ಷಣದಲ್ಲಿಯೇ ಕರೆದೊಯ್ಯಲು ಸಿದ್ಧನಿದ್ದೆ. ಆದರೆ ಅವರು ಕಳ್ಳತನದಲ್ಲಿ ಹೋಗಿ ನನ್ನ ಸ್ವಾಮಿಯನ್ನು ಸೇರಲೇ? ಬೇಡವೆಂದರು ಎನ್ನುತ್ತಾನೆ.

ಮುಂದೆ ಅಶೋಕವನದ ದೃಶ್ಯವೊಂದು ಬರುತ್ತದೆ. ಕರುಣೆಯ ಸಾಕ್ಷಾತ್‌ಮೂರ್ತಿಯಂತೆ ಸೀತೆಯು ಅಲ್ಲಿ ಕುಳಿತಿರುತ್ತಾಳೆ. ಕಾವಲು ಕಾಯುತ್ತಿರುವ ರಾಕ್ಷಸಿಯರ ಮಧ್ಯೆ ಶುದ್ಧ ಸಾತ್ವಿಕ ವೃತ್ತಿಯಂತೆ ಅವರ ನಡುವೆ ಸೀತೆಯು ಕಾಯುತ್ತಿದ್ದಳು. ವಿಭೀಷಣನ ಪತ್ನಿಯಾದ ಸರಮೆಯು ಮಾತ್ರ ಸೀತೆಗೆ ಧೈರ್ಯ ಹೇಳುತ್ತಿದ್ದಳು. ಆಕೆಯ 'ದೇವೀ! ನನ್ನ ಸ್ವಾಮಿಯಾದ ವಿಭೀಷಣನು ಶ್ರೀರಾಮನ ಪಾದಸೇವೆಯನ್ನು ಮಾಡಿ ಧನ್ಯನಾದನು' ಎನ್ನುತ್ತಾಳೆ. ಕಂಬನಿಯನ್ನೊರೆಸಿಕೊಂಡ ಸೀತೆ 'ಸರಮೇ, ನಿನಗೇನು ಕೊಡಲಿ? ಲಂಕೆಯ ರಾಣಿಯಾಗಿ ಸುಖವಾಗಿ ಬಾಳು' ಎಂದಳು.

ಮುಂದೆ ಲಂಕೆಯಿಂದ ಹಿಂದಿರುಗಿ ಅಯೋಧ್ಯೆಗೆ ಬಂದಾಗ ಕೌಸಲ್ಯೆಯು ಹೇಳುತ್ತಾಳೆ;

'ಮಗೂ, ಸೀತೆ, ನೀನು ಬಹಳ ದುಃಖವನ್ನು ಅನುಭವಿಸಿಬಿಟ್ಟೆ ಎಂಬುದಾಗಿ ಅದಕ್ಕೆ ಸೀತೆಯು 'ಅಮ್ಮಾ, ಆದರೆ ಇಂದು ನಾನು ಇಮ್ಮಡಿಯಾದ ಸುಖವನ್ನು ಅನುಭವಿಸುತ್ತಿದ್ದೇನೆ' ಎನ್ನುತ್ತಾಳೆ.

**ತೊರವೆ ರಾಮಾಯಣದಲ್ಲಿ ಸೀತೆ**

ಜನಕರಾಜನು ತನ್ನ ತಮ್ಮ ಕುಶಧ್ವಜನಿಗೆ ಸೀತೆಯನ್ನು ಕರೆತರಲು ಹೇಳುತ್ತಾನೆ.

**ಆ ಕುಶಧ್ವಜನಧಿಕ ಹರುಷೋ । ದ್ರೇಕದಲಿ ನಡೆತಂದನಾ ಲೋ**
**ಕೈಕ ನಾಥೆಯ ವಿಶ್ವಮಾತೆಯ ಭುವನಪೂಜಿತೆಯ**
**ಶ್ರೀಕಮಲೆಯೆಡೆಗಂತರಂಗದ । ಲಾ ಕುಮಾರಿಗೆ ನಮಿಸಿ ತೋಳ್ಗಳೋ**
**ಳಾಕಿ ತೊಡೆಯಲಿ ಕುಳ್ಳಿರಿಸಿ ಮಾನಸದೊಳಿಂತೆಂದ**[೧೧೩]

ಕುಶಧ್ವಜನು ಲೋಕಗಳ ಒಡತಿ, ವಿಶ್ವಮಾತೆ, ಲೋಕಪೂಜಿತೆ, ಶ್ರೀಲಕ್ಷ್ಮೀ ಸ್ವರೂಪಳಾದ ಸೀತೆಯ ಬಳಿಗೆ ಅತ್ಯುತ್ಸಾಹದಿಂದ ಬಂದನು. ಮನಸ್ಸಿನಲ್ಲಿಯೇ ಸೀತೆಗೆ ವಂದಿಸಿದನು. ಸೀತಾಕುಮಾರಿಯನ್ನು

ತೋಳುಗಳಲ್ಲಿ ಎತ್ತಿಕೊಂಡು ತೊಡೆಯ ಮೇಲೆ ಕೂರಿಸಿಕೊಂಡು ಮನಸ್ಸಿನಲ್ಲಿ ಭಾವಿಸುತ್ತಾನೆ. ಈಕೆಗೆ ಲಕ್ಷ್ಮೀಪತಿಯಲ್ಲದೆ ಯಾರು ಪತಿಯಾಗುತ್ತಾರೊ! ಬ್ರಹ್ಮನು ಸರಿಯಾದ ಯಾರನ್ನು ಸೃಷ್ಟಿಸಿದ್ದಾನೆ ಎಂಬುದಾಗಿ.

ರಾಮನು ವನವಾಸಕ್ಕೆ ಹೊರಟಾಗ ಕೈಕೇಯಿಯು ಅವನಿಗೆ ನಾರುಮಡಿಯನ್ನು ಕೊಡುತ್ತಾಳೆ. ಆ ಸಂದರ್ಭದಲ್ಲಿ ಸೀತೆಯು ಸರಸರನೆ ಸಭೆಗೆ ಬಂದು ರಾಮನಿಗೆ ನಮಸ್ಕರಿಸಿ, ಪರಿಮಳವು ಹೂವನ್ನು ಬೆಳದಿಂಗಳು ಚಂದ್ರಬಿಂಬವನ್ನು, ಕೀರ್ತಿಯು ಒಳ್ಳೆಯ ಧರ್ಮವನ್ನು ಬಿಟ್ಟಿರಬಲ್ಲುದೇ? ಸುಖದುಃಖಗಳಲ್ಲಿ ಪತಿಯನ್ನು ಹಿಂಬಾಲಿಸದ ಸತಿಯು ಯಾವ ಲೋಕದ ಗತಿಯನ್ನು ಹೊಂದುವಳು ಎಂಬುದನ್ನು ನೀವೇ ಆಲೋಚಿಸಿ ತಿಳಿಯಿರಿ ಎನ್ನುತ್ತ ಪತಿಭಕ್ತಿ ಭಾವದಿಂದ ತಾನೂ ವನವಾಸಕ್ಕೆ ಹೊರಡಲು ರಾಮನನ್ನು ಒಪ್ಪಿಸಿದಳು.

ಮಾಯಾಮೃಗದ ಸಂದರ್ಭದಲ್ಲಿ ರಾಮನು ಕೂಗಿದ ಧ್ವನಿಯನ್ನು ಕೇಳಿ ಸೀತೆಯು 'ಜಿಂಕೆಯು[೧೧೪] ಬೇಕೆಂದು ಕೇಳಿದೆನೋ? ಚಿನ್ನದ ಜಿಂಕೆಯ ಹಿಂದೆ ಬಲವಂತವಾಗಿ ಗಂಡನನ್ನು ಏತಕ್ಕೆ ದಟ್ಟಡವಿಗೆ ದೂಡಿದೆನೋ? ಮೈದುನನು ಹೇಳಿದ ಮಾತನ್ನೇಕೆ ನಿರಾಕರಿಸಿದೆನೋ? ಕೆಟ್ಟೆ ವಿಧಿಯ ಕಷ್ಟಕ್ಕೊಳಗಾದೆನಲ್ಲ' ಎಂದು ಸೀತೆಯು ದುಃಖಿಸುತ್ತಾಳೆ. ಈ ಸಂದರ್ಭದಲ್ಲಿ ಲಕ್ಷ್ಮಣನ ಮೌನ ಅವಳನ್ನು ಕೆರಳಿಸುತ್ತದೆ. 'ಅಯ್ಯೋ[೧೧೫], ರಾಮನ ಮರಣದ ನುಡಿ ನಿನಗೆ ಮೋಹಕವೇ? ಸವತಿಯ ಮಗನ ಬುದ್ಧಿ ಹುಟ್ಟಿತೇ?' ಎಂದು ಪ್ರಶ್ನಿಸುತ್ತಾಳೆ. ಲಕ್ಷ್ಮಣನು ಸೀತೆಗೆ ನಾನಾ ಬಗೆಯಲ್ಲಿ ವಿವರಿಸಿ ಧೈರ್ಯ ಹೇಳುತ್ತಾನೆ. ಅದು ಕಪಟ ಜಿಂಕೆ, ರಾಮನು ಅದನ್ನು ಕೊಂದಿದ್ದಾನೆ ನನ್ನನು ನಂಬಿ ಎಂದರೂ ಸೀತೆಯು ಅದನ್ನು ನಂಬುವುದಿಲ್ಲ.

**ಅಕಟ ಲಕ್ಷ್ಮಣದೇವ ಪ್ರತ್ಯ । ಕ್ಷಕೆ ಪ್ರಮಾಣವದೇಕೆ ಪರಮಾ**
**ತ್ಮಕ ಪರಾಪರನೆಂದು ನೆಱಿ ಬಾಯಾರಲೇಕೆನ್ನ**
**ಯುಕುತಿಗಿದು ಮಱಿಯಲ್ಲವೇ? ಕೌ । ಳಿಕದ ಮಾತೇಕೆನ್ನೊಡನೆ ಸಾ**
**ಕಕಟ ಗಂಡನ ಕೊಂಡುಬಾ ಹೋಗೆಂದಳಿಂದುಮುಖಿ**
**ವಿಷವ ಕೊಂಬೆನು ತಾರದಿರಲೀ । ವಸತಿಗುರಿಯನು ಚಾಚಿ ಜೀವವ**
**ಬಿಸುಡುವೆನು ಬೀಳುವೆನು ಘಾತೋದಕದ ಕೂಪದಲಿ**
**ರಸನೆಯನು ಕಿತ್ತಸುವ ನಿನಗೊ । ಪ್ಪಿಸುವೆನೆಂದಾಕ್ಷೇಪಮುಖದು**
**ಬ್ಬಸದ ರೋಷಾವೇಷದಲಿ ಗಜಱಿದಳು ಲಕ್ಷ್ಮಣನ**
**ಬಗೆಯನಜಿದೆನು ನಿನ್ನ ಚಿತ್ತವ । ಬಗೆವವಳು ತಾನಲ್ಲವನ್ಯರ**
**ಬಗೆಗೆ ಸಿಲುಕುವಳೆಂದು ಬಗೆದೆಯಲಾ ಮನಸ್ಸಿನಲಿ**
**ಸೊಗಸುವವಳಹುದಲ್ಲವೆಂಬು । ಜ್ಜುಗವ ನೀನೇ ಬಲ್ಲೆಯೆನೆ ಕರ**
**ಯುಗಳದಲಿ ಮುಚ್ಚಿದನು ಕಿವಿಯನು ರಾಮರಾಮೆನುತ[೧೧೬]**

'ಅಯ್ಯೋ ಲಕ್ಷ್ಮಣ, ಪ್ರತ್ಯಕ್ಷಕ್ಕೆ ಪ್ರಮಾಣವೇಕೆ, ಪರಮಾತ್ಮ, ಪರಾತ್ಪರ ಎಂದು ರಾಮನನ್ನು ಹೊಗಳಿ ನನಗೆ ಆಸೆ ಹುಟ್ಟಿಸಬೇಡ; ಯುಕ್ತಿಯಿಂದ ಸತ್ಯವನ್ನು ಮರೆಮಾಡಬೇಡ. ನನ್ನೊಡನೆ ಮೋಸದ ಮಾತೇಕೆ; ಅಥವಾ ಈ ಎಲೆವನೆಗೆ ಬೆಂಕಿಹಚ್ಚಿ ಪ್ರಾಣ ಬಿಡುತ್ತೇನೆ; ಇಲ್ಲವೇ ಆಳವಾದ ಬಾವಿಗೆ ಬೀಳುತ್ತೇನೆ; ನಾಲಿಗೆಯನ್ನು ಕಿತ್ತುಕೊಂಡು ನಿನಗೆ ಪ್ರಾಣವನ್ನೊಪ್ಪಿಸುತ್ತೇನೆ' ಎಂದು ಆಕ್ಷೇಪಣೆ ಮಾಡುತ್ತಾ ಸೀತೆ ರೋಷಾವೇಶದಿಂದ ಲಕ್ಷ್ಮಣನನ್ನು ಗದರಿಕೊಂಡಳು. ನಿನ್ನ ಮನಸ್ಸು ನನಗೆ ತಿಳಿಯಿತು, ನಿನ್ನ ಯೋಚನೆಗೆ ದಕ್ಕುವವಳಲ್ಲ ನಾನು ಪರರ ಆಸೆಗೆ ಸಿಕ್ಕುತ್ತೇನೆ ಎಂದು ಮನಸ್ಸಿನಲ್ಲಿ ಯೋಚಿಸಿದೆಯಾ? ಇವಳು ಬಯಸಿ ಬರುವವಳು ಹೌದೇ ಅಲ್ಲವೇ ಎಂಬುದನ್ನು ನೀನೇ ಬಲ್ಲೆ' ಎಂದು ಸೀತೆಯು ನುಡಿಯಲು ಲಕ್ಷ್ಮಣನು 'ರಾಮ ರಾಮ' ಎಂದು ಕಿವಿಮುಚ್ಚಿಕೊಳ್ಳುತ್ತಾನೆ.

ಲಕ್ಷ್ಮಣನು ರಾಮನನ್ನು ಹುಡುಕಿಕೊಂಡು ಹೊರಟ ಮೇಲೆ ರಾವಣನು ಬರುತ್ತಾನೆ.

**ಶಿರದ ಮುಂಡನದಕ್ಷಮಾಲೆಯ ಕರದ ದಂಡ ಕಮಂಡಲದ ಬಂ**
**ಧುರದ ಕಾಷಾಂಬರದ ಕೌಪೀನದ ಕಳೇವರದ**
**ಜರೆಯಜರುಗಿದ ಬೆನ್ನಿನಲುಗುವ । ಶಿರದ ಶೂಲಿಯ ಸಟೆಯ ನಾಮ**
**ಸ್ಮರಣೆಯಲಿ ಮೈದೋಱಿದನು ಮಾಯಾಮಹೀಸುತೆಗೆ**[೧೧೭]

ಬೋಳಿಸಿದ ತಲೆ, ಕೈಗಳಲ್ಲಿ ಜಪಮಾಲೆ ದಂಡ ಕಮಂಡಲಗಳು; ಕಾವಿಬಟ್ಟೆ ಧರಿಸಿ ಕೌಪೀನ ಹಾಕಿ ರಾವಣನು ಸಂನ್ಯಾಸಿಯಾದ, ಮುಪ್ಪಿನಿಂದ ಬಾಗಿದ ಬೆನ್ನು, ನಡುಗುವ ತಲೆ, ಹೀಗೆ ಬಾಯಲ್ಲಿ ಶಿವನ ನಾಮೋಚ್ಚಾರಣೆ ಮಾಡುತ್ತಾ ಆದಿಮಾಯಾ ಸ್ವರೂಪಿಣೆಯಾದ ಸೀತೆಗೆ ಕಾಣಿಸಿಕೊಂಡ. ಹಾಗೆ ಬರುವಾಗಲೂ ದಿಲೀಪವಂಶದವನ ಮನೆ ಇದೇನೆ ಎಂದು ಕೇಳುತ್ತ ಬರುತ್ತಾನೆ. ಹೌದು ಎಂದ ಸೀತೆ ಆತನನ್ನು ಒಳಗೆ ದಯಮಾಡಿಸಿ ಎನ್ನುತ್ತಾಳೆ. ಅದಕ್ಕೆ 'ಮಹಿಳೆ[೧೧೮] ಕೇಳು, ಯಜಮಾನನಿಲ್ಲದ ಮನೆ ನಮಗೆ ಯೋಗ್ಯವಲ್ಲ, ಸಂಧ್ಯಾಕಾಲದ ಕರ್ಮಾಚರಣೆಗೆ ಈ ಸ್ಥಳವೇ ಸಾಕು, ಇದು ಸೊಗಸಾಗಿದೆ' ಎಂದು ಉತ್ತರಿಸುತ್ತಾನೆ. ಅದಕ್ಕೆ ಸೀತೆಯು 'ಮನೆಯೊಳಕ್ಕೆ[೧೧೯] ದಯಮಾಡಿಸಿ, ನಿಮ್ಮ ಆರಾಧಕರು ನಾವು, ನಾವು ನಿಮ್ಮ ಮಗಳಂತೆ' ಎಂದು ಪ್ರತಿಕ್ರಿಯಿಸುತ್ತಾಳೆ. ರಾವಣನು ಈ ಭೂಮಿಸುತೆಯು ತನಗೆ ವಶಳಾಗಬೇಕೆಂಬ ಆಲೋಚನೆಯು ಕೈಗೂಡದು ಎಂದು ದೃಢ ಮಾಡಿಕೊಳ್ಳುತ್ತ ಪರ್ಣಶಾಲೆಯ ಒಳಗೆ ಅಡಿಯಿಟ್ಟನು.

ಸೀತೆಯು ಭಕ್ತಿಯಿಂದ ದರ್ಭಾಸನವನ್ನು ನೀಡಿ ಉಪಚರಿಸಿ, ನೀವು ಬಂದಿದ್ದು ನಮ್ಮ ತಂದೆ ಬಂದಂತಾಯಿತು' ಎಂದು ಕೈಮುಗಿದಳು. ಆತನನ್ನು ಸೀತೆಯು ಯಾವ ಕಡೆ ನಿಮ್ಮದು, ನಿಮ್ಮ ಆಶ್ರಮಕ್ಕೆ ಬಂದ ಕಾರಣವೇನು? ನೀವು ಮುದುಕರು, ನಿಮಗೆ ಶುಶ್ರೂಷೆ ಮಾಡುವವರಿಲ್ಲ? ಎಂದು ಭಕ್ತಿಭಾವದಿಂದ ಕಪಟ ಸಂನ್ಯಾಸಿಯನ್ನು ಉಪಚರಿಸಿದಳು. ರಾವಣನು ಸೀತೆಗೆ 'ನಮಗೆ ವಾಸವೇನು, ಇಷ್ಟು ದಿನವೂ ದೇಶದೇಶಗಳಲ್ಲಿ ಸಂಚರಿಸಿದೆವು ನಾವು ಮುಂದೆ ಹೋಗಬೇಕೆಂದು ಸಂಕಲ್ಪಿಸಿರುವ ದೇಶ ಇನ್ನೊಂದಿದೆ.

ಅದೇ ಲಂಕೆ' ಎನ್ನುತ್ತಾನೆ. ಈ ದಿನ ನಿಮ್ಮ ಆಶ್ರಮಕ್ಕೆ ಬಂದಿರುವುದರಿಂದ ನಮ್ಮ ಆಯಾಸ ನೀಗಿತು. ನೀನು ಉತ್ತಮ ಸ್ತ್ರೀ, ನಿಮಗೆ ನಮ್ಮ ಮೇಲೆ ಪ್ರೀತಿಯಿದೆ' ಎಂದನು. ಸೀತೆಯ ದೇಹದ ಮೇಲೆ ಆತನ ಕಣ್ಣುಗಳು ಓಡಾಡಿತು. ದೇಹವು ಕಾಮವಿಕಾರಕ್ಕೆ ಗುರಿಯಾಯಿತು. ಅಂತರಂಗದ ಅನುರಾಗ ಭಾವವು ಸೀತೆಯಲ್ಲಿ ನೆಲೆಸಿತು. ಯೋಗದ ಗುಂಗು ಮಾಯವಾಯಿತು. ಜಪಿಸುತ್ತಿದ್ದ ನಾಲಗೆಗೆ ಜೇನೆ ಹಿಡಿಯಿತು. ಕೈಯ ಕೋಲು ಮಾಯವಾಗಿ, ಕಮಂಡಲವು ಮೆಲ್ಲನೆ ಸಡಿಲಿಹೋಯಿತು. ಶಿವನ ನಾಮಸ್ಮರಣೆಯು ಬೆರಳುಗಳ ಎಣಿಕೆಯೂ ನಿಂತವು. ರಾವಣನನ್ನು ಆವರಿಸಿದ್ದ ಮುಪ್ಪಿನ ತೊಡರು ಸಿಡಿದು ಹಾರಿಹೋಯಿತು. ಮಧ್ಯವಯಸ್ಸಿನ ಸುಂದರ ತಪಸ್ವಿಯಾಗಿ ರಾವಣನು ಮಾರ್ಪಟ್ಟನು. ಇದನ್ನು ಕಂಡ ಸೀತೆಯು ಹೆದರಿದಳು. ಸೀತೆಯು ತನಗೆ ಮೃತ್ಯುವೆಂದು ಅರಿಯದ ರಾವಣನು 'ಮನ್ಮಥನು ಈ ಸತಿಯಲ್ಲಿ ಅವತರಿಸಿದನೋ, ಶಿವಶಿವ! ಎಂದು ಮನಸ್ಸಿನಲ್ಲಿ ಮೋಹಗೊಂಡನು. 'ಪ್ರಚಂಡ ಪರಾಕ್ರಮಿ ಮೂರುಲೋಕಗಳ ಗಂಡ ರಾವಣ ಎಂಬ ಜಗತ್ಪ್ರಸಿದ್ಧ ಹೆಸರು ನನ್ನದು. ವರ್ಣ ಸಂಕರದ ಸಂಶಯವನ್ನು ಬಿಟ್ಟು ನಡೆ' ಎನ್ನುತ್ತಾನೆ. ಕೋಪದಿಂದ ಕೆರಳಿ 'ಲೋ ಪಾಪಿ[೧೨೦] ಹೊರಡು, ನಿನ್ನ ತಲೆಗಳು ಉಳಿಯುವುದಿಲ್ಲ. ಪರಮದೇವನನ್ನು ಕೆಣಕಿ ನೀರುಪಾಲಾದೆ ನೀನು, ಹೋಗು' ಎಂದು ಹಲವು ಬಗೆಯಲ್ಲಿ ರಾವಣನನ್ನು ನಿಂದಿಸುತ್ತಾಳೆ. ಕಾಮಾತುರನಾದ ರಾವಣನು ಸೀತೆಯ ಮುಡಿಯನ್ನು ಹಿಡಿದು ಅಂಗಳಕ್ಕೆ ಎಳೆದನು. ಹಲವು ಅಪಶಕುನಗಳು ನಡೆದರೂ ಲೆಕ್ಕಿಸದೆ ರಾವಣನು ಸೀತೆಯನ್ನು ರಥಕ್ಕೆ ಎಳೆದುಕೊಂಡು ಹೋದನು.

ಹನುಮಂತನು ಸೀತೆಯನ್ನು ಹುಡುಕುತ್ತ ಲಂಕೆಗೆ ಬಂದು ಅಲ್ಲಿಯೂ ನಾನಾ ಕಡೆಯಲ್ಲಿ ಹುಡುಕಿ ಕೊನೆಗೆ ಅಶೋಕವನದಲ್ಲಿ ಅವಳನ್ನು ಕಾಣುತ್ತಾನೆ. ರಾಕ್ಷಸಿಯರು ಅವಳನ್ನು ಕಾಯುತ್ತಲಿದ್ದರು. ಅವರು ಸೀತೆಗೆ ರಾವಣನನ್ನು ವರಿಸುವಂತೆ ಪರಿಪರಿಯಲ್ಲಿ ಪ್ರಲೋಭನೆಗೊಳಪಡಿಸುತ್ತಿದ್ದರು. ಆ ಸಮಯಕ್ಕೆ ಅಲ್ಲಿಗೆ ಬಂದ ರಾವಣನು ಸೀತೆಗೆ ನಾನಾ ಬಗೆಯ ಆಮಿಷಗಳನ್ನೊಡ್ಡುತ್ತಾನೆ. ಸೀತೆಯು[೧೨೧] ಕಣ್ಣುಗಳಲ್ಲಿ ಕಿಡಿಕಾರುತ್ತ ಕೈಯಲ್ಲಿ ಹುಲ್ಲನ್ನು ಮುರಿದು ಹಾಕಿ 'ಲೋ ನೀಚ ರಾಕ್ಷಸ, ಕೇಳು ನಿನಗೆ ಇಷ್ಟು ಪರಾಕ್ರಮವಿರಲು ಅಂದು ಶಿವಧನಸ್ಸು ನಿನಗೆ ಬಗ್ಗಲಿಲ್ಲವೇಕೆ? ಸುಡು ಸುಡು, ಹೆಣ ತಿನ್ನುವ ಪಿಶಾಚಿಗಳಿಗೆ ಮಾತ್ರ ಈ ಮಾತುಗಳು ಯೋಗ್ಯ' ಎಂದಳು. ರಾಮನ[೧೨೨] ಎದುರಿನಲ್ಲಿ ನನ್ನನ್ನು ತಂದಿದ್ದರೆ ಆಗ ನೀನು ನಿಜವಾದ ವೀರನಾಗುತ್ತಿದ್ದೆ. ಹೇಡಿ, ಹೋಗು. ನಾಯಿ, ನಿನಗೆ ಏತಕ್ಕೆ ದೇವತೆಗಳ, ಮಾನವರ ಮತ್ತು ಸರ್ಪಗಳ ಲೋಕಗಳ ಒಡೆತನ. ಬಹುವಿಕಾರದ ಸುಟ್ಟ ಮೋರೆಗೆ ಅಧಿಕ ಪ್ರಸಂಗದ ಮಾತೇಕೆ' ಎಂದು ನಿಂದಿಸಿ ನುಡಿದಳು. ಬ್ರಹ್ಮ, ಈಶ್ವರರು ಆಶ್ರಿತರಂತೆ, ಮನ್ಮಥನೇ ಮೊದಲಾದವರು ಸೇವಕರಂತೆ, ರಘುಪತಿಯು ಮನುಷ್ಯನಂತೆ. ಅಯ್ಯೋ, ಇವನ ಮುಸುಡಿಯನ್ನು ಸೀಳುವವರಿಲ್ಲ. ಈ ನಿನ್ನ ಮಾತುಗಳು ಕುಡುಕರಿಗೆ ಅಡ್ಡಿಯಿಲ್ಲ. ಮೂರ್ಖರು, ನೀಚರು, ಹೆದೆಯನ್ನು ಎಳೆಯುವ ಮಧ್ಯದ ಬೆರಳನ್ನು ಕಳೆದುಕೊಂಡ ಧನುರ್ಧಾರಿಯಲ್ಲದವರು, ಮರ್ಯಾದೆಯಿಲ್ಲದವರು ಇವರುಗಳಿಗೆ ಸಹಜ. ಲೋ, ನಿನ್ನ ಎದುರಿಗೆ ಸಚ್ಚರಿತರಾದ ಸ್ತ್ರೀಯರು

ಹರಟಬಹುದೇ ಹೋಗು' ಎಂದು ಕೋಪದಿಂದ ಸೀತೆ ಮುಖ ತಿರುಗಿಸಿಕೊಂಡಳು. 'ನೀರು ಹಾವು ಆದಿಶೇಷನನ್ನು ತನ್ನ ಮನೆಯಲ್ಲಿ ನಿಂದಿಸಿದಂತಾಯಿಲ್ಲ. ದಾಶರಥಿಯ ಸೇವಕರ ಬಂಟರ ದಾಸರ ತೊತ್ತಿನ ದಾಸಿಯರ ಸೇವಕರಿಗೆ ಸರಿಸಮಾನನಾಗಲು ಇವನೆಷ್ಟರವನು. ಈ ನಾಯಿಯನ್ನು ಆಚೆ ಅಟ್ಟು' ಎಂದು ಸರಮೆಗೆ ಹೇಳಿದಳು. 'ಈ ರಾಕ್ಷಸನ ಕಡಿದ ತಲೆಯನ್ನು ತುಳಿದು ಸ್ನಾನಮಾಡಿದ ಬಳಿಕ ಈ ದುಷ್ಟನ ಹೆಂಡಂದಿರು ತನ್ನ ದಾಸಿಯಾಗುವರು, ಈ ಸಕಲ ಸಂಪತ್ತು ಸುಲಭವಾಗಿ ಕೈ ಸೇರುವುದು ಇದು ಸತ್ಯ. ಇವನಿಗೆ ಈ ಉತ್ತರಕೊಟ್ಟು ಈ ಹರಟುವ ರಾಕ್ಷಸ ನಾಯನ್ನು ಕಳುಹಿಸು' ಎಂದು ಸೀತೆ ಸರಮೆಗೆ ಹೇಳಿದಳು.

**ಅಕಟ ಪೂರ್ವದಲಾವ ಹಿರಿಯರ । ಟಕರಿಗಳೆದೆನದಾವ ದೈವದ**
**ಭಕುತಿಯನು ಕುಂದಿದೆನೊ ನಿಂದಿಸಿದೆನೊ ಗುರುದ್ವಿಜರ**
**ವಿಕಳತೆಯಲಿ ವಿವೇಕಿಸದೆ ಪಾ । ತಕವ ನೆನೆದನೊ ಪತಿಯೊಳಕಟಾ**
**ಪ್ರಕಟಿಸಿತೆ ದುಷ್ಕರ್ಮ ಫಲವೆನಗೆಂದಳಾ ಸೀತೆ**[೧೨೩]

ಅಯ್ಯೋ, ಹಿಂದೆ ಯಾವ ಹಿರಿಯರನ್ನು ಉಪೇಕ್ಷೆ ಮಾಡಿದೆನೋ, ಯಾವ ದೇವರ ಭಕ್ತಿಯಲ್ಲಿ ಕೊರತೆಯಾಯಿತೋ, ಗುರುಬ್ರಾಹ್ಮಣರನ್ನು ನಿಂದಿಸಿದೆನೋ, ಮನಸ್ಸಿನ ಕಳವಳದಲ್ಲಿ ಅವಿವೇಕದಿಂದ ಪಾಪವನ್ನು ನೆನೆದೆನೋ, ಹಿಂದಿನ ಜನ್ಮದ ಕೆಟ್ಟ ಕರ್ಮದ ಫಲವು ಈಗ ಕಣ್ಣಿಗೆ ಕಾಣಿಸಿತೆ?' ಎಂದಳು ಸೀತೆ. ಇದೆಲ್ಲವನ್ನೂ ಮರದ ಮೇಲೆ ಕುಳಿತು ನೋಡುತ್ತಿದ್ದ ಹನುಮಂತನು ರಾಮನಿಂದ ಸೀತೆಯು ಅಗಲಿದ ನಂತರ ನಡೆದ ವೃತ್ತಾಂತವನ್ನು ಹೇಳುತ್ತಾ ಕೆಳಗಿಳಿದು ಅವಳ ಪಾದಗಳಿಗೆರಗಿದನು. ಹೆದರಿದ ಸೀತೆಯನ್ನು ಸಮಾಧಾನಪಡಿಸಿದನು. ಆದರೂ ಹನುಮಂತನು ಹೇಳಿದ ವಿಚಾರಗಳು ಕೆಲವೊಮ್ಮೆ ಮನಸ್ಸಿಗೆ ಒಪ್ಪಿಗೆಯಾದರೆ ಕೆಲವೊಮ್ಮೆ ರಾವಣನ ಮಾಯಾಜಾಲವೆನಿಸುವುದು. ಆಗ ಹನುಮಂತನು ರಾಮನು ಹೇಳಿದಂತೆ ಅವರು ವನವಾಸದಲ್ಲಿ ನಡೆದ ಘಟನೆಗಳನ್ನು ಹೇಳಿದನು. ಆದರೂ ಅವಳಿಗೆ ನಂಬಿಕೆ ಹುಟ್ಟಲಿಲ್ಲವಾದ್ದರಿಂದ ರಾಮನ ದೇಹ ಹಸ್ತಗಳಲ್ಲಿರುವ ಕಮಲ ರೇಖೆಗಳ ಗುರುತಿನ ಬಗೆ ಹೇಳಿದಾಗ ಸೀತೆಯ ಸಂಶಯ ಮುಕ್ಕಾಲುಪಾಲು ತೊಲಗಿತು. ಆಗ ಮುದ್ರೆಯುಂಗುರವನ್ನು ಸೀತೆಗೆ ಕೊಟ್ಟನು. ರಾಮನನ್ನೇ ಕಂಡಂತೆ ಸೀತೆಯು ಮುದ್ರೆಯುಂಗುರಕ್ಕೆ ವಂದಿಸಿದಳು. ಪತಿಯೊಡಗೂಡಿದ ಸುಖವನ್ನುಭವಿಸಿದಳು. ರಾಮನ ಬಗ್ಗೆ ಹೇಳುತ್ತಾಳೆ.

**ಮನದ ಪರಿಯೇನೆನ್ನ ಮೇಲಣ । ನೆನಹಿನಂತರವೇನು ಹೇಳೈ**
**ಹನುಮ ಕಠಿಣವೋ ಕೋಮಲವೋ ಕಾಕುತ್ಸ್ಥನಂತಸ್ಥ**
**ಕನಲಿಕೆಯ ಮಾತುಗಳೊ ಮಮತೆಯ । ವಿನಯ ವಚನವೋ ನಿನ್ನ ಕಳುಗುವ**
**ದಿನದಲ್ಲಿದ್ದ ಸ್ಥಿತಿಯನೇ ಹೇಳೆಂದಲಾ ಸೀತೆ**[೧೨೪]

ರಾಮನ ಮನಸ್ಸಿನ ರೀತಿಯೇನು? ನನ್ನನ್ನು ಮನಸ್ಸಿನಲ್ಲಿ ನೆನಪಿಸಿಕೊಳ್ಳುವನೇ? ರಾಮನ ಮನಸ್ಸು ಕಠಿಣವೋ ಕೋಮಲವೋ ಹೇಳಯ್ಯ ಹನುಮಂತ. ಕೋಪದ ಮಾತುಗಳೇ, ಪ್ರೀತಿಯ ವಿನಯದ ನುಡಿಗಳೇ? ನಿನ್ನನ್ನು ಕಳುಹಿಸಿಕೊಡುವ ದಿನದಲ್ಲಿ ಇದ್ದ ಸ್ಥಿತಿಯನ್ನೇ ಹೇಳು' ಎಂದು ಸೀತೆ ಕೇಳಿದಳು. 'ಮಗು ರಾಮನ ಮನಸ್ಸಿನಲ್ಲಿ ಯಾವ ಕಳಂಕ ಅನುಮಾನಗಳು ಇಲ್ಲವಲ್ಲ'. ಎಂದು ಕೇಳುತ್ತಾಳೆ.[೧೨೫]

ಈಗಲೇ ನಿಮ್ಮನ್ನು ಕರೆದುಕೊಂಡು ಹೋಗೋಣವೆಂದರೆ ನಿಮ್ಮ ಪ್ರಾಣಪತಿಯು ಏನು ಹೇಳುತ್ತಾನೋ? ನಿಮ್ಮ ಮೇಲೆ ಕುಂದನ್ನು ಹೊರೆಸುತ್ತಾನೋ? ನನ್ನ ಮೇಲೆ ದೋಷವನ್ನು ಆರೋಪಿಸುತ್ತಾನೋ ಎಂಬುದು ತಿಳಿಯುತ್ತಿಲ್ಲ. ತಾನೇ ಬಂದು ಶತ್ರುವನ್ನು ಕೊಂದು ನಿಮ್ಮನ್ನು ಇಲ್ಲಿಂದ ಕರೆದುಕೊಂಡು ಹೋಗುವುದು ರಾಮನಿಗೆ ಜಾಣತನದ ಕಾರ್ಯ'ವೆಂದನು. 'ನೀವು ದುಃಖಿಸಬೇಡಿ, ತಪ್ಪಿಹೋದ ಕೆಲಸಕ್ಕೆ ಈಗಿನ್ನೇನು' ಅದು ಹಾಗಿರಲಿ ನಿಮ್ಮ ಪ್ರೀತಿಯ ಪತಿಯನ್ನು ಒಂದು ತಿಂಗಳಲ್ಲಿ ಕರೆದುಕೊಂಡು ಬರದೆ ಹೋದರೆ ನಾನು ಸೇವಕನೇ. ನಿಮ್ಮ ಅಪಾರ ಚಿಂತೆಯನ್ನು ಕಳಚಿಹಾಕಿ. ನಿಮ್ಮ ಅಭಿಲಾಷೆಯ ಮಂಗಳಕರವಾಗುವುದೆಂದು ಭಾವಿಸಿ' ಎಂದನು ಹನುಮಂತ.

**೩.೧೭ ಸೀತೆಯ ಪಾತ್ರದ ವಿಶ್ಲೇಷಣೆ**

ಸ್ತ್ರಿ ಪಾತ್ರಗಳ ನಿರ್ಲಕ್ಷ್ಯೆ ಏಕೆ ಹೇಗೆ ಎಂಬುದರ ಚರ್ಚೆಗೆ ಅಗತ್ಯವಿರುವ ಪ್ರಮುಖ ಮೂರು ರಾಮಕಥೆಗಳನ್ನು ಆಧಾರವಾಗಿ ಇಲ್ಲಿ ದಾಖಲಿಸಲಾಗಿದೆ. ಸಂಸ್ಕೃತದ ವಾಲ್ಮೀಕಿ ರಾಮಾಯಣ, ಹಿಂದಿಯ ರಾಮಚರಿತ ಮಾನಸ, ಕನ್ನಡದ ತೊರವೆ ರಾಮಾಯಣ. ಇವೆಲ್ಲ ಪುರುಷೋತ್ತಮ ರಾಮನನ್ನು ಪೂಜ್ಯ ಭಾವನೆಯಿಂದ ಪರಿಭಾವಿಸಿ ಆ ಪಾತ್ರ ಪೋಷಣೆಗೆ ಉಳಿದ ಪಾತ್ರಗಳನ್ನು ಆ ಸಂದರ್ಭದ ಸಮಾಜದ ಸ್ಥಾಪಿತ ಅಥವಾ ಹೇರಲ್ಪಟ್ಟ ಮೌಲ್ಯಗಳ ಹರಿಕಾರರಂತೆ ಚಿತ್ರಿಸಲಾಗಿದೆ. ಕೆ. ಕೃಷ್ಣಮೂರ್ತಿಯವರ ಮಾತು ಇಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ,

> 'They (Ramayana and Mahabharata) don't follow any set conventions... they start conventions followed by others. They become virtually source books for later writers of all genres... ("Krishnamurthy. K., Jn Epics in India literature, 1985, P. 9)

ನಾವು ಈವರೆಗೆ ಉಲ್ಲೇಖಿಸಿರುವ ಸ್ತ್ರೀಪಾತ್ರ ರಾಮಾಯಣದ ಲಕ್ಷ್ಮೀ ಅವತಾರ ಸೀತೆಯೇ ಆಗಿದ್ದಾಳೆ. ಅತ್ತೆ ಮಾವಂದಿರ ಸೇವೆ ಸ್ತ್ರೀ ಧರ್ಮವೆಂದು ಹೇಳಿದರೂ ಆಧುನಿಕ ಮಹಿಳೆಯಂತೆ ಗಂಡನೊಂದಿಗೆ ತಾನು ವನವಾಸಕ್ಕೆ ಹೋಗಲು ಸಿದ್ಧಳಾಗುವ ಸೀತೆ ಕೂಡ ಪಿತೃಪ್ರಧಾನ ವ್ಯವಸ್ಥೆಯ ಕೂಸು ಎಂಬುದನ್ನು ಸಪಷ್ಟಪಡಿಸುವ ಉದ್ದೇಶದಿಂದ ಆಕೆಯ ಜೀವನ ವೃತ್ತಾಂತವನ್ನು ಸವಿವರವಾಗಿ ದಾಖಲಿಸಲಾಗಿದೆ. ಈಕೆಗಿಂತಲೂ ನಿರ್ಲಕ್ಷ್ಯಕ್ಕೆ ಒಳಗಾದ ಅನೇಕ ಪಾತ್ರಗಳಿವೆ. ಅವುಗಳಲ್ಲಿ ಕೆಲವು ಪಾತ್ರಗಳನ್ನು

ಪ್ರತ್ಯೇಕವಾಗಿ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗುವುದು. ಸೀತೆ ಕೂಡ ಒಂದು ಹೆಣ್ಣು ಎಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡು ಸಿಮೋನ್‌ದ ಬೇವಾರ್ ಅವರ 'ಸೆಕೆಂಡ್ ಸೆಕ್ಸ್' ಎಂಬುದನ್ನು ಪ್ರಜ್ಞಾ ಪೂರ್ವಕವಾಗಿ ಬಳಸುತ್ತಾ ಆಕೆಯ ಸ್ಥಾನ ಕೂಡ ಎರಡನೆಯದು ಎಂಬುದನ್ನು ದೃಢಪಡಿಸುತ್ತೇನೆ.

ಡಾ. ಕೆ. ಮರುಳಸಿದ್ದಪ್ಪ ಅವರು ಹೇಳುವಂತೆ "ಪುರಾಣ ಕಥೆಗಳು ಒಂದು ಸಂಸ್ಕೃತಿಯ ಆದಿಮ ಸ್ಥಿತಿಯ ಪಳಿಯುಳಿಕೆಗಳು... ಅವುಗಳು ಪ್ರಜ್ಞಾಪೂರ್ವಕ ನೆಲೆಯಲ್ಲಿ ಕಾಲದಿಂದ ಕಾಲಕ್ಕೆ ಧರ್ಮ, ಸಾಹಿತ್ಯಗಳ ಮೂಲಕ ಪ್ರಸಾರ ಹೊಂದುತ್ತಾ ಹೋದಂತೆ ಅಪ್ರಜ್ಞಾಪೂರ್ವಕವಾಗಿಯೂ ಸಮುದಾಯದ ಧಾರ್ಮಿಕ ವಿಧಿ, ಆಚರಣೆ, ನಂಬಿಕೆ, ಸಾಮಾಜಿಕ ಸಂಬಂಧಗಳ ಮೂಲಕ ವ್ಯಕ್ತಿಯ ಅನುಭವದ ವಲಯವನ್ನು ಪ್ರವೇಶಿಸುತ್ತವೆ...' ನಮ್ಮ ಅನುಭವದ ತಿರುಳೇ ಪುರಾಣ ಕಥೆಗಳಲ್ಲಿ ಸಾಂಕೇತಿಕವಾಗಿ ಮೂಡಿ ಬಂದಿರುತ್ತದೆಯಾದುದರಿಂದ ಅವು ನಮ್ಮ ಮನಸ್ಸಿನ ಮೇಲೆ ಮಾಡುವ ಪರಿಣಾಮ ತೀವ್ರವಾದದು (ಮರುಳಸಿದ್ದಪ್ಪ. ಕೆ., ೧೯೯೩, ಪುಟ-೧೨೦)

ಸಾಮಾಜಿಕ ಸಂಬಂಧ... ಹಾಗೂ ಅನುಭವಗಳ ತಿರುಳು ಪುರಾಣ ಕಥೆಗಳಲ್ಲಿ ಪಾತ್ರಗಳ ಮೂಲಕ ಅಭಿವ್ಯಕ್ತಿಗೊಂಡಿರುತ್ತದೆ ಎಂಬ ಅಂಶವನ್ನು ಇಲ್ಲಿ ಗಮನಿಸಬಹುದಾಗಿದೆ.

ಎಲ್ಲ ಕವಿಗಳು ಆಕೆಯ ಸೌಂದರ್ಯವನ್ನು, ಗುಣಸ್ವಭಾವಗಳನ್ನು ಉತ್ಕೃಷ್ಟವಾದದು ಎಂದೇ ವರ್ಣಿಸಿದ್ದಾರೆ. ಮುಂದುವರಿದು ಆಕೆಯನ್ನು 'ಆದಿಶಕ್ತಿ ವಿಷ್ಣುವನಿತೆ ಎಂದೇ ಕರೆದಿದ್ದಾರೆ. ರಾಮನ ಜೊತೆ ಸುಖದಿಂದ ಒಂದು ದಿನವೂ ಕಳೆಯದಿದ್ದರೂ ಆಕೆಯನ್ನು ಪತಿವ್ರತೆ ಎಂದು ಕರೆಯುತ್ತಾ ನಿನಗೆ ರಾಮನೇ ಪರದೈವ, ಅವನಲ್ಲಿ ಸದಾ ನಿಷ್ಠೆಯಿಂದಿರುವ ನಿನಗೆ ಸನ್ಮಂಗಳವಾಗುತ್ತದೆ ಎಂದು ಋಷಿ ಮುನಿಗಳಿಂದ, ಅನುಸೂಯೆಯಿಂದ ಬೋಧನೆ ಮಾಡಿಸಲಾಗುತ್ತದೆ. ಮಹಾಕಾವ್ಯಗಳ ಜಗತ್ತು ಸಂಪೂರ್ಣವಾಗಿ ಪುರುಷ ಜಗತ್ತು ಮತ್ತು ಈ ಜಗತ್ತಿನಲ್ಲಿ ಪುರುಷರು ಸ್ತ್ರೀಯರ ಬಗ್ಗೆ ಇರುವ ತಮ್ಮ ಉತ್ಕಟ ಲೈಂಗಿಕ ಭೀತಿಯನ್ನು ಮತ್ತೆ ಮತ್ತೆ ವ್ಯಕ್ತಪಡಿಸುತ್ತಾರೆ 'ಎಂಬ ಜಾನ್ ಸ್ಮಿತ್ ಅವರ ಮಾತುಗಳು ಇಲ್ಲಿ ಪ್ರಸ್ತುತವೆನಿಸುತ್ತವೆ.[೧೨೬]

ಈ ಪಾತಿವ್ರತ್ಯದ ಕಲ್ಪನೆ ಮೂಡುವುದಕ್ಕಿಂತ ಮುಂಚೆ ಸ್ತ್ರೀ ಸ್ಥಾನಮಾನಗಳು, ಸ್ಥಿತಿಗಳು, ಸಮಾನತೆಗಳು ಹೇಗಿದ್ದವು ಎಂಬುದನ್ನು ಸ್ಥೂಲವಾಗಿ ಗಮನಿಸಬಹುದಾಗಿದೆ. ಆರ್ಷೇಯ ಕಾಲದಿಂದ ಮಾನವರ ನಾಗರೀಕತೆಯು ನಡೆದುಬಂದ ದಾರಿಯನ್ನು ಅವಲೋಕಿಸಿದಾಗ ಸ್ತ್ರೀಯರ ಬದುಕಲ್ಲಾದ ಸ್ಥಿತ್ಯಂತರಗಳು ಗಮನಾರ್ಹವೆನಿಸುತ್ತವೆ. ಇದು ಅವರ ಸಾಮಾಜಿಕ ಸ್ಥಾನಮಾನಗಳು, ಬೌದ್ಧಿಕ-ವೈಚಾರಿಕ ನಿಲವುಗಳು, ಸ್ವಾತಂತ್ರ್ಯದ ಪರಿಕಲ್ಪನೆಗಳು, ಲೈಂಗಿಕ ಬದುಕು ವೈಚಾರಿಕ ಸ್ಥಿತಿಗಳಲ್ಲಿ ಪ್ರತಿಫಲಿಸುವುದನ್ನು ಕಾಣುತ್ತೇವೆ.

ಶ್ರೀ ರಾಜವಾಡೆ ವಿ.ಕೆ. ಅವರ ಪ್ರಕಾರ 'ಅತಿ ಪ್ರಾಚೀನ ವನ್ಯ ಅವಸ್ಥೆಯ ಕಾಲದಲ್ಲಿ ಸ್ತ್ರೀ-ಪುರುಷರ ಸ್ಥಾನ ಸಮಾನವಾಗಿತ್ತು'[೧೨೭] ಹಾಗಾಗಿ ಸ್ತ್ರೀ ಪುರಷರ ನಡುವೆ ಕೇವಲ ಶಾರೀರಿಕ ಸಂರಚನೆಯಲ್ಲಿ

ವ್ಯತ್ಯಾಸಗಳಿದ್ದವು ಎಂಬುದನ್ನು ಒಪ್ಪಿಕೊಳ್ಳಲೇಬೇಕು. ವೇದಗಳ ಕಾಲದಲ್ಲಿಯೂ ಸ್ತ್ರೀ ಪುರುಷರ ಸಾಮಾಜಿಕ ಸ್ಥಾನಮಾನದಲ್ಲಿ ವಿಶೇಷ ಅಂತರವಿರಲಿಲ್ಲ ಎಂಬುದನ್ನು ಸಮರ್ಥಿಸಲು ನಮ್ಮ ಮುಂದೆ ಅನೇಕ ನಿದರ್ಶನಗಳಿವೆ. ಋಗ್ವೇದದಲ್ಲಿ ಬ್ರಹ್ಮವಾದಿನಿಯರ, ಸದ್ಯೋದ್ವಾಹರ ಪ್ರಸ್ತಾವ ಬಂದಿರುವುದರಿಂದ ಇದು ಇರಬಹುದೆನಿಸುತ್ತದೆ. ಕಾತ್ಯಾಯನ ವಾರ್ತಿಕದಲ್ಲಿ ಉಪಧ್ಯಾಯ ಹಾಗೂ ಉಪಧ್ಯಾಯಿನಿ ಎಂಬುದರ ಉಲ್ಲೇಖದಿಂದ, ಮೈತ್ರೇಯಿ, ಗಾರ್ಗಿ ಮುಂತಾದವರ ಉದಾಹರಣೆಗಳಿಂದ ಸ್ತ್ರೀಯರು ವಿದ್ಯಾವಂತರಾಗಿದ್ದರೂ, ಪಂಡಿತರಾಗಿದ್ದರೂ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಅಂದಿನ ಮಹಿಳೆ ಲಲಿತ ಕಲೆಗಳು, ಯುದ್ಧಕಲೆಗಳು, ರಾಜಕೀಯ ರಂಗ, ಮುಂತಾದ ಕ್ಷೇತ್ರಗಳಲ್ಲಿ ಪ್ರವೇಶ ಹಾಗೂ ಪರಿಣಿತಿ ಇತ್ತು ಎಂಬುದನ್ನು ಊಹಿಸಬಹುದಾಗಿದೆ. ಜಾನಪದದಲ್ಲೂ ಪಶುಪಾಲನೆ ಕೃಷಿಯೇ ಮುಖ್ಯವಾಗಿದ್ದ ಆರಂಭಿಕ ಸಂದರ್ಭದಲ್ಲಿ ಸ್ತ್ರೀ ಪ್ರಮುಖ ಪಾತ್ರವಹಿಸಿರುವುದು ಕಂಡುಬರುತ್ತದೆ. ಯಾವುದೋ ಒಂದು ಹಂತದಲ್ಲಿ ತನ್ನ ಸ್ವಂತಿಕೆಯನ್ನು ಕಳೆದುಕೊಂಡ ಸ್ತ್ರೀ ಇಂದಿನವರೆಗೂ ತನ್ನ ಸ್ಥಾನಮಾನಕ್ಕೆ ಹೋರಾಟ ನಡೆಸುತ್ತಲೇ ಬಂದಿದ್ದಾಳೆ. ತನ್ನ ಪುರುಷಾಧಿಕಾರದ ಪ್ರಾಬಲ್ಯವನ್ನು ನಿರಂತರವಾಗಿ ಕಾಯ್ದಿರಿಸಿಕೊಳ್ಳಲು ಆತ ಧರ್ಮ, ಶಾಸ್ತ್ರಗಳು ಹಾಗೂ ಸ್ಮೃತಿಗಳನ್ನು ಬಳಸಿಕೊಂಡ. ಆ ಮೂಲಕ ಸ್ತ್ರೀ ಮೇಲೆ ಅನೇಕ ನಿರ್ಬಂಧಗಳನ್ನು ಹೇರಿದ. ಅವಳ ಕಾರ್ಯಕ್ಷೇತ್ರವನ್ನು ನಿರ್ದಿಷ್ಟಪಡಿಸಿದ. ಮೇಲ್ನೋಟಕ್ಕೆ ದೈವತ್ವದ ಸ್ಥಾನಮಾನವಿದೆ ಎಂದು ಹೇಳುತ್ತಾ ಆಕೆಯನ್ನು ನಿಯಂತ್ರಿಸತೊಡಗಿದ. ಮಾತೆ, ಭೂಮಿತಾಯಿ, ತ್ಯಾಗಮಯಿ ಎಂದು ಹೇಳುತ್ತಾ ಆಕೆಯ ಸ್ವಾತಂತ್ರ್ಯವನ್ನು ಕಸಿದುಕೊಂಡ. ತಾಯ್ತನವನ್ನು ಇನ್ನಿಲ್ಲದಂತೆ ವೈಭವೀಕರಿಸಿರುವುದು ಈ ಶೋಷಣೆಯ ವಿಸ್ತರಣೆ ಎಂದು, ಡಾ. ಮಣಿಮಾಲಿನಿ. ಅವರು ತಮ್ಮ 'ದ್ರೌಪದಿ ಒಂದು ಸಮೀಕ್ಷೆ' ಎಂಬ ಕೃತಿಯಲ್ಲಿ ಹೇಳಿರುವುದು ಹೆಚ್ಚು ಅರ್ಥಪೂರ್ಣವಾಗಿದೆ. ತಾಯಿಯಾಗದ ಹೆಂಗಸಿನ ಜೀವನ ಹೇಗಿದ್ದರೂ ಅಪೂರ್ಣವೇ? ತಾಯ್ತನಕ್ಕೆ ಬೇಕಾದ ಜೀವನಪ್ರೀತಿ, ಜೀವನ ಶ್ರದ್ಧೆ, ಅಂತಃಕರಣಗಳು ಹೆಣ್ಣು ದೇಹಗಳೊಂದಿಗೆ ಬಂದುಬಿಡುತ್ತದೆಯೇ? ತಾಯ್ತನದ ಇಕ್ಕಟ್ಟು ಆಯಾಸ ಕ್ಲೇಶಗಳಿಂದ ಹೆಣ್ಣು ಯಾವತ್ತೂ ರೋಸಿ ಹೋಗುವುದಿಲ್ಲವೇ? ಬಹಳ ಜನಕ್ಕೆ ಒಂದು ಅನಿವಾರ್ಯವಾದ ಜೈವಿಕ ಕ್ರಿಯೆಯಾಗಿ ಮಾತ್ರ ತಾಯ್ತನ ಬಂದಿದೆಯೇ ಎಂದು ಡಾ. ವಿಜಯದಬ್ಬೆ ಅವರು ಎತ್ತುವ ಪ್ರಶ್ನೆಗಳು ತುಂಬಾ ಗಮನಾರ್ಹ[೧೩೧] ಇಂತಹ ಪ್ರಶ್ನೆಗಳನ್ನು ಎತ್ತುವುದು ಅಸಂಗತ ಎನ್ನುವಷ್ಟರ ಮಟ್ಟಿಗೆ ಅದು ಸಹಜ ತಾಯ್ತನ ಎಂದು ಆರೋಪಿಸಲಾಯಿತು. ಆ ಮೂಲಕ ಪುರುಷ ಅಧಿಕಾರ ಅವಳ ಎಲ್ಲ ಕ್ರಿಯಾಶೀಲ ಚಟುವಟಿಕೆಗಳನ್ನು ನಿಯಂತ್ರಿಸಿತು. ಮುಂದುವರಿದು ಈ ಪುರುಷ ಕೇಂದ್ರಿತ ಪ್ರಜ್ಞೆ ಸ್ತ್ರೀಯರ ಸ್ವಭಾವ, ಶಕ್ತಿ ಮತ್ತು ನಡುವಳಿಕೆಗಳನ್ನು ನಿರ್ಧರಿಸಿ ಆ ನಿರ್ಣಯಕ್ಕೆ ಪೂರಕವಾಗಿ ಗಂಡಸಿನ ಮಾನಸಿಕ, ಭೌತಿಕ, ಜೈವಿಕ ಅಗತ್ಯಗಳಿಗೆ ಸರಿಹೊಂದುವ ಸೀತೆ, ಸಾವಿತ್ರಿ, ದಮಯಂತಿಯಂತಹ ಕೆಲವು ಮಾದರಿಗಳನ್ನು ಸೃಷ್ಟಿಸಿತು. ಈ ಮಾದರಿಗಳ ಭ್ರಮೆಯಲ್ಲಿ ಸ್ತ್ರೀಯರು ಬದುಕುವಂತೆ ಮಾಡಿತು. ಈ ಮಾದರಿಗಳನ್ನು ಎಲ್ಲ ಕಾಲದಲ್ಲಿಯೂ

ಕಾಪಾಡಿಕೊಂಡು ಬರಲಾಯಿತು. ಯಾವುದೇ ವ್ಯವಸ್ಥೆ ಬಂದರೂ ಈ ಮಾದರಿಗಳಿಗಿರುವ ಸ್ಥಾನಮಾನ ಬದಲಾಗಲಿಲ್ಲ. ಬದಲಿಗೆ ಈ ಮಾದರಿಯು ಮಾನದಂಡವಾಗಿ ಶುದ್ಧ-ಅಶುದ್ಧ, ಪವಿತ್ರ-ಅಪವಿತ್ರ, ಪತಿವ್ರತೆ-ಕುಲಟೆ ಮುಂತಾದ ಪರಿಕಲ್ಪನೆಗಳ ಹುಟ್ಟಿಗೆ ದಾರಿಯಾಯಿತು. ಈ ಮಾನದಂಡಗಳ ಮೂಲಕ ಮಹಿಳೆಯ ಸ್ಥಾನಮಾನವನ್ನು ಸಮಾಜದಲ್ಲಿ ನಿರ್ಧರಿಸಲಾಯಿತು. ಇಂತಹ ಮಾದರಿಗಳನ್ನು ಸೃಷ್ಟಿಸಿದ ಪುರುಷ ಪ್ರಧಾನ ವ್ಯವಸ್ಥೆಯ ಅಂತರಂಗದ ಉದ್ದೇಶ ಸ್ಪಷ್ಟವಾಗಿ ಇಲ್ಲಿ ಗೋಚರವಾಗುತ್ತದೆ. ಸ್ವಾತಂತ್ರ ಬಂದ ನಂತರ ನಮ್ಮ ಸಂವಿಧಾನ ಸಮಾನತೆ, ಸ್ವಾತಂತ್ರ್ಯ ಹಾಗೂ ಘನತೆಯನ್ನು ಸಾರುತ್ತದೆ. ಈ ಪ್ರಮುಖ ಉದ್ದೇಶಗಳ ಈಡೇರಿಕೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕಳೆದ ೬೦ ವರ್ಷಗಳಿಂದ ಅನೇಕ ಕಾನೂನುಗಳನ್ನು ರೂಪಿಸಿವೆ, ಯೋಜನೆಗಳನ್ನು ಆರಂಭಿಸಿವೆ ಆದರೂ ಸಮಾನತೆಯನ್ನು ಸ್ಥಾಪಿಸಲು ಸಾಧ್ಯವಾಗಿಲ್ಲ. ಈಗ ಪುರುಷರ ನ್ಯಾಯಕ್ಕಾಗಿ ಹೋರಾಡುವ ಪುರುಷ ಸಂಸ್ಥೆಗಳು ಹುಟ್ಟಿಕೊಂಡಿರುವ ಹಿಂದಿನ ಉದ್ದೇಶವೇನೆಂಬುದು ಮುಂದಿನ ಸ್ತ್ರೀ ಸಮಾನತೆ ಭವಿಷ್ಯಕ್ಕೆ ಕನ್ನಡ ಹಿಡಿದಂತಿದೆ. ಸಮಾನತೆ, ಅವಕಾಶಗಳು ಸಮಾನವಾಗಿದ್ದ ಅಥವಾ ಒಂದು ಕೈ ಮೇಲಾಗಿದ್ದ ಸ್ತ್ರೀಯರ ಕ್ರಿಯಾಶೀಲತೆಯನ್ನು ನಿಯಂತ್ರಿಸಲು ಪಿತೃಪ್ರಧಾನ ವ್ಯವಸ್ಥೆ ಮಾಡಿದ ಪ್ರಮುಖ ಕೆಲಸ ಲೈಂಗಿಕ ಸ್ವಾತಂತ್ರ್ಯವನ್ನು ವಿವಾಹ ವ್ಯವಸ್ಥೆಯ ಮೂಲಕ ಕಸಿದುಕೊಂಡದ್ದು. ಮುತ್ತೈದೆ ಎಂಬ ಬೇಡಿ ತೊಡಿಸಿ ತಾವು ಮಾತ್ರ ಸ್ವೇಚ್ಛಾಚಾರದಿಂದ ಬದುಕುತ್ತಿರುವುದು. ಎಚ್.ಎಸ್. ಶ್ರೀಮತಿಯವರ ಮಾತು ಇಲ್ಲಿ ತುಂಬಾ ಪ್ರಸ್ತುತವೆನಿಸುತ್ತದೆ. 'ಹೆಣ್ಣು ತನ್ನ ಜೀವತೃಪ್ತಿಗಾಗಿ, ಸಂತೋಷಕ್ಕಾಗಿ ಮಾತ್ರ ತನ್ನ ಲೈಂಗಿಕತೆಯನ್ನು ಬಳಸುವುದನ್ನು ಈ ನಾಗರಿಕತೆ ವಿರೋಧಿಸುತ್ತದೆ. ಗಾಂಧೀಜಿಯಂತಹ ಮಹಾತ್ಮರೇ ಸಂತಾನ ನಿಯಂತ್ರಣ ವಿಧಾನವನ್ನು ಅಳವಡಿಸಿಕೊಂಡು ಲೈಂಗಿಕತೆಯ ಸುಖವನ್ನು ಅಪೇಕ್ಷಿಸುವ ಹೆಣ್ಣು ವೇಶ್ಯೆಗೆ ಸಮ ಎಂದರಂತೆ, ಇಂಥಹ ವಿವಾಹಿತ ಹೆಣ್ಣಿಗೂ, ವೇಶ್ಯೆಗೂ ಇರುವ ಒಂದು ವ್ಯತ್ಯಾಸವೆಂದರೆ, ಒಬ್ಬಳು ಒಬ್ಬ ಗಂಡಸಿನ ಜೊತೆ ಮಲಗುತ್ತಾಳಾದರೆ, ಇನ್ನೊಬ್ಬಳು ಹಲವು ಗಂಡಸರೊಂದಿಗೆ ಮಲಗುತ್ತಾಳಷ್ಟೇ ಎಂದರಂತೆ. ಅಂತೆಕಂತೆಗಳೇನೇ ಇರಲಿ, ಅಲ್ಲಿಗೆ ಹೆಂಗಸಿನ ಲೈಂಗಿಕತೆಗೆ ಲಗತ್ತಾಗುವ ಅರ್ಥವಾದರೂ ಏನು? ನಮ್ಮ ಕುಟುಂಬ ಯೋಜನೆಯ ತತ್ವಗಳು ಮೂಲತಃ ಗಾಂಧೀಜಿಯವರ ಈ ಬ್ರಹ್ಮಚರ್ಯ ಚಿಂತನೆಗೆ ವಿರುದ್ಧವಾದದ್ದು. ಅವರು ಸಂತಾನೋತ್ಪತ್ತಿಯ ಹೊರತು ಲೈಂಗಿಕತೆಗೆ ಬೆಲೆಯಿಲ್ಲವೆಂದು ಹೇಳಿದರೆ? ಈ ಕುಟುಂಬ ಯೋಜನೆಯು ಲೈಂಗಿಕತೆಯನ್ನು ಸಂತಾನೋತ್ಪತ್ತಿಯಿಂದ ಹೊರತಾಗಿಡಲು ನೋಡುತ್ತದೆ. ಅಥವಾ ಅದನ್ನು ನಿಯಂತ್ರಿಸಲು ಹವಣಿಸುತ್ತದೆ. ಆದರೆ, ಎರಡು ಚಿಂತನೆಗಳೂ ಹೆಣ್ಣಿನ ಲೈಂಗಿಕತೆಯನ್ನು ನಿರ್ಬಂಧಿಸಲು ತೊಡಗುತ್ತವೆ ಎಂಬುದು ಗಮನಾರ್ಹ.[೧೨೮]

ನಿರ್ಲಕ್ಷಕ್ಕೆ ಒಳಗಾದ ಪಾತ್ರಗಳ್ಯಾವುವು ಎಂದು ನಾವು ಪ್ರಶ್ನೆ ಹಾಕಿಕೊಂಡರೆ ತಕ್ಷಣ ಉತ್ತರ ಕೊಡುವವರು ಊರ್ಮಿಳೆ, ಮಂಡೋದರಿ, ಮಂಥರೆ, ಅಹಲ್ಯೆ, ಶೂರ್ಪನಖಿ ಮುಂತಾದ ಹೆಸರುಗಳನ್ನು

ತಕ್ಷಣ ಉಲ್ಲೇಖಿಸುತ್ತಾರೆ. ರವೀಂದ್ರನಾಥ್ ಠಾಗೂರ್ ಅವರು ಕೂಡ ಊರ್ಮಿಳೆಯ ತ್ಯಾಗಕ್ಕೆ ಮನಮಿಡಿದು ಆಕೆಗೆ ನ್ಯಾಯ ಒದಗಿಸಲು ಅನೇಕ ಲೇಖಕರಿಗೆ, ಕವಿಗಳಿಗೆ, ಬರಹಗಾರರಿಗೆ ಪ್ರೇರಣೆ ನೀಡಿದ್ದಾರೆ. ಆದರೆ ನಿರ್ಲಕ್ಷಕ್ಕೆ ಒಳಗಾದ ಪಾತ್ರಗಳು ಯಾವುವು ಎಂದರೆ ರಾಮಾಯಣದ ಸೀತೆಯನ್ನು ಒಳಗೊಂಡಂತೆ ಎಲ್ಲ ಸ್ತ್ರೀಪಾತ್ರಗಳು ಎಂದೇ ಹೇಳಬೇಕಾಗುತ್ತದೆ.

ಮಹಾಭಾರತದಲ್ಲೂ ಬಹಳ ಪ್ರಮುಖ ಪಾತ್ರ ದ್ರೌಪದಿಯದ್ದು. ಪ್ರತಿಭಟನೆ, ಸೇಡು ಮುಂತಾದ ಗುಣಗಳನ್ನು ಈ ಪಾತ್ರಕ್ಕೆ ಆರೋಪಿಸಲಾಗಿದೆ. ಈಕೆಗೆ ಐವರು ಗಂಡಂದಿರು. ಒಬ್ಬೊಬ್ಬರು ಅಸಾಮಾನ್ಯ ಶೂರರು, ಧೀರರು. ಹಾಗಾಗಿ, ದ್ರೌಪದಿಗೆ ಯಾವುದೇ ಕೊರತೆ, ಸಮಸ್ಯೆ ಉದ್ಭವಿಸಲೇ ಬಾರದಿತ್ತು. ಒಬ್ಬ ಗಂಡನಿಂದಲೇ ಸ್ವರ್ಗ, ಮೋಕ್ಷ ಸ್ತ್ರೀಗೆ ದೊರೆಯುವಾಗ ಐವರಿಂದ ಇನ್ನೆಂತಹ ಶಾಶ್ವತ ಸುಖ ನೆಮ್ಮದಿ ದೊರೆತಿರಬಹುದು. ಇಂತಹ ಪ್ರಮುಖ ಪಾತ್ರವಾದ ದ್ರೌಪದಿಯೂ ಕೊನೆಯವರೆಗೂ ಎಂತಹ ಹೋರಾಟದ ಬದುಕನ್ನು ಬದುಕುತ್ತಾಳೆ. ದಶಾವಾತಾರದ ಕೃಷ್ಣನ ಸಖ್ಯದಿಂದಲೂ ಈಕೆಗೆ ಯಾವುದೇ ನ್ಯಾಯ ದೊರೆಯುವುದಿಲ್ಲ. ಡಾ. ಮಣಿಮಾಲಿನಿ. ವಿ.ಕೆ. ಅವರ ಮಾತುಗಳನ್ನು ಸಾಂದರ್ಭಿಕವಾಗಿ ಇಲ್ಲಿ ಉಲ್ಲೇಖಿಸಬಹುದಾಗಿದೆ. ದ್ರೌಪದಿಯದು"ಪುರಾಣದ ಸ್ತ್ರೀಯರಲ್ಲೇ ಹೆಚ್ಚು ಚರ್ಚೆಗೆ ಒಳಗಾದ ಪಾತ್ರವಾಗಿದೆ. ಅವಳ ಅಗ್ನಿಕನ್ಯತ್ವ, ಪಂಚಪತಿತ್ವ, ಬುದ್ಧಿಮತ್ತೆ, ಅಲೌಕಿಕ ಸೌಂದರ್ಯಗಳು ಅವಳನ್ನು ಇತರ ಸ್ತ್ರೀಪಾತ್ರಗಳಿಂದ ಭಿನ್ನವಾಗಿಸುತ್ತವೆ. ಇವೆಲ್ಲವುಗಳಿಗಿಂತ ಹೆಚ್ಚಾಗಿ ಒಂದು ರೀತಿಯಿಂದ ಅಭಿಶಪ್ತವಾಗಿದ್ದ ಬದುಕಿನುದ್ದಕ್ಕೂ ಸ್ವಂತಿಕೆಗಾಗಿ, ಅಸ್ತಿತ್ವಕ್ಕಾಗಿ ಅವಳು ನಡೆಸಿದ ಹೋರಾಟಗಳು ಅವಳ ಎತ್ತರವನ್ನು ಹೆಚ್ಚಿಸುತ್ತವೆ. ಇಲ್ಲಿ ನಮ್ಮನ್ನು ಗಾಢವಾಗಿ ತಟ್ಟುವುದು ಪಾಂಚಾಲ ರಾಜಪುತ್ರಿಯಾಗಿ, ಕುರುವಂಶದ ಸೊಸೆಯಾಗಿ, ಪಂಚವಲ್ಲಭೆಯಾಗಿ, ಕೃಷ್ಣನ ಪ್ರಿಯಸಖಿಯಾಗಿದ್ದು ಕೂಡಾ ಏಕಾಂಗಿಯಾಗಿಯೇ ಉಳಿದ ಅವಳ ಬದುಕಿನ ದುರಂತ. ಜೀವನದುದ್ದಕ್ಕೂ ನೆರಳಿನಂತೆ ಸಾಗಿಬಂದ ನೋವಿನೊಡನೆಯೇ ಉಸಿರಾಡಿದ ಅವಳು ಕಾಲ ದೇಶಗಳಿಂದಾಚೆ ಸ್ತ್ರೀತ್ವಕ್ಕೆ ಸಮಾನವಾದ ಯಾತನೆಯ ಜಗತ್ತೊಂದನ್ನು ಕಟ್ಟಿಕೊಂಡಿರುತ್ತಾಳೆ. ಸುಡುವುದಕ್ಕೆಂದೇ ಹುಟ್ಟಬಂದಂತಿರುವ ಬೆಂಕಿಯಿಂದ ಎದ್ದು ಬಂದ ಯಾಜ್ಞಸೇನಿ ಪುರುಷ ಪ್ರಾಧಾನ್ಯವಿರುವ ಯಾವುದೇ ಸಮಾಜದ ಸ್ತ್ರೀಯರ ಪ್ರತೀಕವಾಗುತ್ತಾಳೆ. ಪ್ರತಿಯೊಂದು ಸಲ ತುಳಿತಕ್ಕೆ ಮೈಯೊಡ್ಡಿದಾಗಲೂ ಗಟ್ಟಿಗೊಳ್ಳುವ ವ್ಯಕ್ತಿತ್ವದ ಶಾಶ್ವತ 'ಮಹಿಳೆಯಾಗಿ' ಬದುಕನ್ನೆ ಮೀರಿಬಿಡುತ್ತಾಳೆ.[೧೨೯]

ಪುರುಷೋತ್ತಮನ ಮಡದಿಯೇ ಆಗಲಿ, ಸಾಕ್ಷಾತ್ ಲಕ್ಷ್ಮೀಯೇ ಆಗಲಿ, ಐವರ ಧೀರ ಗಂಡಂದಿರ ಪತ್ನಿಯೇ ಆಗಿರಲಿ, ಶ್ರೀಕೃಷ್ಣನ ಕೃಪೆಯೇ ಇರಲಿ ಆಕೆ ಸ್ತ್ರೀ ಎಂದಾದ ಮೇಲೆ ಇಂತಹ ಸ್ಥಿತಿ ಕಟ್ಟಿಟ್ಟಬುತ್ತಿ. ಶೋಷಣೆಗೆ ಒಳಗಾಗುವುದೇ ಅವಳ ವಾಸ್ತವದ ಬದುಕು, ಉಳಿದದ್ದು ಬರೀ ಭ್ರಮೆ.

ವಾಲ್ಮೀಕಿ ರಾಮಾಯಣ, ರಾಮಚರಿತ ಮಾನಸ ಹಾಗೂ ತೊರೆವೆರಾಮಾಯಣಗಳಲ್ಲಿ ಸೀತೆಯನ್ನು ಕುರಿತು ಆಡುವ ಮಾತುಗಳು ಹಾಗೂ ಸೀತೆಯೇ ಆಡುವ ಮಾತುಗಳನ್ನು ಗಮನಿಸಿದರೆ ಪಿತೃಪ್ರಧಾನ

ವ್ಯವಸ್ಥೆಯ ಪ್ರಾಬಲ್ಯ ಇರುವುದು ಕಂಡುಬರುತ್ತದೆ. ಹಾಗೆಯೇ ಆಕೆಯ ಸ್ಥಾನ ಒಬ್ಬ ಸಾಮಾನ್ಯ ಸ್ತ್ರೀಗಿರುವ ಸ್ಥಾನಮಾನಕ್ಕಿಂತ ಮೇಲೇರಲು ಬಿಡುವುದಿಲ್ಲ ಎಂಬುದು ಖಚಿತವಾಗುತ್ತದೆ.

'ವೀರ್ಯಶುಲ್ಕ' ಎಂಬ ಪದವನ್ನು ಜನಕ ಮಹಾರಾಜ ಬಳಸುತ್ತಾನೆ. ಅವಳಿಗೆ ಸೀತೆಯೆಂದು ಹೆಸರಿಟ್ಟನು, ಭೂತಳದಿಂದ ಜನಿಸಿದ ಅವಳು ಅಯೋನಿಜೆ, ಅವಳನ್ನು ವೀರ್ಯಶುಲ್ಕಳು'ಎಂದು ನಿಚ್ಚಯಿಸಿದ್ದೇನೆ' ಎಂದು ಹೇಳುತ್ತಾನೆ. ಮುಂದುವರಿದು ಸೀತೆ ವನಗಮನ ಸಂದರ್ಭದಲ್ಲಿ ರಾಮನನ್ನು ಕುರಿತು ಹೀಗೆ ಹೇಳುತ್ತಾಳೆ. "ನನ್ನ ತಂದೆಯಾದ ಮಿಥಿಲೇಶ್ವರನು ನಿನ್ನನ್ನು ಅಳಿಯನನ್ನಾಗಿ ಮಾಡಿಕೊಂಡಾಗ, ನೀನೊಬ್ಬ ಗಂಡು ವೇಷದ ಹೆಣ್ಣೆಂದು ತಿಳಿದಿದ್ದನೆ?" ಜನಕನು ತನ್ನ ಮುದ್ದಿನ ಮಗಳನ್ನು, ಊರ್ಮಿಳೆಗಿಂತಲೂ ಭಿನ್ನವಾಗಿ ಬೆಳೆಸಿದ ಸೀತೆಯನ್ನು, ಯುದ್ಧ ಕೌಶಲ್ಯಗಳನೆಲ್ಲಾ ಪುರುಷನಿಗೆ ಸರಿಸಮನಾಗಿ ಕಲಿತ ಸೀತೆಯನ್ನು ಒಂದು ವಸ್ತು ಎಂದು ಪರಿಗಣಿಸಿ ವೀರ್ಯಶುಲ್ಕಳು ಎಂದು ಉಚ್ಚರಿಸುತ್ತಾನೆ. ತೆಲುಗಿನ ಓಲ್ಗಾ ಅವರು ರಾಮ ಮತ್ತು ಸೀತೆಯ ಸಂಬಂಧ ಕುರಿತು ಆಧುನಿಕ ದೃಷ್ಟಿಕೋನದಿಂದ ಮನೋಜ್ಞವಾಗಿ ಚಿತ್ರಿಸಿದ್ದಾರೆ. 'ರಾಮನನ್ನು ಅಮರವಾಗಿ ಪ್ರೀತಿಸಿದ ಸೀತೆ, ರಾಮನ ಅಮರ ಪ್ರೇಮವನ್ನು ಅನುಭವಿಸಿದ ಸೀತೆ, ಆ ರಾಮನಿಂದಲೇ ಅವಮಾನಗಳನ್ನು, ತಿರಸ್ಕಾರಗಳನ್ನು ಭರಿಸಬೇಕಾಯಿತು. ಪ್ರೇಮಾನುರಾಗಗಳಿಂದ ರಾಮನ ಮಡಿಲಲ್ಲಿ ಸೇರುವ ಸೀತೆ, ರಾಮನ ಅಡಿಯಲ್ಲಿ ಅಡಿಯಿಟ್ಟು ಅನುಸರಿಸುವ ಸೀತೆ, ಆತನಿಂದ ದೂರ ಸರಿದು ಮಕ್ಕಳನ್ನು ಸಹ ಬಿಟ್ಟು ತನ್ನ ದಾರಿಯನ್ನು ತಾನು ಕಂಡುಕೊಳ್ಳುತ್ತಾಳೆ. ಆಕೆಯ ಜೀವನಾನುಭವಗಳು ಆಕೆಯನ್ನು ಆ ಗುರಿಯತ್ತ ಗಮನ ಹರಿಸುವಂತೆ ಮಾಡಿವೆ. ಆದರೆ ಸೀತೆ ಮಾಡಿದ ಈ ಪ್ರಯಾಣದಲ್ಲಿ ಆಕೆಗೆ ಜೊತೆಯಾಗಿ ಸ್ತ್ರೀಯರು ಇದ್ದೇ ಇದ್ದರೆನಿಸುತ್ತದೆ. ಸೀತೆ ರಾಮನನ್ನು ತಿರಸ್ಕರಿಸಿ ಹೋಗುವುದೆಂದರೆ ಆಕೆ ತನ್ನಲ್ಲಿ ತಾನು ದೊಡ್ಡ ಸಮರವನ್ನು ಮಾಡಿರಲೇಬೇಕು. ಕೇವಲ ಕೋಪದಿಂದ ರಾಮನನ್ನು ಅಗಲುವುದು ಅಸಂಭವವಾದ ಕಾರ್ಯ. ಕೋಪ, ದ್ವೇಷಗಳು ಮನುಷ್ಯನನ್ನು ಮನುಷ್ಯನ ಜೊತೆ ಇನ್ನಷ್ಟು ಹತ್ತಿರ ಕೂಡಿಸುತ್ತವೆಂದು ಮನೋವೈಜ್ಞಾನಿಕ ವಿಶ್ಲೇಷಕರು ಹೇಳುತ್ತಿರುತ್ತಾರೆ. ಪ್ರೀತಿಗಿಂತ ಹೆಚ್ಚಾಗಿ ಕೋಪ, ದ್ವೇಷ ವ್ಯಕ್ತಿಗಳನ್ನು ಬಂಧಿಸುತ್ತವೆ, ವಿಮುಕ್ತಗೊಳಿಸಲಾರವು. ಅದಕ್ಕಾಗಿ ಸೀತೆ ಕೇವಲ ಕೋಪದಿಂದ ಹೋಗಲಿಲ್ಲ. ಒಂದು ಪರಿಣಿತ ಮನಸ್ಸಿನಿಂದ ಹೋಗಿದ್ದಾಳೆ. ಆ ಪರಿಣಿತೆಯು ಆಕೆಗೆ ಲೋಕಾನುಭವದಿಂದಲೂ ಸಹ ಬಂದಿರಬಹುದೆನಿಸುತ್ತದೆ. ಆಕೆಗೆ ಆ ಶಕ್ತಿ ಬಾಹ್ಯವಾಗಿಯೂ ಸಹ ಉಂಟಾಗಿರಬಹುದು. ಅದು ಅಂತರ್ ಶಕ್ತಿಯಾಗಿ ಪರಿವರ್ತನೆಯಾಗಿರಬಹುದು."[೧೨೦]

ಹಾಗೆಯೇ ಸೀತೆಯ ಬಾಯಿಂದ ಹೊರಹೊಮ್ಮುವ 'ಗಂಡುವೇಷದ ಹೆಣ್ಣು ಎಂಬ' ಮಾತುಗಳು ಮೇಲ್ನೋಟಕ್ಕೆ ರಾಮನನ್ನು ಹಿಯ್ಯಾಳಿಸುವಂತೆ, ರಾಮನೊಂದಿಗೆ ಸೀತೆಗೆ ಅಪಾರ ಸಲುಗೆ ಇರುವಂತೆ ಕಂಡರೂ ಅಂತರ್ಯದಲ್ಲಿ ಹೆಣ್ಣು ದುರ್ಬಲಳು, ಅಶಕ್ತಳು ಎಂಬ ಅರ್ಥವನ್ನು ಅದು ವ್ಯಂಜಿಸುತ್ತದೆ.

ಇಂತಹ ಮಾತುಗಳನ್ನು ಸ್ತ್ರೀ ಪಾತ್ರದ ಮೂಲಕವೇ ಕವಿ ಹೇಳಿಸಿ ಇದು ಸಾರ್ವತ್ರಿಕ ಸತ್ಯ ಎಂಬುದನ್ನು ಬಿಂಬಿಸಲಾಗುತ್ತದೆ.

ರಾಮನಾಡುವ ಮಾತುಗಳನ್ನು ಇಲ್ಲಿ ಗಮನಿಸೋಣ "ವೈದೇಹಿಗೆ ಪರಪುರಷನ ಸ್ಪರ್ಶವಾಯಿತೆಂಬುದಕ್ಕಿಂತ ನನಗೆ ಹೆಚ್ಚು ದುಃಖಕರವಾದುದು ಇನ್ನೊಂದಿಲ್ಲ. ಪಿತೃವಿಯೋಗಕ್ಕಿಂತಲೂ ರಾಜ್ಯಭ್ರಂಶಕ್ಕಿಂತಲೂ ನನಗೆ ಸಂಕಟವಾಗುತ್ತಿದೆ." ಹಾಗೆಯೇ ರಾವಣನ ಸಂಹಾರ ಆದ ಮೇಲೆ ನೆರದಿದ್ದ ವಾನರ ರಾಕ್ಷರರೆದುರಿಗೆ ರಾಘವನು ಆಡುವ ಪುರುಷವಾಕ್ಯಗಳನ್ನು ಇಲ್ಲಿ ನೋಡೋಣ, ಈ ರಣಪರಿಶ್ರಮವೆಲ್ಲವೂ ನಿನಗೋಸ್ಕರವಾಗಿ ಅಲ್ಲ ಎಂಬುದು ನಿನಗೆ ತಿಳಿದಿರಲಿ." ದಂಡಕಾರಣ್ಯದಲ್ಲಿ ವಿರಾಧನೆಂಬ ರಾಕ್ಷಸ ಸೀತೆಯನ್ನು ಸ್ಪರ್ಷ ಮಾಡಿದಾಗ ರಾಮನಿಗೆ ಪಿತೃವಿಯೋಗ, ರಾಜ್ಯ ಕಳೆದುಕೊಂಡದ್ದು ದೊಡ್ಡ ಸಂಗತಿಯಾಗಿ ಕಾಣಲಿಲ್ಲ. ಆದರೆ ರಾವಣನ ಸಂಹಾರ ಆದ ಮೇಲೆ ೧೪ ವರ್ಷಗಳ ವನವಾಸ, ಮಾರೀಚ ವಧೆ, ಅಹಲ್ಯೆಯ ಶಾಪವಿಮೋಚನೆ, ತಾಟಕಿ ಸಂಹಾರ, ವಾನರ ವೀರರ ಸಖ್ಯ, ವಿಭೀಷಣನ ನೆರವು, ಲಂಕೆಯ ಯುದ್ಧ ಎಲ್ಲವೂ ಕೇವಲ ಒಂದು ಹೆಣ್ಣಿಗಾಗಿ ಎಂಬ ಅಳುಕು ಕಾಡಿದಂತೆ ಕಾಣುತ್ತದೆ. ಪುರುಷೋತ್ತಮ, ವಿಷ್ಣುವಿನ ಅವತಾರ ಕೇವಲ ಒಂದು ಹೆಣ್ಣಿಗಾಗಿ ರಾಮಾವತಾರ ಎತ್ತಿ ಬರಬೇಕಾಯಿತೆ. ಆಕೆಯ ತ್ಯಾಗ, ಪ್ರೀತಿ, ಪ್ರೇಮ, ನಿಷ್ಠೆ, ಎಲ್ಲವೂ ಆತನಿಗೆ ಗೌಣವಾಯಿತು. ಹಾಗಾದರೆ ರಾಕ್ಷಸನ ಸ್ಪರ್ಶ ಸೀತೆಗಾದಾಗ ಆತನಲ್ಲಿ ಉಂಟಾದ ಸಂಕಟ ಯಾವ ಸ್ವರೂಪದ್ದು, ಅದು ಆತನ ಪೌರುಷಕ್ಕೆ ಉಂಟಾದ ಘಾತಕವೋ ಅಥವಾ ಆಕೆ ನನಗೇ ಸರ್ವದಾ ಮೀಸಲಿರಬೇಕೆಂಬ ಉತ್ಕಟವಾದ ಬಯಕೆಯೋ? ಇಲ್ಲಿ ಸೀತೆಯ ಬಗ್ಗೆ ಪ್ರೀತಿ, ಪ್ರೇಮ ಎಂಬ ಭಾವನೆಗಳು ವಾಸ್ತವದಲ್ಲಿ ಇದ್ದಂತೆ ಕಂಡುಬರುವುದಿಲ್ಲ. ಇಂತಹ ವೈರುಧ್ಯಗಳು ನಮಗೆ ರಾಮಾಯಣದ ಉದ್ದಕ್ಕೂ ದೊರೆಯುತ್ತವೆ. ಅಂದರೆ ರಾಮಾಯಣ ಕಥೆಯ ಹಂದರದಲ್ಲಿ ಸರ್ವಮಾನ್ಯವಾದ ಒಂದು ಸೂತ್ರ ಇಲ್ಲ. ಪಿತೃಪ್ರಧಾನ ವ್ಯವಸ್ಥೆಯ ಉದ್ದೇಶಗಳನ್ನು, ಹುನ್ನಾರಗಳನ್ನು ಕಾಯ್ದಿರಿಸಿಕೊಳ್ಳಲು ಇಂತಹ ಮಾತುಗಳನ್ನು, ಸಂದರ್ಭಗಳನ್ನು ಸೃಷ್ಟಿಸಲಾಗಿದೆ.

ರಾಮನ ಏಕಪತ್ನಿ ವ್ರತದ ಬಗ್ಗೆ ಸೀತೆಯ ಬಾಯಿಂದ ಆಡಿಸುವ ಮಾತುಗಳು ಮತ್ತಷ್ಟು ಕುತೂಹಲ ಭರಿತವಾಗಿವೆ, ಆ ಮಾತುಗಳು ಈ ಕೆಳಕಂಡಂತಿವೆ, "ಕಾಮಜನ್ಯ ವ್ಯಸನಗಳು ಮೂರು ಸುಳ್ಳು ಹೇಳುವುದು, ಪರಸ್ತ್ರೀಗಮನ, ವೈರಕಾರಣವಿಲ್ಲದೆ ಮಾಡುವ ಹಿಂಸೆ, ಮೊದಲೆರಡು ನಿನ್ನಿಂದ ಸಾಧ್ಯವಿಲ್ಲ". ಅಂದರೆ ಪುರುಷೋತ್ತಮ ರಾಮ ಸುಳ್ಳು ಹೇಳುವುದಿಲ್ಲ, ಪರಸ್ತ್ರೀಯನ್ನು ಮೋಹಿಸುವುದಿಲ್ಲ. ಆದರೆ ಇದೇ ಸೀತೆ ಅಶೋಕವನದಲ್ಲಿ ನುಡಿಯುವ ಮಾತುಗಳು ಈ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿವೆ, "ಹಾ! ರಾಮ ನೀನು ಪಿತೃವಾಕ್ಯವನ್ನು ಪರಿಪಾಲಿಸಿ ಅರಣ್ಯವಾಸದಿಂದ ಹಿಂದುರುಗಿ ಸುಂದರವಾದ ಸ್ತ್ರೀಯರೊಡನೆ ವಿಹರಿಸಬಹುದು. ನಾನಾದರೋ ನಿನ್ನಲ್ಲಿಯೇ ಅನುರಾಗವನ್ನಿಟ್ಟು, ತಪೋನಿಯಮಗಳನ್ನಾಚರಿಸಿ ಪ್ರಾಣವನ್ನು ಬಿಡುತ್ತಿದ್ದೇನೆ". ರಾಮ ಪರಸ್ತ್ರೀಯರೊಂದಿಗೆ ವ್ಯವಹರಿಸಿದನೋ ಇಲ್ಲವೋ, ಆದರೆ ಆತ ಸುಂದರವಾದ

ಪರಸ್ತ್ರೀಯರೊಂದಿಗೆ ವಿಹರಿಸಲು ಅವಕಾಶವಿದೆ ಮತ್ತು ಅದು ಅಪಚಾರವಲ್ಲ, ಮಾನ್ಯ ಎಂಬ ಅಭಿಪ್ರಾಯ ಮೂಡುತ್ತದೆ. ಆದರೆ ಸ್ತ್ರೀ ಏಕಾಂಗಿಯಾಗಿದ್ದರು, ನಿದ್ರಾಹಾರಗಳಿಲ್ಲದೇ ಇದ್ದರೂ, ಕಷ್ಟಗಳಿದ್ದರೂ ನೆರವಿಗಾಗಿ ಪರಪುರುಷನನ್ನು ಅವಲಂಬಿಸುವುದು ನಿಷಿದ್ಧ', ಅದು ಅಪರಾಧ. ತನ್ನ ಪುರುಷನ ಮೇಲೆ ನಿಷ್ಠೆ ಇಟ್ಟುಕೊಂಡು, ಅನುರಾಗವನಿಟ್ಟು, ತಪೋನಿಯಮಗಳನ್ನು ಆಚರಿಸಿ ಪ್ರಾಣಬಿಟ್ಟರೆ ಆಕೆಗೆ ಖಂಡಿತಾ ಮೋಕ್ಷ ಲಭಿಸುತ್ತದೆ ಎಂಬುದೇ ಇದರ ಹಿಂದಿನ ಉದ್ದೇಶ.

ವೈದಿಕ ಚಿಂತನೆಗಳಲ್ಲಿ ನಮಗೆ ತಿಳಿದಂತೆ ಕರ್ಮ ಸಿದ್ಧಾಂತದ ಪ್ರತಿಪಾದನೆ ಕಂಡುಬರುತ್ತದೆ. ಈ ಜನ್ಮದಲ್ಲಿ ಸುಖ ಹೊಂದಬೇಕಾದರೆ, ಶ್ರೇಷ್ಠ ಕುಲದಲ್ಲಿ ಹುಟ್ಟಬೇಕಾದರೆ, ಪುರುಷನಾಗಿ ಜನ್ಮ ಪಡೆಯಬೇಕಾದರೆ ಹಿಂದಿನ ಜನ್ಮದಲ್ಲಿ ಸತ್ಕಾರ್ಯಗಳನ್ನು ಮಾಡಿರಬೇಕು. ಇಲ್ಲದಿದ್ದರೆ ಈ ಜನ್ಮದಲ್ಲಿ ನರಕ ಶತಸಿದ್ಧ. ಇಂತಹ ಮಾತುಗಳನ್ನು ಸೀತೆಯೂ ಆಡುತ್ತಾಳೆ, ದ್ರೌಪದಿಯೂ ಆಡುತ್ತಾಳೆ, ಊರ್ಮಿಳೆಯೂ ಆಡುತ್ತಾಳೆ, ಮಂಡೋದರಿಯೂ ಆಡುತ್ತಾಳೆ. ಎಲ್ಲ ಸ್ತ್ರೀ ಪಾತ್ರಗಳು ಕಡ್ಡಾಯವಾಗಿ ಆಡಲೇಬೇಕಾದ ಮಾತುಗಳು ಇವು." ನನ್ನ ದುರ್ಭಾಗ್ಯದಿಂದ ನನಗೆ ಈ ಕಷ್ಟವೂ ಪ್ರಾಪ್ತವಾಯಿತು, ತನ್ನ ಕರ್ಮದ ಫಲವನ್ನು ತಾನು ಅನುಭವಿಸಬೇಕಲ್ಲವೆ? ಎಂದು ಸೀತೆ ನುಡಿಯುವ ಮಾತುಗಳು ಇದಕ್ಕೆ ಉದಾಹರಣೆಯಾಗಿ ಗಮನಿಸಬಹುದು.

"ಅಯ್ಯೋ ಹಿಂದೆ ಯಾವ ಹಿರಿಯರನ್ನು ಉಪೇಕ್ಷೆ ಮಾಡಿದೆನೋ, ಯಾವ ದೇವರ ಭಕ್ತಿಯಲ್ಲಿ ಕೊರತೆ ಯಾಯಿತೋ, ಗುರು ಬ್ರಾಹ್ಮಣರನ್ನು ನಿಂದಿಸಿದೆನೋ, ಮನಸ್ಸಿನ ಕಳವಳದಲ್ಲಿ ಅವಿವೇಕದಿಂದ ಪಾಪವನ್ನು ನೆನೆದೆನೋ, ಹಿಂದಿನ ಜನ್ಮದ ಕೆಟ್ಟ ಕರ್ಮದ ಫಲವು ಕಣ್ಣಿಗೆ ಕಾಣಿಸಿತೆ? ಎಂದಳು ಸೀತೆ. ಹಿರಿಯರನ್ನು ಉಪೇಕ್ಷೆ ಮಾಡಬಾರದು ಸರಿ. ಅತ್ತೆ ಮಾವಂದಿರ ಸೇವೆ ಮಾಡುವುದೇ ನಿಜವಾದ ಸತೀಧರ್ಮ ಎಂದು ಪರಿಪರಿಯಾಗಿ ಹೇಳಿದ ರಾಮನ ಮಾತನ್ನು ನಿರ್ಲಕ್ಷಿಸಿದ್ದು, ಅತ್ತೆಯಂದಿರು ಹಾಗೂ ಮಾವನನ್ನು ಉಪೇಕ್ಷಿಸಿದ್ದು ತಪ್ಪಲ್ಲವೇ. ಮುಂದಿನ ಜನ್ಮದಲ್ಲೂ ಸೀತೆಗೆ ಕಷ್ಟ ಕಟ್ಟಿಟ್ಟ ಬುತ್ತಿ ಅಲ್ಲವೇ? ನೀವು ಯಾರನ್ನು ಬೇಕಾದರೂ ನಿಂದಿಸಿ, ಶಂಬೂಕನನ್ನು, ತಾಟಕಿಯನ್ನು ಸಂಹಾರ ಮಾಡಿದಂತೆ ಕೊಲೆಮಾಡಿ ಆದರೆ ಬ್ರಾಹ್ಮಣರನ್ನು ಮಾತ್ರ ನಿಂದಿಸಬೇಡಿ. ಆಗ ನಿಮಗೆ ನರಕ ತಪ್ಪಿದ್ದಲ್ಲ. ದೈಹಿಕ ಸ್ವಾತಂತ್ರ್ಯವಂತೂ ಸ್ತ್ರೀಯರಿಗಿಲ್ಲ, ಲೈಂಗಿಕ ಸ್ವಾಂತಂತ್ರ್ಯವಂತೂ ಇಲ್ಲವೇ ಇಲ್ಲ. ಆದರೆ, ಮನಸ್ಸಿನಲ್ಲಿಯೂ ನೀನು ಪಾಪವನ್ನು ನೆನೆಯುವುದು ಅವಿವೇಕ. ರೇಣುಕೆಯು ಅದಕ್ಕಾಗಿ ಮಗನಿಂದ ಸಂಹಾರಕ್ಕೊಳಗಾಗಬೇಕಾಯಿತು. ಸ್ತ್ರೀಯರ ಮನಸ್ಸು ಅವರ ಅಧೀನದಲ್ಲಿರತಕ್ಕದ್ದಲ್ಲ. ಮನಸ್ಸಿನಲ್ಲಿಯೂ ಯಾರನ್ನು ಕಲ್ಪಿಸಿಕೊಳ್ಳುವಂತಿಲ್ಲ. ರಾವಣನ ಸಂಹಾರ ಆದ ಮೇಲೆ ಸೀತೆ ರಾಮನನ್ನು ಭೇಟಿಯಾಗಲು ಬರುತ್ತಾಳೆ. ಆ ಸಂದರ್ಭದಲ್ಲಿ ಮುಖ್ಯವಾಗಿ ಎರಡು ಸಂಗತಿಗಳನ್ನು ಗಮನಿಸಬಹುದು. ಒಂದು, ವಿಭೀಷಣನನ್ನು ಕುರಿತು ಸೀತೆ ಹೇಳುವ ಮಾತುಗಳು, "ಸೀತೆಯು ರಾಕ್ಷಸೇಂದ್ರ (ವಿಭೀಷಣ) ನಾನು ಸ್ನಾನ ಮಾಡದೆ ಈ ಸ್ಥಿತಿಯಲ್ಲಿಯೇ ನನ್ನ ಸ್ವಾಮಿಯನ್ನು

ನೋಡಲಿಚ್ಛಿಸುತ್ತೇನೆ". ಎರಡನೆಯದು, ರಾಮನ ಮಾತುಗಳು, "ರಾವಣನು ಮನೋಹರವಾದ ನಿನ್ನ ಈ ದಿವ್ಯರೂಪವನ್ನು ನೋಡಿ ಅವನ ಗೃಹದಲ್ಲಿಯೇ ನೀನು ಸುತ್ತಾಡಿಕೊಂಡಿರುವಾಗ ಬಹುಕಾಲದವರೆಗೆ ಹೇಗೆ ಸುಮ್ಮನಿದ್ದಾನು?"- ಮುಂದುವರಿದು ಸೀತೆ ಹೇಳುವ ಮಾತುಗಳು; "ನನಗೆ ಅಧೀನವಾದುದು ನನ್ನ ಹೃದಯ." ಈ ಸಂಭಾಷಣೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಂದಿನ ಕಾಲದಲ್ಲೂ ಸ್ತ್ರೀಗಿದ್ದ ಅಭದ್ರತೆಯ ಅರಿವು ನಮಗುಂಟಾಗುತ್ತದೆ. ಮೊದಲ ವಾಕ್ಯದಲ್ಲಿ ಪುರುಷೋತ್ತಮನ ಮೇಲೆ ಧರ್ಮಪತ್ನಿಯಾದ ಸೀತೆಗೆ ನಂಬಿಕೆಯಿಲ್ಲದಿರುವುದು ಕಂಡುಬರುತ್ತದೆ. ದಂಡಕಾರಣ್ಯದಲ್ಲಿ ವಿರಾಧನೆಂಬ ರಾಕ್ಷಸನ ಸ್ಪರ್ಶಕ್ಕೆ ಶ್ರೀರಾಮ ಪ್ರತಿಕ್ರಿಯಿಸಿದ್ದನ್ನು ನಾವು ಗಮನಿಸಿದ್ದೇವೆ. ರಾಮ ಯುದ್ಧದಲ್ಲಿ ಜಯಶೀಲನಾದನೆಂದು ಆತನ ಪತ್ನಿ ಸಂಭ್ರಮವನ್ನು ಪಡುವಂತಿಲ್ಲ. ಆಕೆಯ ದೈಹಿಕ ಸ್ಥಿತಿಯನ್ನು ಆಧರಿಸಿ ಆಕೆಯ ಹಿಂದಿನ ದಿನಗಳನ್ನು ಹೇಗೆ ಕಳೆದಿರಬಹುದೆಂದು ರಾಮ ಊಹಿಸಬಹುದು. ನಾನು ಸ್ನಾನ ಮಾಡಿ ನವ ವಸ್ತ್ರಗಳನ್ನು, ಆಭರಣಗಳನ್ನು ಧರಿಸಿ ರಾಮನೆದುರು ನಿಂತರೆ ರಾಮ ಅನ್ಯತಾ ಭಾವಿಸಬಹುದೆಂದು ಸೀತೆ ಹಾಗೆಯೇ ರಾಮನನ್ನು ನೋಡಲು ಬಯಸುತ್ತಾಳೆ. ಇಷ್ಟಾದರೂ ರಾಮನಾಡುವ ಮಾತು ಆಕೆಯ ಮನಸ್ಸನ್ನು ಛಿದ್ರಗೊಳಿಸುತ್ತದೆ. ಅದರ ಜೊತೆ ಜೊತೆಯಲ್ಲಿ ಯಾವುದೇ ಪುರುಷನು ತನ್ನ ಅಧೀನದಲ್ಲಿರುವ ಸ್ತ್ರೀಯರೊಂದಿಗೆ ಸಂಯಮದಿಂದ ಇರಲು ಸಾಧ್ಯವಿಲ್ಲ. ಅದರಲ್ಲೂ ಮನೋಹರವಾದ ಸೀತೆಯನ್ನು ರಾವಣ ಸ್ಪರ್ಶಿಸದೇ ಇರಲು ಸಾಧ್ಯವೇ. ಆಕೆ ರಾಮನ ಪತ್ನಿಯಾದರೇನು. ವಿಷ್ಣುವಿನ ಮಡದಿಯಾದರೇನು, ಆಕೆ ಸ್ತ್ರೀಯಾದ್ದರಿಂದ ಆಕೆಯನ್ನು ಅನುಭೋಗಿಸುವ ಹಕ್ಕು ಪುರುಷನಿಗಿರುತ್ತದೆ. ಆ ಮಾತುಗಳನ್ನು ಸೀತೆಯ ಹೇಳಿಕೆ ಸಮರ್ಥಿಸುತ್ತದೆ. ಆಕೆಯೂ ಈ ಪುರುಷ ಧರ್ಮವನ್ನು ಒಪ್ಪಿ ನುಡಿಯುತ್ತಾಳೆ, 'ನನಗೆ ಅಧೀನವಾದುದು ನನ್ನ ಹೃದಯ ಮಾತ್ರ, ದೇಹ ನನ್ನ ಅಧೀನದಲ್ಲಿರಲಿಲ್ಲ, ಅದು ಪರಾಧೀನ.'

ನಿರಂತರವಾದ ನೋವು, ದುಃಖ, ಸಂಕಟಗಳು, ನಂಬಿ ನೆಚ್ಚಿದವರಿಂದ ಅವಮಾನಿತಳಾದ ಸೀತೆ ಎಲ್ಲಿ ತನ್ನ ನಿಷ್ಠೆ ಬದಲಿಸಿ ಶೂರ, ಧೀರ, ಸಂಯಮಿ, ಅತಿಯಾಗಿ ಪ್ರೀತಿಸುವ, ಪ್ರೀತಿಗಾಗಿ ತನ್ನ ಸರ್ವನಾಶವನ್ನೂ ಲೆಕ್ಕಿಸದ ರಾವಣನಿಗೆ ಮನಸೋತುಬಿಡುತ್ತಾಳೋ ಎಂದು ಪದೇ ಪದೇ ಪತಿನಿಷ್ಠೆಯ ಪಾಠವನ್ನು ಸೀತೆಗೆ ಹೇಳಿಕೊಡಲಾಗುತ್ತದೆ. ಮೊದಲಿಗೆ, ಅನುಸೂಯದೇವಿ ಸೀತೆಗೆ ಸ್ತ್ರೀಧರ್ಮವನ್ನು ಬೋಧಿಸುತ್ತಾಳೆ. ಸೀತೆಯನ್ನು ಕಾಡಿಗಟ್ಟಿದ ಲಕ್ಷ್ಮಣ ಸೀತೆಗೆ ಉಪದೇಶ ಮಾಡಿ ಪತಿಯೇ ಪರದೈವ ಎಂದು ನೆನಪಿಸುತ್ತಾನೆ, "ಜನಾಪವಾದಕ್ಕೆ ಹೆದರಿ ಹೀಗೆ ಮಾಡಿದ್ದಾನೆಯೇ ಹೊರತು ಬೇರೆಯಲ್ಲ, ಪತಿಧರ್ಮವನ್ನು ಪಾಲಿಸುತ್ತಾ ಶ್ರೀರಾಮನನ್ನು ಹೃದಯದಲ್ಲಿ ಸದಾ ನೆನೆಯುತ್ತಿರು." ಎಂದು ದಶರಥ ಸ್ವರ್ಗದಿಂದ ಧರೆಗಿಳಿದು ಬಂದು ಸೀತೆಯನ್ನು ಸಂತೈಸಿ ನುಡಿಯುತ್ತಾನೆ, ಪತಿ ಶುಶ್ರೂಷೆಯ ವಿಷಯದಲ್ಲಿ ನಿನಗೆ ನಾನು ಹೇಳಬೇಕಾದ್ದೇ ಇಲ್ಲ. ಮುಖ್ಯವಾಗಿ ಒಂದು ಮಾತನ್ನಾಡುವೆನು, ರಾಮನೇ ನಿನಗೆ ಪರದೇವತೆ" ಎಂದೂ ಉಪದೇಶಿಸುತ್ತಾನೆ. ಈ ಹಿಂದೆ ಚರ್ಚಿಸಿದಂತೆ ಮಹಾಕಾವ್ಯಗಳ ಜಗತ್ತು ಸಂಪೂರ್ಣ ಪುರುಷ ಜಗತ್ತಾಗಿದ್ದು,

ಅವರಿಗೆ ಕಾಡುವ ಲೈಂಗಿಕ ಭೀತಿಯಿಂದಾಗಿ ಇಂತಹ ಉಪದೇಶಗಳನ್ನು ಮಹರ್ಷಿಗಳು, ಹಿರಿಯರು, ಪತಿವ್ರತಶಿರೋಮಣಿಯರು ಎಂದು ಬಿರುದು ಪಡೆದವರು ನೀಡುತ್ತಾ ಬಂದಿದ್ದಾರೆ.

ಸೀತೆಯ ಪಾತ್ರದ ಮೂಲಕ ಆಡಿಸುವ ಸ್ತ್ರೀಯರ ಕುಲಶ್ರೇಷ್ಠತೆಗೆ ಸಂಬಂಧಿಸಿದ ಕೆಲವು ಮಾತುಗಳನ್ನು ಇಲ್ಲಿ ಗಮನಿಸೋಣ, "ಉತ್ತಮ ಕುಲದಲ್ಲಿ ಹುಟ್ಟಿ ಉತ್ತಮ ಕುಲಕ್ಕೆ ಸೇರಿದವಳು ನಾನು ಪರಸ್ತ್ರೀಯಾದ್ದರಿಂದ ನಿನಗೆ ಯೋಗ್ಯವಲ್ಲ". "ಹೆಂಗಸರು ಚಪಲರು ಎಂದು ಸ್ತ್ರೀ ಸ್ವಭಾವವೊಂದನ್ನೇ." ಹಾಗೂ "ಸ್ತ್ರೀಯರ ಸಹಜ ಸ್ವಭಾವವನ್ನು ಹೇಳುತ್ತದೆ"– ಎಂದು ಹೇಳುವ ಲಕ್ಷ್ಮಣನ ಮಾತುಗಳು ಇಲ್ಲಿ ಗಮನಾರ್ಹ.

ಸ್ತ್ರೀಯರಿಗೆ ಕೆಲವು ಸ್ವಭಾವಗಳನ್ನು ಆರೋಪಿಸಲಾಗಿದೆ. ಆಕೆ ಹಾಗಿದ್ದರೆ ಸ್ತ್ರೀ, ಇಲ್ಲದಿದ್ದರೆ ಮತ್ತೇನು ಆಗಿಬಿಡುವ ಸಾಧ್ಯತೆಗಳಿರುತ್ತದೆ. ಉತ್ತಮ ಕುಲದವಳು ಪರಪುರಷನ ಸಂಗ ಬಯಸುವಂತಿಲ್ಲ. ನೀಚ ಕುಲದವಳಾದರೆ ಆಗಬಹುದು. ಹೆಂಗಸರು ಚಪಲರು, ಚಂಚಲರು ಎಂಬುದನ್ನು ಸೀತೆಯ ಬಾಯಿಂದಲೇ ಹೇಳಿಸಲಾಗುತ್ತದೆ. ಮಾಯಾ ಸ್ವರ್ಣಜಿಂಕೆಯನ್ನು ಕಂಡ ಸೀತೆ ಅದಕ್ಕೆ ಮನಸೋಲುತ್ತಾಳೆ. ಪುರುಷನಾಗಲಿ, ಸ್ತ್ರೀಯಾಗಲಿ ಆಕರ್ಷಕವಾದುದನ್ನು ಕಂಡು ಇಚ್ಛೆಪಡುವುದು ಸಹಜ. ಆದರೆ ಸ್ತ್ರೀಯರು ಹಾಗೆ ಆಸೆ ಪಡಬಾರದು. ಹಠ ಮಾಡಬಾರದು ಎಂಬುದನ್ನು ಸೀತೆಯ ಬಾಯಿಂದಲೇ ಹೇಳಿಸಲಾಗುತ್ತದೆ. ಆಕೆ ಹೇಳುತ್ತಾಳೆ. "ನನ್ನ ಆಸೆ, ನಾನು ಹೀಗೆ ಸ್ವೇಚ್ಛೆಯಿಂದ ಹಠ ಮಾಡುವುದು ಕ್ರೂರತನವೇನೊ ಹೌದು; ಸ್ತ್ರೀಯರಿಗೆ ಯೋಗ್ಯವೂ ಅಲ್ಲ. ಆದರೂ ಈ ಮೃಗವೂ ನನಗೆ ವಿಸ್ಮಯವನ್ನು ತರಿಸಿದೆ.

ವರ್ಣ ವ್ಯವಸ್ಥೆಯ ಬಗ್ಗೆ ರಾವಣ ತನ್ನ ಮಾತುಗಳಲ್ಲಿ ವ್ಯಕ್ತಪಡಿಸುತ್ತಾನೆ. ಆರ್ಯ ಸ್ತ್ರೀಯಾದ ಸೀತೆ ಸುಂದರನೂ, ಶೂರನು ಆದ ತನ್ನನ್ನು ತಿರಸ್ಕರಿಸಲು ಕಾರಣವೇನಿರಬಹುದೆಂದು ಯೋಚಿಸುತ್ತಾನೆ. ದೇವತೆಗಳ ಸಖ್ಯ ಬಯಸಬಲ್ಲ ಇವರು ನನ್ನನ್ನು ತಿರಸ್ಕರಿಸಲು ನಾನು ಹೀನ ಕುಲದವನೆಂಬ ಭಾವನೆಯೇ ಎಂದು ಆಲೋಚಿಸಿ ಮುಂದಿನಂತೆ ಸೀತೆಗೆ ಹೇಳುತ್ತಾನೆ, "ವರ್ಣ ಸಂಕರದ ಸಂಶಯವನ್ನು ಬಿಟ್ಟು ನಡೆ" ಎಂದು. ಹೀಗೆ ಇಡೀ ರಾಮಾಯಣದಲ್ಲಿ ಸ್ತ್ರೀ ಅನಾದಾರ, ಆರ್ಯ ದ್ರಾವಿಡರ ಸಂಘರ್ಷ ನಮಗೆ ಕಂಡುಬರುತ್ತದೆ. ಒಟ್ಟು ಕಥೆಯ ಹಂದರವನ್ನು ಕೆಲವು ಸ್ಥಾಪಿತ ಮೌಲ್ಯಗಳ ಪ್ರತಿಪಾದನೆಗಾಗಿಯೇ ಹೆಣೆಯಲಾಗಿದೆ ಎಂಬುದು ಗೋಚರವಾಗುತ್ತದೆ. ರಾಮಾಯಣ, ಮಹಾಭಾರತಗಳ ಮರುಸೃಷ್ಟಿಗೆ ಕಾರಣಗಳೇನಿರಬಹುದೆಂದು ಸಿ.ಎನ್.ಆರ್. ಅವರು ಬಹಳ ಸೊಗಸಾಗಿ ಚರ್ಚಿಸಿದ್ದಾರೆ. ಆ ಮಾತುಗಳನ್ನು ಉಲ್ಲೇಖಿಸಿ ಮುಂದಿನ ಅಧ್ಯಾಯದಲ್ಲಿ ಸೀತೆಗಿಂತಲೂ ಹೆಚ್ಚು ನಿರ್ಲಕ್ಷಕ್ಕೆ ಒಳಗಾದ ಊರ್ಮಿಳೆಯ ಬಗ್ಗೆ ಈವರೆಗೆ ನಡೆದ ಅಧ್ಯಯನಗಳ ಹಿನ್ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

"ಈ ವ್ಯಾಖ್ಯಾನಗಳು ಎಷ್ಟೇ ಸ್ವೋಪಜ್ಞವಾಗಿದ್ದರೂ ಇವುಗಳು ರಾಮಾಯಣಗಳ ಸ್ವರೂಪವನ್ನು ಮತ್ತು ಅವುಗಳ ಅಂತಃಸಂಬಂಧವನ್ನು ವಿವರಿಸುತ್ತವೆಯೇ ಹೊರತು ಅವುಗಳ ಕಾರಣವನ್ನು ಎಂದರೆ

ರಾಮಾಯಣ-ಮರುಕಥನಗಳ ಆಳದಲ್ಲಿರುವ ಸಂಕೀರ್ಣ ಒತ್ತಡಗಳನ್ನು ವಿಶ್ಲೇಷಿಸುವುದಿಲ್ಲ. ಆದ್ದರಿಂದ ಯಾವ ಕಾರಣಗಳಿಗಾಗಿ ರಾಮಾಯಣ-ಮಹಾಭಾರತಗಳು ಮತ್ತೆ ಮತ್ತೆ ರೂಪಾಂತರಿಸಲ್ಪಡುತ್ತವೆ ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ಈ ಪ್ರಶ್ನೆಗೆ ಒಂದು ಸಾಧ್ಯ ಉತ್ತರವನ್ನು ಹೀಗೆ ಕೊಡಬಹುದು. ಬಾಲಕಾಂಡ ಮತ್ತು ಉತ್ತರಕಾಂಡಗಳು ಪ್ರಕ್ಷಿಪ್ತ ಭಾಗಗಳೆಂದು ಜಾಕೋಬೊ, ಥಾಪರ್, ಮುಂತಾದ ವಿದ್ವಾಂಸರು ವಾದಿಸುತ್ತಾರೆ. ಇವುಗಳನ್ನು ಹೊರತುಪಡಿಸಿದರೆ ಉಳಿಯುವ ವಾಲ್ಮೀಕಿ ರಾಮಾಯಣವು, ಪ್ರಾಯಃ ಧರ್ಮನಿರಪೇಕ್ಷವಾದ ಮತ್ತು ಮೌಖಿಕ ಪರಂಪರೆಗೆ ಹತ್ತಿರವಿದ್ದ ಕಾವ್ಯವಾಗಿದ್ದಿರಬಹುದು. ಕಾಲಾಂತರದಲ್ಲಿ ಪ್ರಾಯಃ ಪುರಾಣಯುಗದಲ್ಲಿ ಬಾಲಕಾಂಡ ಉತ್ತರಕಾಂಡಗಳು ಸೇರಿಕೊಂಡು ಅವತಾರ ಕಲ್ಪನೆ, ವರ್ಣಾಶ್ರಮ, ಧರ್ಮ, ಪಾತಿವ್ರತ್ಯ ಕಲ್ಪನೆ, ಇತ್ಯಾದಿಗಳಿಂದ ಈ ಕಾವ್ಯಕ್ಕೆ ಒಂದು ವೈದಿಕ ಚೌಕಟ್ಟು ನಿರ್ಮಾಣವಾಯಿತು.

ವೈದಿಕ ವ್ರತಾಚರಣೆಗಳನ್ನು ಮತ್ತು ವಿಶ್ವದೃಷ್ಟಿಯನ್ನು ವಿರೋಧಿಸಿದ ಬೌದ್ಧ-ಜೈನ ಧರ್ಮಗಳು ಭಾರತದಲ್ಲಿ ನೆಲೆಯೂರಿದ ನಂತರ ಆ ಧರ್ಮ/ಪಂಥಗಳಿಗೆ ಸೇರಿದ ಕವಿಗಳು ಒಂದು ಬಗೆಯ ಬಿಕ್ಕಟ್ಟನ್ನು ಎದುರಿಸಬೇಕಾಯಿತು. ಅಂದಿನವರೆಗೂ ವಿದ್ವಜ್ಜನರಿಂದ ಹಾಗೂ ಜನಸಾಮಾನ್ಯರಿಂದ ಅಪಾರ ಮನ್ನಣೆಯನ್ನು ಪಡೆದು ಜನಮನದಲ್ಲಿ ನೆಲೆಸಿದ್ದ ವಾಲ್ಮೀಕಿ ರಾಮಾಯಣವನ್ನು/ ರಾಮಕಥೆಯನ್ನು ಉಪೇಕ್ಷಿಸಲು ಅವರಿಗೆ ಸಾಧ್ಯವಿರಲಿಲ್ಲ. ಆದರೆ, ಆ ರಾಮಕಥೆಯನ್ನೆ ತಮ್ಮ ಕಾವ್ಯವಸ್ತುವಾಗಿ ಆರಿಸಿಕೊಂಡರೆ ವಾಲ್ಮೀಕಿ ರಾಮಾಯಣದ ವೈದಿಕ ಚಿಂತನೆಯನ್ನು ಹಾಗೂ ವೈದಿಕ ವಿಶ್ವದೃಷ್ಟಿಯನ್ನೂ ಒಪ್ಪಿಕೊಳ್ಳಬೇಕಾಗಿತ್ತು. ಈ ಬಿಕ್ಕಟ್ಟಿನಿಂದ ಹೊರಬರಲು ಅವೈದಿಕ ಕವಿಗಳು ಕಂಡುಕೊಂಡ ಮಾರ್ಗವೆಂದರೆ ತಾವು ಒಪ್ಪಿಕೊಂಡ ನೂತನ ವಿಶ್ವದೃಷ್ಟಿಯ ಹಿನ್ನೆಲೆಯಲ್ಲಿಯೇ ವಾಲ್ಮೀಕಿ ರಾಮಾಯಣವನ್ನು ರೂಪಾಂತರಿಸುವ ಮತ್ತು ಮರು ವ್ಯಾಖ್ಯಾನಕ್ಕೆ ಒಳಪಡಿಸುವ ಪ್ರಕ್ರಿಯೆ ನಡೆಯಿತು.[೧೩೧] ಇಂತಹ ಸಾಂಸ್ಕೃತಿಕ ಒತ್ತಡ ಪರಿಣಾಮವಾಗಿ ಮೈಥಿಲೀಶರಣ ಗುಪ್ತರ ಸಾಕೇತ ಹಾಗೂ ಕುವೆಂಪು ಅವರ 'ರಾಮಾಯಣ ದರ್ಶನಂ' ರಚನೆಗೊಂಡವು.

**ಟಿಪ್ಪಣಿಗಳು**

೧. A.K. Ramanujan, 'Three hundred Ramayanas; Five Example and three thoughts on translation, in Vinay Dharwarkar, ed. The collected essays of A.K. Ramanujan (New Delhi: Oop 199) PP. 133-134.

೨. ಡಾ. ಸಿ.ಎನ್. ರಾಮಚಂದ್ರನ್, ಮೌಖಿಕ ರಾಮಾಯಣ ಮಹಾಭಾರತಗಳು- ತೌಲನಿಕ ಅಧ್ಯಯನ, ಹೊನ್ನಾರು ಮಾಲೆ, ರಕ್ತಿ-ರೂಪಣೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪುಟ-೧೪೮-೧೫೦.

೩. ಅದೇ, ಪುಟ-೧೭೧.

೪. John D. Smith, 'Scapegoats of the Gods, The Ideology of the Indian Epics, in Ed. Stuat Blackburn, et al Oral Epics in India (Berkeley, LA; University of Cal. Press, 1989) PP 188-189.

೫. ಎಸ್.ವಿ. ಪರಮೇಶ್ವರ ಭಟ್, ಅದ್ಭುತ ರಾಮಾಯಣ, ಪೀಠಿಕೆ.

೬. ಡಾ. ಎ.ಕೆ. ರಾಮಾನುಜನ್, ಮುನ್ನೂರು ರಾಮಾಯಣಗಳು, ಕನ್ನಡಾನುವಾದ- ಡಾ. ಮಹಾಬಲೇಶ್ವರ ರಾವ್, ಕರ್ನಾಟಕ ಸಂಶೋಧನಾ ಜಾನಪದ, ಸಂ. ಪ್ರೊ. ಎ.ವಿ. ನಾವಡ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ೨೦೧೪, ಪುಟ-೬೦೪.

೭. ದೇವೀ ಭಾಗವತ, ರಾಮಾಯಣ, ಉತ್ತರಕಾಂಡ.

೮. ಆನಂದರಾಮಾಯಣ.

೯. ಅದೇ

೧೦. ಅದೇ

೧೧. ದೇವೀ ಭಾಗವತ

೧೨. ಆನಂದ ರಾಮಾಯಣ.

೧೩. ರಾಮಾಯಣ.

೧೪. ರಾಮಾಯಣ, ಅರಣ್ಯ ಪರ್ವ.

೧೫. ಆಧ್ಯಾತ್ಮ ರಾಮಾಯಣ, ಅರಣ್ಯ ಪರ್ವ.

೧೬. ರಾಮಾಯಣ, ಕಿಷ್ಕಿಂಧಾ ಕಾಂಡ.

೧೭. ಅದೇ.

೧೮. ರಾಮಾಯಣ, ಉತ್ತರ ಕಾಂಡ.

೧೯. ತೈತ್ತೀರಿಯ ಬ್ರಾಹ್ಮಣ, ಕೃಷ್ಣಯಜುರ್ವೇದ ೨, ೩, ೧೦.

೨೦. ರಾಮಾಯಣ ಮಂಜರಿ, ಕ್ಷೇಮೇಂದ್ರ ವಿರಚಿತ.

೨೧. ಆನಂದ ರಾಮಾಯಣ.

೨೨. ಅದೇ.

೨೩. ಅದೇ.

೨೪. ಅದ್ಭುತ ರಾಮಾಯಣ.

೨೫. ಪದ್ಮಪುರಾಣ, ಆನಂದ ರಾಮಾಯಣ.

೨೬. ಆನಂದ ರಾಮಾಯಣ.

೨೭. ಡಾ. ಸಿ.ಎನ್. ರಾಮಚಂದ್ರನ್, ಮೌಖಿಕ ರಾಮಾಯಣ ಮಹಾಭಾರತಗಳು- ತೌಲನಿಕ ಅಧ್ಯಯನ, ಹೊನ್ನಾರು ಮಾಲೆ, ರಕ್ತಿ-ರೂಪಣೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪುಟ-೧೭೭.

೨೮. ವಾಲ್ಮೀಕಿ ರಾಮಾಯಣಮ್, ಸಂ. ೧, ಬಾಲಕಾಂಡ, ಸರ್ಗ-೬೯.

೨೯. ಪರಾಕ್ರಮವೇ ಅವಳ ಮೌಲ್ಯ, ಗೊತ್ತಾದ ಪರಾಕ್ರಮವನ್ನು ತೋರಿಸಿದವನು ಅವಳನ್ನು ಮದುವೆಯಾಗಬಹುದು.

೩೦. ಶ್ರೀಮದ್ವಾಲ್ಮೀಕಿ ರಾಮಾಯಣಮ್, ಭಾಗ-೨, ಸರ್ಗ-೨೭, ೧-೨೩.

೩೧. ಅದೇ, ಸರ್ಗ-೧೯, ಶ್ಲೋ: ೧೪.

೩೨. ಅದೇ, ಸರ್ಗ-೨೯, ಶ್ಲೋ: ೨೩.

೩೩. ಅದೇ, ಸರ್ಗ-೩೦, ಶ್ಲೋ: ೩-೪.

೩೪. ಅದೇ, ಸರ್ಗ-೩೦, ಶ್ಲೋ: ೧೯-೨೦.

೩೫. ಅದೇ, ಸರ್ಗ-೩೦, ಶ್ಲೋ: ೨೮-೨೯.

೩೬. ಅದೇ, ಸರ್ಗ-೩೧, ಶ್ಲೋ: ೭-೧೦.

೩೭. ಅದೇ, ಸರ್ಗ-೧೧೭, ಶ್ಲೋ: ೨೮.

೩೮. ಅದೇ, ಸರ್ಗ-೩, ಸರ್ಗ-೨, ಶ್ಲೋ: ೧೪-೨೧.

೩೯. ಅದೇ, ಸರ್ಗ-೯, ಶ್ಲೋ: ೨-೨೩.

೪೦. ಅದೇ, ಸರ್ಗ, ಶ್ಲೋ: ೧೯-೨೦.

೪೧. ಅದೇ, ಸರ್ಗ, ಶ್ಲೋ: ೧-೪.

೪೨. ಅದೇ, ಸರ್ಗ-೧೩, ಶ್ಲೋ: ೬-೭.

೪೩. ಅದೇ, ಸರ್ಗ-೪೫, ಶ್ಲೋ: ೫-೯.

೪೪. ಅದೇ, ಸರ್ಗ–೪೭, ಶ್ಲೋ: ೧–೨.

೪೫. ಅದೇ, ಸರ್ಗ–೪೯, ಶ್ಲೋ: ೨೦–೨೧.

೪೬. ಅದೇ, ಸರ್ಗ, ಶ್ಲೋ: ೩೮–೪೧.

೪೭. ಅದೇ, ಸರ್ಗ–೫೧.

೪೮. ಅದೇ, ಸರ್ಗ–೫೪, ಶ್ಲೋ: ೧೦–೧೭.

೪೯. ಶ್ರೀಮದ್ವಾಲ್ಮೀಕಿ ರಾಮಾಯಣಮ್, ಸಂ. ೫, ಸುಂದರಕಾಂಡ, ಸರ್ಗ–೨೨, ಶ್ಲೋ: ೭–೯.

೫೦. ಅದೇ, ಶ್ಲೋ: ೧೪–೨೨.

೫೧. ಅದೇ, ಶ್ಲೋ: ೩೦–೩೮.

೫೨. ಅದೇ, ಸರ್ಗ–೨೫, ಶ್ಲೋ: ೧೦–೨೦.

೫೩. ಅದೇ, ಸರ್ಗ–೨೬, ಶ್ಲೋ: ೩೪–೪೦.

೫೪. ಅದೇ, ಸರ್ಗ–೨೮, ಶ್ಲೋ: ೯–೧೦.

೫೫. ಅದೇ, ಸರ್ಗ, ಶ್ಲೋ: ೧೫–೧೬.

೫೬. ಅದೇ, ಸರ್ಗ–೨೪, ಶ್ಲೋ: ೦೫–೦೬.

೫೭. ಅದೇ, ಸರ್ಗ–೩೪, ಶ್ಲೋ: ೯–೧೦.

೫೮. ಅದೇ, ಸರ್ಗ–೩೮, ಶ್ಲೋ: ೧೦.

೫೯. ಅದೇ, ಸರ್ಗ–೪೦, ಶ್ಲೋ: ೧–೨.

೬೦. ಶ್ರೀಮದ್ವಾಲ್ಮೀಕಿ ರಾಮಾಯಣಮ್, ಯುದ್ಧಕಾಂಡ, ಸಂ. ೬, ಪೂರ್ವಾರ್ಧ, ಸರ್ಗ–೩೨, ಶ್ಲೋ: ೩೧–೩೩.

೬೧. ಇವಳು ವಿಭೀಷಣನ ಹೆಂಡತಿ, ಸೀತೆಯ ದುಃಖದಿಂದ ಪ್ರಾಣತ್ಯಾಗ ಮಾಡಿಕೊಳ್ಳದಂತೆ ನೋಡಿಕೊಂಡು ಅವಳನ್ನು ಸಂತೈಸುತ್ತಿರಬೇಕೆಂದು ಮೇಲ್ವಿಚಾರಣೆಗಾಗಿ ರಾವಣನು ಸರಮೆಯನ್ನು ನೇಮಿಸಿದ್ದನು, ರಾವಣ ವಿಭೀಷಣರಿಗೆ ವಿರೋಧವುಂಟಾದ ಮೇಲೆ, ಸರಮೆಯು ರಾವಣನಿಗೆ ಅಂಜುತ್ತಲೇ ತನ್ನ ಕೆಲಸವನ್ನು ನಿರ್ವಹಿಸುತ್ತಿದ್ದಳು.

೬೨. ಶ್ರೀಮದ್ವಾಲ್ಮೀಕಿ ರಾಮಾಯಣಮ್, ಸಂ. ೬, ಸರ್ಗ–೩೪, ಶ್ಲೋ: ೨–೩.

೬೩. ಅದೇ, ಶ್ಲೋ: ೬–೭.

೬೪. ಅದೇ, ಶ್ಲೋ: ೨೪–೨೫.

೬೫. ಅದೇ, ಸರ್ಗ–೪೭, ಶ್ಲೋ: ೪–೧೦.

೬೬. ಶ್ರೀಮದ್ವಾಲ್ಮೀಕಿರಾಮಾಯಣ್, ಸಂ. ೭, ಉತ್ತರಾರ್ಧ, ಸರ್ಗ–೮೧, ಶ್ಲೋ: ೧೪–೧೭.

೬೭. ಅದೇ, ಸರ್ಗ, ಶ್ಲೋ: ೨೬-೩೩.

೬೮. ಅದೇ, ಸರ್ಗ-೯೩, ಶ್ಲೋ: ೩೬-೩೭.

೬೯. ಅದೇ, ಶ್ಲೋ: ೪೯-೫೫.

೭೦. ಅದೇ, ಶ್ಲೋ: ೫೯.

೭೧. ಅದೇ, ಸರ್ಗ-೧೧೬, ಶ್ಲೋ: ೨೯-೫೫.

೭೨. ಅದೇ, ಸರ್ಗ-೧೧೭, ಶ್ಲೋ: ೫-೧೩.

೭೩. ಅದೇ, ಶ್ಲೋ: ೨೮-೨೯.

೭೪. ಅದೇ, ಶ್ಲೋ: ೩೨.

೭೫. ಅದೇ, ಸರ್ಗ-೧೧೮, ಶ್ಲೋ: ೧-೪.

೭೬. ಅದೇ, ಸರ್ಗ-೧೧೮, ಶ್ಲೋ: ೧೧-೨೫.

೭೭. ಅದೇ, ಸರ್ಗ-೧೧೯, ಶ್ಲೋ: ೫.

೭೮. ಅದೇ, ಶ್ಲೋ: ೮-೯.

೭೯. ಅದೇ, ಶ್ಲೋ: ೧೮-೧೯.

೮೦. ಅದೇ, ಸರ್ಗ-೧೨೧, ಶ್ಲೋ: ೫-೧೦.

೮೧. ಅದೇ, ಶ್ಲೋ: ೩೪-೩೫.

೮೨. ಶ್ರೀಮದ್ವಾಲ್ಮೀಕಿ ರಾಮಾಯಣಮ್, ಸಂ-೮, ಉತ್ತರಕಾಂಡ, ಸರ್ಗ-೪೨, ಶ್ಲೋ: ೩೨-೩೩.

೮೩. ಅದೇ, ಸರ್ಗ-೪೬, ಶ್ಲೋ: ೬-೯.

೮೪. ಅದೇ, ಸರ್ಗ-೪೭, ಶ್ಲೋ: ೩-೧೮.

೮೫. ಅದೇ, ಸರ್ಗ-೪೮, ಶ್ಲೋ: ೩.

೮೬. ಅದೇ, ಶ್ಲೋ: ೭-೯.

೮೭. ಅದೇ, ಶ್ಲೋ: ೧೨-೧೮.

೮೮. ಅದೇ, ಸರ್ಗ-೪೯, ಶ್ಲೋ: ೧೧-೨೪.

೮೯. ಅದೇ, ಸರ್ಗ-೯೫, ಶ್ಲೋ: ೩-೪.

೯೦. ಅದೇ, ಸರ್ಗ-೯೬, ಶ್ಲೋ: ೧೬-೨೪.

೯೧. ಅದೇ, ಸರ್ಗ-೯೭, ಶ್ಲೋ: ೧-೯.

೯೨. ಅದೇ, ಶ್ಲೋ: ೧೪.

೯೩. ಅದೇ, ಶ್ಲೋ: ೧೫-೧೭.

೯೪. ಅದೇ, ಶ್ಲೋ: ೨೦.

೯೫. ಅದೇ, ಸರ್ಗ-೯೮, ಶ್ಲೋ: ೪-೧೦.

೯೬. ಅದೇ, ಶ್ಲೋ: ೧೨-೧೫.

೯೭. ಅದೇ, ಸರ್ಗ-೯೯, ಶ್ಲೋ: ೫-೮.

೯೮. ರಾಮಚಂದ್ರ ಪುರಾಣ, ಆಶ್ವಾಸ: ೯, ಪ: ೧೬೫.

೯೯. ಅದೇ, ಆಶ್ವಾಸ: ೯, ಪುಟ-೧೬೯.

೧೦೦. ಶ್ರೀ ರಾಮಚರಿತ ಮಾನಸ, ಬಾಲಕಾಂಡ, ೨೩೧, ಚೌ: ೧-೪.

೧೦೧. ಅದೇ ಬಾಲಕಾಂಡ, ದೋ. ೩೦೬.

೧೦೨. ಅದೇ, ಅಯೋಧ್ಯಾಕಾಂಡ, ದೋ. ೬೫.

೧೦೩. ಅದೇ, ದೋ: ೬೭.

೧೦೪. ಅದೇ, ಅರಣ್ಯಕಾಂಡ: ದೋ: ೨೮.

೧೦೫. ಅದೇ, ದೋ: ೨೯ (೩), ೫.

೧೦೬. ಅದೇ, ದೋ: ೧೧, ಚೌ: ೧-೬.

೧೦೭. ಅದೇ, ಲಂಕಾಕಾಂಡ, ಛಂದ, ಪುಟ-೬೦೯.

೧೦೮. ಅದೇ, ದೋ: ೧೦೭.

೧೦೯. ಅದೇ, ದೋ: ೧೦೮.

೧೧೦. ಅದೇ, ದೋ: ೧೦೮, ಚೌ: ೧-೪.

೧೧೧. ಅದೇ, ದೋ: ೧೦೮, ಛಂದ.

೧೧೨. ಸಾಕೇತ ಕಾವ್ಯದಿಂದ ಆಯ್ದುಕೊಳ್ಳಲಾಗಿದೆ.

೧೧೩. ತೊರವೆ ರಾಮಾಯಣ, ಬಾಲಕಾಂಡ, ಸಂಧಿ: ೧೪, ಪದ್ಯ-೧೧.

೧೧೪. ಅದೇ, ಅರಣ್ಯಕಾಂಡ, ಸಂಧಿ: ೯, ಪದ್ಯ-೨.

೧೧೫. ಅದೇ, ಪದ್ಯ: ೫.

೧೧೬. ಅದೇ, ಪದ್ಯ: ೯-೧೧.

೧೧೭. ಅದೇ, ಪದ್ಯ: ೧೭.

೧೧೮. ಅದೇ, ಪದ್ಯ: ೨೦.

೧೧೯. ಅದೇ, ಪದ್ಯ: ೨೧-೨೮.

೧೨೦. ಅದೇ, ಪದ್ಯ: ೪೧-೪೨.

೧೨೧. ಅದೇ, ಸುಂದರಕಾಂಡ, ಸಂಧಿ: ೩, ಪದ್ಯ: ೫೨,

೧೨೨. ಅದೇ, ಪದ್ಯ: ೫೩-೫೭.

೧೨೩. ಅದೇ, ಪದ್ಯ: ೬೪.

೧೨೪. ಅದೇ, ಪದ್ಯ: ೯೬.

೧೨೫. ಅದೇ, ಪದ್ಯ: ೧೦೦-೧೦೧.

೧೨೬. ಡಾ. ಸಿ.ಎನ್. ರಾಮಚಂದ್ರನ್, ರಕ್ತಿ-ರೂಪಿಣೆ, ಹೊನ್ನಾರು ಮಾಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೭೩.

೧೨೭. ಶ್ರೀ ರಾಜವಾಡೆ. ವಿಕೆ. ಕನ್ನಡ ಅನುವಾದ: ೧೯೯೩, ದ್ರೌಪದೀ ಸಮೀಕ್ಷೆ, ಪುಟ, ೨೮, ೨೯, ಡಾ. ಮಣಿಮಾಲಿನಿ. ವಿ.ಕೆ.

೧೨೮. ಡಾ. ವಿಜಯದಬ್ಬೆ, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ೧೯೯೩, ಪುಟ-೬೫.

೧೨೯. ಶ್ರೀಮತಿ ಎಚ್.ಎಸ್., ಹೆಣ್ಣು-ಹೆಂಗಸು, ಬ್ಯಾಲದಕೆರೆ ಪ್ರಕಾಶನ, ಮಂಡ್ಯ, ೨೦೦೪, ಪುಟ-೬೪.

೧೩೦. ಡಾ. ಮಣಿಮಾಲಿನಿ., ವಿ.ಕೆ, ದ್ರೌಪದೀ ಸಮೀಕ್ಷೆ, ಪುಟ-೨.

೧೩೧. ವಿಮುಕ್ತ, ಅಭಿನವ ಚಾತುರ್ಮಾಸಿಕ, ಅನು: ಜಿ. ವೀರಭದ್ರಗೌಡ, ಓಲ್ಗಾ ಕಥಾ ಜಗತ್ತಿನ ಜೊತೆಗೊಂದು ಮಾತುಕಥೆ, ಸಂಪುಟ-೧೮, ಸಂಚಿಕೆ: ೨, ೩, ಮೇ, ಸೆಪ್ಟಂಬರ್-೨೦೧೧, ಪು.೨.

೧೩೨. ಡಾ. ಸಿ.ಎನ್. ರಾಮಚಂದ್ರನ್, ರಕ್ತಿ-ರೂಪಣೆ, ಹೊನ್ನಾರು ಮಾಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೬೭.

## ಅಧ್ಯಾಯ-೪

## ಊರ್ಮಿಳಾ

ರಾಮಾಯಣ ಕಾವ್ಯದಲ್ಲಿ ರಾಮನಷ್ಟೇ ಪ್ರಧಾನ ಪಾತ್ರವಾಗಿ ಲಕ್ಷ್ಮಣನಿದ್ದಾನೆ. ಇವರಿಬ್ಬರ ಜೋಡಿಯಿರುವಂತೆ ಸೀತೆ ಮತ್ತು ಊರ್ಮಿಳೆಯರ ಪಾತ್ರಗಳಿಲ್ಲ. ಇಲ್ಲಿ ಸೀತೆ ಮಾತ್ರ ಪ್ರಧಾನವಾಗಿ ಊರ್ಮಿಳೆ ನಗಣ್ಯಳಾಗುತ್ತಾಳೆ. ಪ್ರಸ್ತುತ ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವ ಕೃತಿಗಳಲ್ಲಿ ಊರ್ಮಿಳೆಯನ್ನು ಕ್ರೋಢೀಕರಿಸುವ ಪ್ರಯತ್ನ ಮಾಡುತ್ತಾ ಅದಕ್ಕೆ ಇರಬಹುದಾದ ಕಾರಣಗಳನ್ನು ಗುರುತಿಸಲಾಗಿದೆ ಹಾಗೂ ಆ ಪಾತ್ರಕ್ಕೆ ನ್ಯಾಯ ಒದಗಿಸುವಲ್ಲಿ ಆಗಿರುವ ಪ್ರಾಮಾಣಿಕ ಪ್ರಯತ್ನಗಳನ್ನು ಗಮನಿಸಲಾಗಿದೆ ಹಾಗೂ ಅಂತಹ ನಿರ್ಲಕ್ಷಕ್ಕೆ ಅಂದಿನ ಸಂದರ್ಭದಲ್ಲಿ ಇರಬಹುದಾದ ಕಾರಣಗಳೇನು ಎಂದು ವಿಶ್ಲೇಷಣೆ ಮಾಡಲಾಗಿದೆ.

### ೪.೧ ವಾಲ್ಮೀಕಿ ರಾಮಾಯಣದಲ್ಲಿ ಊರ್ಮಿಳೆಯ ಪಾತ್ರದ ನಿರ್ವಚನ

ವಾಲ್ಮೀಕಿ ರಾಮಾಯಣದಲ್ಲಿ ಜನಕ ಮಹಾರಾಜ ವಿಶ್ವಾಮಿತ್ರರ ಸಂಭಾಷಣೆಯಲ್ಲಿ ಧನಸ್ಸನ್ನು ಮುರಿದ ಶ್ರೀರಾಮನಿಗೆ ಸೀತೆಯನ್ನು, ಲಕ್ಷ್ಮಣನಿಗೆ ಊರ್ಮಿಳೆಯನ್ನು ವಿವಾಹ ಮಾಡಿಕೊಡುವುದಾಗಿ ಹೇಳುತ್ತಾನೆ.

ಈಗ ನಾನು ಸಂತೋಷದಿಂದ ನನ್ನ ಪುತ್ರಿಯರಲ್ಲಿ ಸೀತೆಯನ್ನು ಶ್ರೀರಾಮನಿಗೂ ಊರ್ಮಿಳೆಯನ್ನು ಲಕ್ಷ್ಮಣನಿಗೂ ವಿವಾಹಮಾಡಿಕೊಡುತ್ತೇನೆ. ಮಹಾರಾಜ - ದಶರಥ, ನನ್ನ ಮಗಳಾದ ಸೀತೆ ಸಾಕ್ಷಾತ್ ದೇವತೆಯಂತಿದ್ದಾಳೆ. ಅವಳು ವೀರ್ಯಶುಲ್ಕಳು, ಅವಳನ್ನು ರಾಮನಿಗೂ ಎರಡನೆಯ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ ವಿವಾಹಮಾಡಿಕೊಡುತ್ತೇನೆ-ಕೊಡುತ್ತೇನೆ-ಕೊಡುತ್ತೇನೆ. ಸಂದೇಹವಿಲ್ಲ ಎನ್ನುತ್ತಾನೆ.

ಈ ಎರಡು ವಂಶದವರಿಗೂ ವಿವಾಹ ಸಂಬಂಧವು ಪರಸ್ಪರ ಯೋಗ್ಯವಾಗಿದೆ. ರಾಮನಿಗೆ ಸೀತೆಯೂ ಲಕ್ಷ್ಮಣನಿಗೆ ಊರ್ಮಿಳೆಯೂ ಅನುರೂಪವಾಗಿದ್ದಾರೆ.

ಜನಕರಾಜನು ಆನಂದದಲ್ಲಿ ಮುಳುಗಿದನು. ಹೀಗೆ ಸುತೆಯಾದ ಸೀತೆಯನ್ನು ಮಂತ್ರೋದಕಪೂರ್ವಕವಾಗಿ ಪಾಣಿಗ್ರಹಣ ಮಾಡಿಸಿ. "ಲಕ್ಷ್ಮಣ, ಇತ್ತ ಬಾ, ನಿನಗೆ ಮಂಗಳವಾಗಲಿ; ನಾನು ಕೊಟ್ಟಿರುವ ಊರ್ಮಿಳೆಯನ್ನು ಸ್ವೀಕರಿಸು, ಇವಳ ಪಾಣಿಯನ್ನು ಗ್ರಹಣ ಮಾಡು. ಕಾಲಾತಿಕ್ರಮಣವಾದೀತು" ಎಂದನು.

## ೪.೨ ಶ್ರೀರಾಮ ಚರಿತ ಮಾನಸದಲ್ಲಿ ಊರ್ಮಿಳೆಯ ಪಾತ್ರದ ನಿರ್ವಚನ

ತುಳಸೀ ರಾಮಾಯಣದಲ್ಲಿ ಲಕ್ಷ್ಮಣನು ರಾಮನ ಜೊತೆಯೇ ಕಾಡಿಗೆ ಹೋಗುವುದಕ್ಕಾಗಿ ಅವನನ್ನು ಕೇಳಿಕೊಳ್ಳುತ್ತಾನೆ. ತಮ್ಮನ ಕೋಮಲವೂ, ವಿನಯಪೂರ್ಣವೂ ಆದ ಮಾತುಗಳಿಗೆ ಒಪ್ಪಿದ ರಾಮನು 'ತಮ್ಮಾ, ಹೋಗಿ ನಿನ್ನ ತಾಯಿಯ ಅನುಮತಿ ಪಡೆದುಕೊಂಡು ಬಾ' ಎಂದು ಹೇಳಿಕಳುಹಿಸುತ್ತಾನೆ. ಸುಮಿತ್ರೆಯು ಲಕ್ಷ್ಮಣನಿಂದ ನಡೆದ ವಿಷಯವನ್ನು ತಿಳಿದು ಹಲುಬಿದರೂ ಲಕ್ಷ್ಮಣನಿಗೆ ಹೇಳುತ್ತಾಳೆ. ಮಗು, ಜಾನಕಿ ನಿನಗೆ ತಾಯಿ. ಎಲ್ಲ ರೀತಿಯಿಂದ ಸ್ನೇಹ ತೋರುವ ರಾಮನೇ ನಿನ್ನ ತಂದೆ, ರಾಮನಿದ್ದೆಡೆಯೇ ಅಯೋಧ್ಯೆ. ಸೂರ್ಯನ ಬೆಳಕಿದ್ದಲ್ಲಿಯೇ ಹಗಲಲ್ಲವೇ? ನಿಜಕ್ಕೂ ಸೀತಾರಾಮರು ಕಾಡಿಗೆ ಹೋಗುವುದಾದರೆ ಅಯೋಧ್ಯೆಯಲ್ಲಿ ನಿನಗೇನು ಕೆಲಸವಿಲ್ಲ. ಗುರುಹಿರಿಯರು, ತಂದೆತಾಯಿಗಳು, ಅಣ್ಣ, ದೇವರು, ದಣಿ ಇವರ ಸೇವೆಯನ್ನು ಪ್ರಾಣಕ್ಕೆ ಸಮಾನವಾಗಿ ತಿಳಿದು ಮಾಡಬೇಕು. ಇನ್ನು ರಾಮನಂತೂ ನಿನಗೆ ಪ್ರಾಣಕ್ಕಿಂತಲೂ ಪ್ರಿಯ. ಹೃದಯಜೀವನ ಮತ್ತು ಎಲ್ಲರ ನಿಃಸ್ವಾರ್ಥ ಸಖ. ಜಗತ್ತಿನಲ್ಲಿ ರಾಮನ ಕಾರಣದಿಂದಲೇ ಜನ ಪೂಜನೀಯರು, ಪ್ರಿಯರು ಎಂದು ಭಾವಿಸಬೇಕು. ಈ ರೀತಿ ತಿಳಿದು, ಮಗು! ಅವರ ಜೊತೆ ಕಾಡಿಗೆ ಹೋಗು. ಈ ಜಗತ್ತಿನಲ್ಲಿ ಹುಟ್ಟಿದ್ದನ್ನು ಸಾರ್ಥಕಪಡಿಸಿಕೋ, ಕಾಡಿನಲ್ಲಿ ನಿನ್ನ ಸೇವೆಯಿಂದ ಸೀತಾರಾಮರಿಗೆ ಸುಖವಾಗಲಿ ತಂದೆತಾಯಿ, ಪ್ರಿಯಜನರು, ಸಂಸಾರ ಹಾಗೂ ಊರ ಸುಖವನ್ನು ಅವರು ಮರೆಯುವಂತಾಗಲಿ' ಎಂದು ಬುದ್ಧಿ ಹೇಳಿ ಸ್ವಯಂ ಲಕ್ಷ್ಮಣನಿಗೆ ಕಾಡಿಗೆ ಹೋಗು ಎನ್ನುತ್ತಾಳೆ. ಲಕ್ಷ್ಮಣ ಬೇರೇನಾದರೂ ವಿಘ್ನ ಬಂದೀತೆಂದು ಹೆದರಿ ಬಲೆಯಿಂದ ತಪ್ಪಿಸಿಕೊಂಡು ಹೋದ ಜಿಂಕೆಯಂತೆ ಹೊರಟುಹೋಗುತ್ತಾನೆ.

ಸೀತೆಯೊಡನೆ ನಡೆಸಿದ ಸಂಭಾಷಣೆಯನ್ನು ಕೇಳುತ್ತಿರುವ ಲಕ್ಷ್ಮಣನ ಬಗ್ಗೆ ಚಿತ್ರಣವಿದೆ. ಸೀತೆಯ ಪ್ರಾರ್ಥನೆಗೆ ಕರಗಿದ ರಾಮನು ಸೀತೆಯ ಜೊತೆಯಲ್ಲಿ ಕರೆದೊಯ್ಯಲು ಒಪ್ಪುತ್ತಾನೆ. ಪ್ರಯಾಣಕ್ಕೆ ಸಿದ್ಧಳಾಗು ಎಂದೂ ಹೇಳುತ್ತಾನೆ. ಎಲ್ಲವನ್ನೂ ಕೇಳುತ್ತ ನಿಂತಿದ್ದ ಲಕ್ಷ್ಮಣನು ಮರದ ಬುಡದಲ್ಲಿ ನೆರಳು ಬೀಳುವಂತೆ ರಾಮನ ಪಾದಗಳ ಮೇಲೆ ಬಿದ್ದು ತನ್ನನ್ನೂ ಅರಣ್ಯಕ್ಕೆ ಕರೆದೊಯ್ಯಬೇಕೆಂದು ಪ್ರಾರ್ಥಿಸುತ್ತಾನೆ. ರಾಮನು ಅಸ್ತು ಎನ್ನುವವರೆಗೂ ಮೇಲೇಳಲಿಲ್ಲ.

ಮೇಲಿನ ಎರಡೂ ರಾಮಾಯಣಗಳಿಗಿಂತ ಮೂಲ ರಾಮಾಯಣದಲ್ಲಿ ಈ ಭಾಗವು ಭಿನ್ನವಾಗಿದೆ. ಊರ್ಮಿಳೆಯ ಪ್ರಸ್ತಾಪವನ್ನು ವಿವಾಹದ ಸಂದರ್ಭದಲ್ಲಾಗಲೀ, ವನವಾಸಕ್ಕೆ ಹೊರಡುವ ಸಂದರ್ಭದಲ್ಲಾಗಲೀ, ನಂತರವಾಗಲಿ ಎಲ್ಲಿಯೂ ಮಾತನಾಡುವುದಿಲ್ಲವೆಂಬುದು ಸೋಜಿಗವೆನಿಸಿದರೂ ಸತ್ಯ.

## ೪.೩ ಸಾಕೇತ ರಾಮಾಯಣದಲ್ಲಿ ಊರ್ಮಿಳೆಯ ಪಾತ್ರದ ನಿರ್ವಚನ

ಸಾಕೇತದಲ್ಲಿ ಊರ್ಮಿಳೆಯ ಪ್ರವೇಶ ಮಿಥಿಲೆಯಲ್ಲಿ ಸೀತಾಸ್ವಯಂವರದ ಹಿಂದಿನ ದಿನ ಪುಷ್ಪವಾಟಿಕೆಯಲ್ಲಾಗುತ್ತದೆ. ಊರ್ಮಿಳೆ ಸೀತೆಯ ಸಹೋದರಿ. ಅಂದು ಸೀತೆ ಮತ್ತು ಊರ್ಮಿಳೆಯರಿಬ್ಬರೂ ಗಿರಿಜೆಯ ಪೂಜೆಗಾಗಿ ಬಂದಿರುತ್ತಾರೆ. ಇದೇ ರಾಜೋದ್ಯಾನದಲ್ಲಿ ವಿಶ್ವಾಮಿತ್ರ ಋಷಿಗಳಿಗೆ ಪೂಜೆಗಾಗಿ ಹೂವುಗಳನ್ನು ತೆಗೆದುಕೊಂಡು ಹೋಗಲು ರಾಮಲಕ್ಷ್ಮಣರು ಬಂದಿರುತ್ತಾರೆ. ಈ ಸಂದರ್ಭದಲ್ಲಿ ಊರ್ಮಿಳೆಯು ಲಕ್ಷ್ಮಣನನ್ನು ನೋಡಿ ಆಕರ್ಷಿತಳಾಗುತ್ತಾಳೆ. ವಿರಹದಿಂದ ನಿದ್ದೆಬಾರದೆ ಬಸವಳಿದ ಊರ್ಮಿಳೆಗೆ ಜೋಂಪು ಹತ್ತಿದಾಗ ಕನಸಿನಲ್ಲಿ ಊರ್ಮಿಳೆ ಲಕ್ಷ್ಮಣರು ಭೇಟಿಯಾಗಿ ಮಾತನಾಡುವ ಸನ್ನಿವೇಶವನ್ನು ಕವಿ ಸೃಷ್ಟಿಸುತ್ತಾನೆ.

ಸಾಕೇತದ ಊರ್ಮಿಳೆಯ ಪ್ರಥಮ ದರ್ಶನವಾಗುವುದು ಒಂದು ಸೂರ್ಯೋದಯದ ಸಂದರ್ಭದಲ್ಲಿ. ಅತ್ಯಂತ ಸುಂದರಿಯಾದ ಅವಳು ವೇಣುನಾದನ ಮಾಡುತ್ತಿರುತ್ತಾಳೆ. ಪಂಜರದ ಗಿಳಿ ಅದನ್ನು ಅನುಕರಣ ಮಾಡತೊಡಗುತ್ತದೆ. ಊರ್ಮಿಳೆಯ ದೃಷ್ಟಿ ಆ ಗಿಳಿಯತ್ತ ಹೋದಾಗ ಅದು ಸುಮ್ಮನೆ ಕುಳಿತು ಅವಳನ್ನೇ ನೋಡತೊಡಗಿತು. ಊರ್ಮಿಳೆಯು, 'ಎಲೈ, ಸುಭಾಷಿಣಿ, ಮಾತನಾಡು. ಏಕೆ ಸುಮ್ಮನೆ ಕುಳಿತಿರುವೇ?' ಎಂದಳು. ಆಗ ಬಂದ ಲಕ್ಷ್ಮಣನು ನಾನು ಹೇಳುವೆನು ಎನ್ನುತ್ತ, ನಿನ್ನ ಮೂಗಿನ ತುದಿಯ ಮೇಲೆ ಮತ್ತು ಮುತ್ತಿನ ಆಭರಣದ ಮೇಲೆ ಕೆಳದುಟಿಯ ಅರುಣ ಕಾಂತಿಯು ಬಿದ್ದಿದೆ. ಅದು ಈ ಗಿಳಿಗೆ ದಾಳಿಂಬೆ ಬೀಜವನ್ನು ಕಟ್ಟಿಕೊಂಡಿರುವ ಗಿಳಿಯ ಕೊಕ್ಕಿನ ಭ್ರಾಂತಿಯನ್ನು ಉಂಟುಮಾಡಿರುವುದರಿಂದ ಈ ಮತ್ತೊಂದು ಗಿಳಿ ಯಾವುದು ಎಂದು ಯೋಚಿಸುತ್ತಾ ಮೌನ ತಾಳಿದೆ', ಎನ್ನುತ್ತಾನೆ. ಊರ್ಮಿಳಾ ಲಕ್ಷ್ಮಣರ ಸರಸಮಯ ಸನ್ನಿವೇಶದೊಂದಿಗೆ ಸಾಕೇತವು ಪ್ರಾರಂಭವಾಗುತ್ತದೆ.

ರಾಮನ ಪಟ್ಟಾಭಿಷಷೇಕದ ಹಿಂದಿನ ದಿನ ಈ ಚಿತ್ರಣ ಊರ್ಮಿಳೆಯಲ್ಲಿ ಇದ್ದ ಚಿತ್ರಕಲೆಯ ಕುಶಲತೆಯ್ನು ತೆರೆದಿಡುತ್ತದೆ.

ಸಾಕೇತ ರಾಮಾಯಣದಲ್ಲಿ ಊರ್ಮಿಳೆ ಮತ್ತು ಲಕ್ಷ್ಮಣರದು ಪ್ರೇಮಮಯ ಜೀವನ. ರಾಮನು ವನವಾಸಕ್ಕೆ ಹೊರಟಾಗ ಸೀತೆಯೂ ಹೊರಡುತ್ತಾಳೆ. ವನವಾಸದಲ್ಲಿಯೇ ಸ್ವರ್ಗಸುಖವನ್ನು ಅನುಭವಿಸಬಲ್ಲೆನೆಂಬ ಯೋಚನೆ ಸೀತೆಯ ಮನದಲ್ಲಿತ್ತು. ಲಕ್ಷ್ಮಣನು ಮಾತ್ರ ತಲೆತಗ್ಗಿಸಿ ನಿಂತಿದ್ದನು. ಕಣ್ಣೆತ್ತಿ ಅಲ್ಲಿಯೇ ಇದ್ದ ಊರ್ಮಿಳೆಯನ್ನು ನೋಡುವುದು ಕೂಡ ಅವನಿಂದ ಸಾಧ್ಯವಾಗಲಿಲ್ಲ. ಆದರೆ ಅಕ್ಷಿಪಟಲದ ಮುಂದೆ ನಿಂತ ಊರ್ಮಿಳೆಯ ಚಿತ್ರ ಮಾತ್ರ ಮನದಿಂದ ಕದಲಲಿಲ್ಲ. ಇದನ್ನು ಕವಿಯು ಸುಂದರವಾಗಿ ಹೇಳಿದ್ದಾನೆ;

**ಉಠೀ ನ ಲಕ್ಷ್ಮಣ್ ಕೀ ಆಂಖೇ,**
**ಜಕಡೀ ರಹೀ ಪಲಕ್ – ಪಾಂಖೇ**

**ಕಿನ್ತು ಕಲ್ಪನಾ ಘಟೀ ನಹೀ**

**ಉದಿತ್ ಉರ್ಮಿಲಾ ಹಬೀ ನಹೀ**

**ಖಡೀ ಹುಈ ಹೃದಯಸ್ಥಲ್ ಮೇ. –**

ಇಲ್ಲಿ ಲಕ್ಷ್ಮಣನ ಮನದ ತಳಮಳವೂ ವ್ಯಕ್ತವಾಗುತ್ತದೆ. ತಾನೇನೋ ಅಣ್ಣನನ್ನು ಬೇಡಿ ಅವನೊಂದಿಗೆ ಕಾಡಿಗೆ ಹೋಗುತ್ತಿದ್ದಾನೆ. ಈಗ ಊರ್ಮಿಳೆಯನ್ನು ಕರೆದೊಯ್ಯುವುದೋ ಬೇಡವೋ ಎನ್ನುವ ಯೋಚನೆ ಅವನ ಮನದಲ್ಲಿ ಮೂಡುತ್ತದೆ. ರಾಮನನ್ನು ಒಪ್ಪಿಸಿ ಕರೆದೊಯ್ದರೆ ಅಣ್ಣನ ಮುಂದೆ ತನಗೆ ಸಂಕೋಚವಾಗುತ್ತದೆ. ಆಗ ರಾಮನಿಗೆ ಕೆಡುಕೆನಿಸಿ ತನ್ನನ್ನು ಬಿಟ್ಟು ಹೊರಟು ಬಿಡುತ್ತಾನೆ. ಹೀಗೆಲ್ಲ ಭಾವಿಸಿದ ಲಕ್ಷ್ಮಣನು ಪತ್ನಿಯನ್ನು ಬಿಟ್ಟು ಹೊರಡುವ ನಿರ್ಧಾರ ಮಾಡುತ್ತಾನೆ. ಊರ್ಮಿಳೆ ಪತಿಯ ಮನಸ್ಥಿತಿಯನ್ನು ಅರ್ಥೈಸಿಕೊಂಡು ಸೀತೆಯ ಭುಜದ ಮೇಲೆ ತಲೆಯಿಟ್ಟು ರೋಧಿಸುತ್ತಾಳೆ.

ಕಹಾ ಉನ್ಹೋಂನೇ ಧೀರೇ ಸೇ –

**"ಬಹನ್ ! ಧೈರ್ಯಕಾ ಅವಸರ್ ಹೈ" ।**

**ವಹ್ ಬೋಲೀ – "ಅಬ್ ಈಶ್ವರ್ ಹೈ" ।**

**ಸೀತಾ ಬೋಲೀ ಕಿ – "ಹ್ಙಾ ಬಹನ್,**

**ಸಭೀ ಕಹ್ಣೀ, ಗೃಹ್ ಹೋ ಕಿ ಗಹನ್ ।"**

ಈಶ್ವರನೇ ಈಗ ನಮಗೆ ರಕ್ಷಕನೆಂದು ಊರ್ಮಿಳೆ ಹೇಳಿದ ಮಾತಿಗೆ ಸೀತೆಯೂ ದನಿಗೂಡಿಸಿ ಹೌದು ತಂಗಿ, ಮನೆ, ಕಾಡು ಎಲ್ಲ ಕಡೆಯೂ ಅವನೇ ನಮಗೆ ರಕ್ಷಕನೆಂದಳು.

ಸುಮಿತ್ರೆಯು ಲಕ್ಷ್ಮಣನನ್ನು ಪುಣ್ಯಶಾಲಿಯೆಂದು ಆಶೀರ್ವದಿಸಿ ರಾಮನು ಮನಸಿನ ರೂಪನಾದರೆ ನೀನು ಶರೀರ. ಅದೇ ರೀತಿ ಮನಸು ಶರೀರಗಳು ಹೇಗೆ ಅಖಂಡವೋ ಹಾಗೆ ರಾಮನು ಧನ. ನೀನು ಅದನ್ನು ರಕ್ಷಿಸುವ ಸೇವಕನೆನ್ನುತ್ತಾಳೆ. ಇದು ಲಕ್ಷ್ಮಣನ ಮನಸಿಗೇನೋ ಆನಂದ ತಂದಿತು. ಆದರೆ ಊರ್ಮಿಳೆ, ಆಕೆ ತನ್ನ ಮನಸ್ಸಿಗೆ ಸಮಾಧಾನ ಹೇಳಿಕೊಳ್ಳುತ್ತಾಳೆ. ಮನಸ್ಸೇ ನಿನ್ನ ಪ್ರಿಯನ ಗುರಿಗೆ ವಿಘ್ನ ತಾರದಿರು. ಸ್ವಾರ್ಥದಿಂದ ಯೋಚಿಸದೆ ತ್ಯಾಗ ಮಾಡು. ನಿನ್ನ ಪತಿಪ್ರೇಮವು ವಿರಾಗದಿಂದಿರಲಿ, ನಿನ್ನಲ್ಲಿ ಯಾವುದೇ ವಿಕಾರಗಳಿಂದ ದುಃಖದಿಂದ ಚೂರಾಗದಿರು. ಈ ಅಣ್ಣ ತಮ್ಮಂದಿರ ಸ್ನೇಹವು ಭೂಲೋಕದಲ್ಲಿ ಸ್ವರ್ಗಸದೃಶವಾಗಲಿ ಎಂಬುದಾಗಿ.

ಸೀತಾ ರಾಮ ಲಕ್ಷ್ಮಣರು ಹೊರಟಾಗ ಊರ್ಮಿಳೆಯು ಅಯ್ಯೋ ಎಂದುಸುರಿ ಬಿದ್ದುಬಿಟ್ಟಳು. ಸೀತೆಯು ಗಾಳಿ ಹಾಕತೊಡಗಿದಳು. ಇದನ್ನು ಕಂಡ ರಾಮನು ಲಕ್ಷ್ಮಣನಿಗೆ ತಮ್ಮೊಂದಿಗೆ ಬಾರದಿರೆಂದಾಗ ಸುಮಿತ್ರೆಯು ಹೇಳುವ ಮಾತು ಗಮನಾರ್ಹ – ನಿರ್ಣಯವಾಗಿರುವ ವಿಷಯದಲ್ಲೇಕೆ ಮತ್ತೆ ಚರ್ಚೆ,

ಹೇಗಿರಬಲ್ಲೆವೋ ಅಂತೆಯೋ ಇರುತ್ತೇವೆ. ಎಲ್ಲ ಸಂಕಟಗಳನ್ನು ಸಹಿಸಿಕೊಳ್ಳುತ್ತೇವೆ ಎಂಬುದಾಗಿ. ಕೌಸಲ್ಯೆಯು ಮೂರ್ಛಿತಳಾದ ಊರ್ಮಿಳೆಯ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ದುಃಖಿಸುತ್ತಾಳೆ.

ಊರ್ಮಿಳೆಯ ಶೋಕವು ತೀವ್ರ ವೇದನೆಯದಾಗಿತ್ತು. ದುಃಖದಿಂದ ಕಣ್ಣೀರು ಸುರಿಸುತ್ತಿದ್ದಳು. ಸುಲಕ್ಷಣೆಯೆಂಬ ಸಖಿಯು ಸಮಾಧಾನಿಸಿದಾಗ ಊರ್ಮಿಳೆಯು ವಿಷಾದದಿಂದ ಎಲ್ಲವೂ ಹೋಯಿತು ಆದರೆ ಈ ಆಸೆ ಮಾತ್ರ ಹೋಗಿಲ್ಲ. ಆಸೆಯನ್ನು ನಂಬಿದವರಿಗೆ ನಿಷ್ಫಲವೇ ದೊರಕುತ್ತದೆ. ಸುಲಕ್ಷಣೇ ಇನ್ನೂ ಆಸೆ ಉಳಿದಿದೆಯೇ? ಒಂದು ವೇಳೆ ಅವರು ಹಿಂದಿರುಗುತ್ತಾರೆಂಬ ಆಸೆಯು ಉಳಿದಿರುವುದೇ ಆದರೆ ಅದು ವಿನಾಶವೇ ಹೊರತು ಸಂತೋಷವಲ್ಲ ಎನ್ನುತ್ತಾಳೆ. ತನ್ನ ಸ್ವಾಮಿಯು ಹೊರಟಾಗ ತಾನೇನು ಹೇಳಲಿಲ್ಲ. ಭ್ರಾತೃಪ್ರೇಮವೇ ನಿಜವಾದ ಕರ್ತವ್ಯವಾಗಿದೆ. ಅದೇ ಅವರನ್ನು ಆಕರ್ಷಿಸುತ್ತಿದೆ. ಅಂತಹ ಭ್ರಾತೃಸ್ನೇಹವು ಎಂದಿಗೂ ಊನವಾಗದಿರಲಿ. ಜನರಿಗೆ ಅವರೊಬ್ಬ ಆದರ್ಶವಾದಿಗಳಾಗಿರಲಿ. ಆದರೆ ಅಕ್ಕ ಸೀತೆಯ ಹೃದಯಸ್ಪರ್ಶೀ ಮಾತುಗಳಿಂದ ದುಃಖ ತಾಳಲಾರದೆ ಬಿದ್ದುಬಿಟ್ಟದ್ದು ಸ್ತ್ರೀಸಹಜ ದೌರ್ಬಲ್ಯವೇ ಹೊರತು ಬೇರೇನಲ್ಲ ಎಂದಳು. ಸಮಯವು ಸುಮ್ಮನೆ ಸಾಗುತ್ತಿತ್ತು. ಊರ್ಮಿಳೆಯು ಒಮ್ಮೊಮ್ಮೆ ಅಳುತ್ತಿದ್ದರೆ ಒಮ್ಮೊಮ್ಮೆ ಶಾಂತವಾಗಿರುತ್ತಿದ್ದಳು. ಸಮಾಧಾನ ಹೇಳಿದರೆ ಸುಮ್ಮನೆ ಕೇಳಿಸಿಕೊಳ್ಳುತ್ತಿದ್ದಳು. ಆದರೆ ಮನದಲ್ಲಿನ ತುಮುಲಗಳನ್ನು ವಿಮರ್ಶಿಸಿ ಅರ್ಥೈಸಲಾರದೆ ಹೋಗುತ್ತಿದ್ದಳು.

**ಊರ್ಮಿಲಾ ಕಹ್ಹಾ ಹೈ ಹಾಯ್ ಬಹೂ**
**ತೂ ರಘುಕುಲ ಕೀ ಅಸಹಾಯ್ ಬಹೂ ।**

ಎನ್ನುವ ದಶರಥನ ಮಾತಿನಲ್ಲಿ ರಘುಕುಲದ ಅಸಹಾಯ ಸೊಸೆಯಾಗಿ ಊರ್ಮಿಳೆಯಿದ್ದಾಳೆ ಎಂಬ ಭಾವವಿದೆ. ರವಿಕುಲದ ಕೇತುವಿನಂತೆ ಈ ಎಲ್ಲ ಅನರ್ಥಗಳಿಗೂ ನಾನು ಕಾರಣನಾದೆನೆಂದು ಪ್ರಲಾಪಿಸುತ್ತಾನೆ.

ಸೀತಾರಾಮಲಕ್ಷ್ಮಣರನ್ನು ಅಯೋಧ್ಯೆಗೆ ಕರೆತರಲು ಭರತಾದಿಯಾಗಿ ರಾಜಪರಿವಾರವೆಲ್ಲ ಹೊರಟಿತು. ರಾಮನು ಹಿಂದಿರುಗಲು ನಿರಾಕರಿಸಿದಾಗ ಭರತನು ರಾಮ ಪಾದುಕೆಯನ್ನು ಬೇಡಿದನು. ನಂತರ ಎಲ್ಲರೂ ಕೆಲವು ದಿವಸ ಸೀತಾರಾಮರೊಂದಿಗೆ ಕಳೆಯಲು ನಿರ್ಧರಿಸಿದರು. ಒಂದು ದಿನ ಸೀತೆಯು ಲಕ್ಷ್ಮಣನಿಗೆ 'ಸ್ವಲ್ಪ ದೊನ್ನೆಗಳನ್ನು ತೆಗೆದುಕೊಂಡು ಬಾ, ಸಹೋದರಿಯರಿಗೆ ವನ ಉಪಹಾರವನ್ನು ಕೊಡುತ್ತೇನೆ' ಎಂದಳು. ಲಕ್ಷ್ಮಣನು ಕುಟೀರವನ್ನು ಪ್ರವೇಶಿಸಿದಾಗ. ಅಲ್ಲಿ ಕಂಡುದನ್ನು ಕವಿ ಸುಂದರವಾಗಿ ವರ್ಣಿಸಿದ್ದಾನೆ 'ಮೂಲೆಯಲ್ಲಿ ಕೇವಲ ರೇಖಾ ಚಿತ್ರದಂತೆ ನಿಂತಿದ್ದ ಊರ್ಮಿಳೆಯನ್ನು ಕಂಡು ಇವಳು ಊರ್ಮಿಳೆಯೋ ಅವಳ ನೆರಳೊ ಎಂದು ಭ್ರಾಂತನಾಗಿ ನಿಂತನು. ಇದನ್ನು ಕಂಡು ಊರ್ಮಿಳೆಯ ಪ್ರತಿಕ್ರಿಯೆ ಅತ್ಯಂತ ಮನೋಜ್ಞವಾಗಿದೆ.

'ನನ್ನ ಹೃದಯವೆಂಬ ಉಪವನದಲ್ಲಿ ಸಂಚರಿಸುತ್ತಿರುವ ಜಿಂಕೆ ನೀನು, ಈಗ ವನದಲ್ಲಿ ಸಂಚರಿಸುತ್ತಿದ್ದೀಯ, ಹೆದರದಿರು ನಾನು ನಿನ್ನ ಬಂಧನಕ್ಕೊಳಪಡಿಸುವುದಿಲ್ಲ'. ಎನ್ನುವ ಮಾತು ಕೇಳಿದೊಡನೆಯೇ ಲಕ್ಷ್ಮಣನು ಊರ್ಮಿಳೆಯ ಕಾಲುಗಳಿಗೆ ಬೀಳುತ್ತಾನೆ. ಅವಳೂ ಪತಿಯ ಪಾದಗಳನ್ನು ಕಂಬನಿಯಿಂದ ತೊಳೆದು ಪುಳಕಗೊಂಡಳು.

ಈ ಮಿಲನವು ಮೂಲ ಕಥೆಯಲ್ಲಿಲ್ಲ. ಲಕ್ಷ್ಮಣ ಮತ್ತು ಊರ್ಮಿಳೆಯಲ್ಲಿರುವ ಪರಸ್ಪರ ಭಾವನಾತ್ಮಕ ಸಂಬಂಧ ಅವರ ಈ ಮಾತುಗಳಲ್ಲಿ ವ್ಯಕ್ತವಾಗಿವೆ. ಲಕ್ಷ್ಮಣನು 'ವನದಲ್ಲಿದ್ದು ತಪಸ್ಸುಮಾಡಿ ಯೋಗ್ಯ ವ್ಯಕ್ತಿಯಾಗಲು ಅನುಕೂಲಮಾಡಿಕೊಡು. ಅತ್ತಿಗೆಯ ತಂಗಿಯೇ ನೀನು ನನಗೆ ಕೇವಲ ಭೋಗದ ವಸ್ತುವಲ್ಲ' ಎಂದಾಗ, ಉತ್ತರಿಸಿದ ಊರ್ಮಿಳೆಯ ಮಾತುಗಳು ಮಾರ್ಮಿಕವಾಗಿದೆ. 'ಸ್ವಾಮಿ ನಿಮ್ಮೊಡನೆ ಏನೇನೋ ಹೇಳಬೇಕೆಂದುಕೊಂಡಿದ್ದೆ ಆದರೆ ಆಗುತ್ತಿಲ್ಲ. ಇವೆಲ್ಲವೂ ನನ್ನ ಕರ್ಮದೋಷವಾಗಿದೆ. ಆದರೂ ನಿಮಗೆ ಎಲ್ಲಿ ಯಾವುದರಲ್ಲಿ ಸಂತಸವಿದೆಯೋ ಅದರಲ್ಲಿಯೇ ನನಗೂ ಸಂತಸವಿದೆಯೆಂದು ಮಾತ್ರ ಹೇಳಬಲ್ಲೆ' ಎನ್ನುವ ಮೂಲಕ ತನ್ನ ವಿನಯತೆಯನ್ನು ಮೆರೆಯುತ್ತಾಳೆ. ಇವರ ಭೇಟಿಯ ಕಾಲ ಕೆಲವೇ ನಿಮಿಷಗಳಾದ್ದರೂ ಸೀತೆಯ ಸಮಯೋಚಿತ ಪ್ರಜ್ಞೆಯಿಂದ ಎರಡು ವಿರಹೀ ಜೀವಗಳು ಕೆಲಕಾಲವಾದರೂ ಜೊತೆಯಲ್ಲಿದ್ದ ತೃಪ್ತಿ ಲಭಿಸಿರುವುದರಲ್ಲಿ ಅಚ್ಚರಿಯಿಲ್ಲ.

ಅಯೋಧ್ಯೆಗೆ ಹಿಂದಿರುಗಿದ ಪರಿವಾರದ ಸ್ಥಿತಿ ಹೇಗೆ ಇದ್ದರೂ ಊರ್ಮಿಳೆಯ ಮನೋ ನಿರ್ಧಾರದ ಅಚಲತೆಯನ್ನು ಕವಿ ಬಹಳ ಚೆನ್ನಾಗಿ ಪ್ರಕಟಿಸಿದ್ದಾನೆ. ಆದರೂ ವಿರಹದಿಂದ ಬೆಂದ ಊರ್ಮಿಳೆಯ ಮನಃಸ್ಥಿತಿಯ ಬಗ್ಗೆಯೂ ಕರುಣಾಪೂರ್ಣವಾಗಿ ವರ್ಣಿಸಿದ್ದಾನೆ. ಉಪವನದಲ್ಲಿಯೇ ನೆಲೆಸಿದ ಊರ್ಮಿಳೆ ಸ್ವಪ್ನಜಾಗ್ರದವಸ್ಥೆಯಲ್ಲಿಯೂ ಲಕ್ಷ್ಮಣನು ಜೊತೆಯಲ್ಲಿಯೇ ಇರುವನೋ ಎಂಬಂತೆ ಬದುಕಿದಳು. ಪತಿಧ್ಯಾನದಲ್ಲಿಯೇ ಮುಳುಗಿದ್ದ ಅವಳ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ದೈನಂದಿನ ಚಟುವಟಿಕೆಗಳಲ್ಲಿ ಅನಾಸಕ್ತಳಾದ ಅವಳಿಗೆ ಯಾವುದೂ ರುಚಿಸುತ್ತಿಲ್ಲ. ಅವಳ ಸ್ಥಿತಿಯನ್ನು ಕವಿಯ ಮಾತುಗಳು ಹೃದಯಂಗಮವಾಗಿ ವರ್ಣಿಸಿವೆ.

ಸಖಿಯು, ಊರ್ಮಿಳೆಯು ಅನ್ನಾಹಾರಗಳ ಬಗೆಗೆ ಲಕ್ಷ್ಯ ಕೊಡದೆ ನಿರಾಸಕ್ತಳಾಗಿದ್ದಾಗ ಅವಳ ಬಟ್ಟೆಗಳು ಕೊಳೆಯಾಗಿರುವುದು, ಹರಿದಿರುವುದನ್ನು ತೋರಿಸಿದಾಗ ಊರ್ಮಿಳೆಯು ಸಖಿಯೇ ನನ್ನ ಬಟ್ಟೆ ಹರಿದು ಚೂರಾಗಬಹುದು, ನಾಶವಾಗದು. ಗಾಳಿಯು ಎಲ್ಲಿಂದಲೋ ಬಂದು ಧೂಳು ಹಾಕುತ್ತಿರುವುದರಿಂದ ಬಟ್ಟೆ, ಶರೀರಗಳು ಧೂಳಿನಿಂದಾವೃತವಾಗಿರಬಹುದು. ಆದರೇನಂತೆ ಅವೆಲ್ಲ ಮಣ್ಣಿನಲ್ಲಿಯೇ ಸೇರಿಹೋಗುವಂತಹುದು. ಸಹಜವಾಗಿ ಕೊಳೆಯಾದ ಬಟ್ಟೆಗಳಾದರೂ ವಲ್ಕಲಗಳಿಗಿಂತ ಚೆನ್ನಾಗಿವೆ. ಆದರೆ ಬಟ್ಟೆಗಳು ಕೊಳೆಯಾಗುತ್ತವೆ, ಹರಿಯುತ್ತವೆಂದು ಅವುಗಳನ್ನು ಧರಿಸುವುದಿಲ್ಲ. ನೀನು ಹೇಳಿದಂತೆ ವಸ್ತ್ರ ಧರಿಸುತ್ತೇನೆ. ನೀನು ಕೊಟ್ಟದ್ದನ್ನು ತಿನ್ನುತ್ತೇನೆ, ಕುಡಿಯುತ್ತೇನೆ, ವಿರಹವನ್ನು ಮಾತ್ರ ಸಹಿಸಲಾಗುತ್ತಿಲ್ಲ.

ದೀರ್ಘವಾದ ಅವಧಿಯೆಂಬ ಸಾಗರವನ್ನು ದಾಟುವುದಾದರೂ ಹೇಗೆ. ಇಲ್ಲಿ ಹದಿನಾಲ್ಕು ವರ್ಷಗಳನ್ನು ಅವಧಿಯ ಸಾಗರವೆಂದು ಕರೆದಿದ್ದಾಳೆ.

ಮೂವರು ಅತ್ತೆಯರೂ ದುಃಖಿಗಳೆ, ನನ್ನನ್ನು ಕಂಡರೆ ಅವರ ದುಃಖವು ಹೆಚ್ಚುತ್ತದೆ. ಶತ್ರುಘ್ನನೂ, ಸೋದರಿಯರಾದ ಮಾಂಡವಿ, ಶ್ರುತಕೀರ್ತಿಯರೂ ಶೋಕಿತರಾಗಿದ್ದಾರೆ. ಹೀನಳಾಗಿ ಅಧೀನಳಾಗಿರುವ ನಾನು ಎಲ್ಲಿದ್ದರೇನು ಶಾಂತಿ ಸಿಗುವುದೇ? ಇತರರಿಗೂ ಕೊಡಲಾಗುವುದೇ? ಚಿತ್ರಕೂಟಕ್ಕೆ ಬಂದಿದ್ದ ನನ್ನ ತಾಯಿಯು 'ನಿನಗೆ ವನವೂ ಸಿಗಲಿಲ್ಲ; ಅರಮನೆಯೂ ಸಿಗಲಿಲ್ಲ' ಎಂದಿದ್ದನ್ನೆಲ್ಲ ಸಖಿಯ ಮುಂದೆ ಹೇಳುಕೊಳ್ಳುವ ಊರ್ಮಿಳೆಯ ಮನಸ್ಥಿತಿಗೆ ಯಾರನ್ನು ದೋಷಿಯಾಗಿಸುವುದು ಸಾಧ್ಯ? ತಂದೆಯು ಚಿತ್ರಕೂಟದಲ್ಲಿ ಮಾತನಾಡಲಾರದೆ ದುಃಖಿತರಾದುದನ್ನು ಹೇಳುತ್ತಾಳೆ. ಚಿತ್ರಕೂಟದ ಅದೃಷ್ಟದ ಬಗ್ಗೆ ಕೊಂಡಾಡುತ್ತಾಳೆ.

ಊರ್ವಶಿಯ ಮೆಚ್ಚಬೇಕಾದ ಇನ್ನೊಂದು ಗುಣವೆಂದರೆ ತನ್ನ ವಿರಹ, ವಿಯೋಗ ವೇದನೆಯಿಂದಾಗಿ ತಾನು ಕಲಿತಿರುವ ಲಲಿತ ವಿದ್ಯೆಗಳನ್ನು ಮರೆಯಬಾರದೆಂದು ತಾನಿದ್ದ ಉಪವನದಲ್ಲಿ ಬಾಲಿಕೆಯರಿಗಾಗಿ ಒಂದು ಕಲಾಶಾಲೆಯನ್ನೇಕೆ ಪ್ರಾರಂಭಿಸಬಾರದು ಎಂದು ಸಖಿಯನ್ನು ಪ್ರಶ್ನಿಸುತ್ತಾಳೆ. ಚಿತ್ರವನ್ನು ಬರೆಯಬೇಕೆಂಬ ಬಯಕೆಯನ್ನು ವ್ಯಕ್ತಪಡಿಸಿ ಕಾಡಿನಲ್ಲಿ ರಾಮ ಲಕ್ಷ್ಮಣ ಸೀತೆಯರಿರಬಹುದಾದ ಸ್ಥಿತಿಗಳನ್ನು ಊಹಿಸಿಕೊಂಡು ಚಿತ್ರಿಸಲು ಯೋಚಿಸುತ್ತಾಳೆ. ತನ್ನ ಯೌವ್ವನದ ಕಾಲದಲ್ಲಿ ಸುಖದ ದುಃಖವೇ ತುಂಬಿದೆಯೆಂದುಕೊಳ್ಳುತ್ತಾಳೆ. ಹೀಗೆಯೇ ದಿನಗಳು ಕಳೆದುಹೋಗಿ ಜೀವನದ ಸಂಧ್ಯಾಕಾಲವು ಬರುತ್ತದೆ ಎನ್ನುತ್ತಾಳೆ. ಅಲ್ಲಿಯೇ ಇದ್ದ ಗಿಳಿಯ ಬಗ್ಗೆ, ಮೊಲ, ಪಾರಿವಾಳಗಳ ಬಗ್ಗೆ ಮಾತನಾಡುತ್ತಾಳೆ.

ನನ್ನ ಹೃದಯದಲ್ಲಿ ಜ್ವಾಲೆ ಮತ್ತು ಅದನ್ನು ಆರಿಸುವ ಜಲಧಾರೆಯೂ ಇದೆಯೆಂಬುದನ್ನು ನನ್ನ ವಿರಹ ವೇದನೆಯಿಂದ ತಿಳಿದಿದ್ದೇನೆ. ನನ್ನ ಪತಿಯೇ ಸರ್ವಸ್ವವಲ್ಲ. ಇಂತಹ ಸಮಯದಲ್ಲಿ ಇಡೀ ಜಗತ್ತೇ ಸರ್ವಸ್ವ ಎನ್ನುವುದನ್ನು ವಿರಹವು ತಿಳಿಸಿಕೊಟ್ಟಿದೆಯೆನ್ನುತ್ತಾಳೆ. ಸೂರ್ಯ ಮುಳುಗಿದುದನ್ನು ಕಂಡು ದಿನವೂ ಮುಳುಗಿ ಹೋಯಿತೆನ್ನುವುದರ ಮೂಲಕ ತನ್ನ ನಿರಾಸೆಯನ್ನು ವ್ಯಕ್ತಪಡಿಸುತ್ತಾಳೆ. ರಾತ್ರಿಯು ಹೆಚ್ಚಾಗುತ್ತಿದ್ದಂತೆ ಗೆಳತಿಗೆ ಹೇಳುತ್ತಾಳೆ. ನಾನೇನು ಮಾಡಲೀ? ರಾತ್ರಿಯು ನನ್ನೊಂದಿಗೆ ಯುದ್ಧಕ್ಕೆ ನಿಂತಿರುವಂತಿದೆ. ಹೆದರಿ ಕುಳಿತಿರಲೇ? ಸೋಲನ್ನು ಒಪ್ಪಿಕೊಳ್ಳಲೇ? ಎಂದು ಪ್ರಶ್ನಿಸುತ್ತಾಳೆ ಮತ್ತು ಹೇಳುತ್ತಾಳೆ. ಮಲಗಿದ್ದಾಗ ಬೆಚ್ಚಿ ಬೀಳುತ್ತೇನೆ ಎಂದು ಹೇಳುತ್ತಿದ್ದಿಯೇ, ಇದರಿಂದ ನಾನು ಬದುಕಿರುವುದು ತಿಳಿಯುತ್ತದೆ. ಮತ್ತು ನನ್ನನ್ನು ರಾತ್ರಿಯು ಕೊಲ್ಲಬಯಸಿದರೂ ವಿಫಲವಾಯಿತಲ್ಲವೇ? ಎನ್ನುತ್ತಾಳೆ. ತನ್ನ ವಿರಹವನ್ನು ಊರ್ಮಿಳೆಯು ಹಲವು ರೀತಿಯಲ್ಲಿ ವ್ಯಕ್ತಪಡಿಸುತ್ತಾಳೆ. ಇಷ್ಟೆಲ್ಲದರ ಮಧ್ಯೆಯೂ ತನ್ನ ಸ್ವಾಮಿಗೆ ಹೇಳುತ್ತಾಳೆ, ನನ್ನ ಚಿಂತೆಯನ್ನು ಬಿಟ್ಟು ಬಿಡಿ. ಆತ್ಮ ಚಿಂತನೆಯಲ್ಲಿ ಮಗ್ನರಾಗಿ ನಾನು ಅರಮನೆಯಲ್ಲಿ ಸುಖವಾಗಿಯೇ ಇದ್ದೇನೆ ಎಂಬುದಾಗಿ. ತನ್ನ ವಿರಹ ವೇದನೆಯಲ್ಲಿ ಬೇಸಿಗೆ, ಮಳೆಗಾಲ, ಚಳಿಗಾಲಗಳ ಪರಿವೆಯಿಲ್ಲದೆ ದಿನ ದೂಡುತ್ತಿದ್ದಾಳೆ.

ತನ್ನ ಒಂದು ನೆನಪನ್ನು ಗೆಳತಿಗೆ ಹೇಳುವ ಊರ್ಮಿಳೆಯ ಮನಸ್ಸು ಹೇಗೆ ಲಕ್ಷ್ಮಣನಲ್ಲಿ ನೆಟ್ಟುಹೋಗಿತ್ತು ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಒಂದು ರಾತ್ರಿ ತಾನು ವರಾಂಡದಲ್ಲಿ ನಿಂತಿದ್ದೆ. ಮೋಡ ಕವಿದು ಮಳೆ ಜಿನುಗುತ್ತಿತ್ತು. ಗಾಳಿಯು ಕೇದಗೆಯ ವಾಸನೆಯಿಂದೊಡಗೂಡಿತ್ತು, ಜೀರುಂಡೆಗಳ ಧ್ವನಿಯಿಂದ ಆಕರ್ಷಿತಳಾಗಿ ಕಾಲ್ಬಳೆಯನ್ನು ಶಬ್ದಮಾಡುತ್ತ ಜೀರುಂಡೆಯ ಧ್ವನಿಯನ್ನು ಅನುಕರಣೆ ಮಾಡುತ್ತಿದ್ದೆ. ಮಿಂಚುತ್ತಿತ್ತು, ಮೋಡಗಳು ಹೆಚ್ಚಾಗಿತ್ತು. ಬೆಚ್ಚಿ ಬಿದ್ದು ನೊಡಿದೆ, ಒಂದು ಮೂಲೆಯಲ್ಲಿ ಪ್ರಿಯತಮನು ನಿಂತಿದ್ದುದನ್ನು ಕಂಡು ನಾಚಿಕೊಳ್ಳದೆ ಅವರೆದೆಯಲ್ಲಿ ಮುಖವಿಟ್ಟೆ ಎನ್ನುತ್ತಾಳೆ.

'ಸಖಿಯೇ ನಾನು ಈ ಪ್ರಪಂಚವೆಂಬ ಉಪವನದಲ್ಲಿ ಒಂದು ಮೊಗ್ಗಿನ ರೂಪದಲ್ಲಿದ್ದೆ. ನಾನು ಅರಳುತ್ತಿರುವಾಗ ಸ್ವರ್ಣ ಭ್ರಮರವೊಂದು ನನ್ನೊಡನೆ ಬೆರೆಯಲು ಬಂದಿತು. ನಾನು ಸ್ವಲ್ಪ ಅರಳುವುದರ ಮೂಲಕ ಹಸನ್ಮುಖಿಯಾಗಿ ಅದನ್ನು ಸ್ವಾಗತ ಮಾಡಿದೆ. ಆಗ ನೋಡು ಎಲ್ಲಿಂದಲೂ ಗಾಳಿ ಬೀಸಿತು. ನನ್ನ ನಿರೀಕ್ಷೆ ಮಾಡುತ್ತ ಜೀವಿಸು' ಎಂದು ಹೇಳಿ ಗುಯ್‌ಗುಟ್ಟುತ್ತ ಯಾವ ಕಡೆಯೋ ಹೊರಟು ಹೋಯಿತು ಎನ್ನುವುದರ ಮೂಲಕ ತನ್ನ ಜೀವನವನ್ನು ಪುಷ್ಪ-ಭ್ರಮರಗಳಿಗೆ ಹೋಲಿಸಿಕೊಳ್ಳುತ್ತಾಳೆ ಊರ್ಮಿಳೆ.

ಈ ಮಾತುಗಳು ಪತಿ ಪತ್ನಿಯರಿಬ್ಬರೂ ಹೇಗೆ ಜೀವನದ ಆಗುಹೋಗುಗಳಲ್ಲಿ ಸಮಾನರಾಗಿದ್ದಾರೆ ಎಂಬುದನ್ನು ತೋರಿಸುತ್ತದೆ. ಪ್ರಿಯನೇ ನಿನ್ನ ಸಹಜವಾದ ತ್ಯಾಗವು ಸಫಲತೆಯು ಹೊಂದಲಿ, ಹಾಗೆಯೇ ನನ್ನ ಅನುರಾಗವೂ, ನಿಷ್ಫಲವಾಗದು. ನನ್ನ ಸಾಧನೆಯು ಸ್ವಯಂ ಸಿದ್ಧಿಗೆ ಸಮಾನವಾಗಿದೆ. ಹಸಿವೆಯೇ ಇಲ್ಲದಿರುವಾಗ ಅಮೃತಕ್ಕೆ ಬೆಲೆಬರುವುದೇ? ನಿನ್ನ ನಗುವಿನಲ್ಲಿ ಹೂವಿದೆ. ನನ್ನ ಅಳುವಿನಲ್ಲಿ ಮುತ್ತುಗಳಿವೆ ಎನ್ನುವ ಮೂಲಕ ಇಬ್ಬರ ಯೋಚನೆಯಲ್ಲೂ, ನಡವಳಿಕೆಯಲ್ಲೂ ಪರಸ್ಪರ ಪ್ರೀತಿ ಗೌರವಗಳಿದ್ದವೆಂಬುದನ್ನು ಸಾಬೀತುಪಡಿಸುತ್ತದೆ. ಇದೇ ರೀತಿ ಇನ್ನೊಮ್ಮೆ ಊರ್ಮಿಳೆಯು ತನ್ನ ಮನದ ಭಾವನೆಯನ್ನು ಹೊರಗೆಡಹುತ್ತಾಳೆ. ನಾನು ಆಗಾಗಾ ಪೊದೆಗಳ ಮರೆಯಿಂದ ಅವರನ್ನು ನೋಡುತ್ತಿರುವೆ. ಅವರು ತಮ್ಮ ಸಾಧನೆಯಲ್ಲಿ ತನ್ಮಯರಾಗಿರಲಿ. ಅವರು ಎದ್ದು ಹೋದ ಮೇಲೆ ಅವರ ಪಾದಧೂಳಿ ಬಿದ್ದಿರುವ ಆ ಸ್ಥಳದಲ್ಲಿಯೇ ಮಲಗುತ್ತೇನೆ.

ತನ್ನ ಅಸ್ತಿತ್ವದ ಬಗ್ಗೆ ಹೇಳುವ ಊರ್ಮಿಳೆಯ ಮಾತುಗಳು ಅವಳ ಮನದ ದಾರುಣ ಸ್ಥಿತಿಯನ್ನು ಹೇಳುತ್ತದೆ.

ನನ್ನ ಸಂತೋಷದ ಕೋಶವು ಎಷ್ಟು ಹೊತ್ತು ಮಾತನಾಡಿದರೂ ಬರಿದಾಗುತ್ತಿರಲಿಲ್ಲ. ಯಾವ ಸ್ಥಿತಿಯಲ್ಲಿದ್ದೆ ಯಾವ ಸ್ಥಿತಿಗೆ ಬಂದಿದ್ದೇನೆ ಏನಾಯಿತು? ಮಂಥರೆಯು ಗಿಳಿಯನ್ನು ಪಂಜರದಿಂದ ಹಾರಿಸಿಬಿಟ್ಟಳು. ತಾಯಿ ಕೈಕೇಯಿಗೆ ಸಿಕ್ಕಿದ್ದು ಶೂನ್ಯವಾದ ಹೃದಯ ಪಂಜರ. ನನ್ನ ಸಿದ್ಧಪುರುಷನೂ ಹೊರಟುಹೋದನು. ನಾನು ಮಾತ್ರ ಶಿಲೆಯಂತೆ ಇದ್ದೇನೆ ಎನ್ನುತ್ತಾಳೆ. ಯಾವ ವಸ್ತುಗಳು ಆನಂದವನ್ನು ಕೊಡುತ್ತಿತ್ತೋ ಅವು ಇಂದು ದುಃಖವನ್ನು ನೀಡುತ್ತವೆ. ನಾನು ಹುಚ್ಚಿಯಾಗುತ್ತಿದ್ದೇನೆ ಎಂದರೆ ಆ ಹುಚ್ಚು

ನನಗೆ ಪ್ರಿಯವೇ ಎನ್ನುತ್ತಾಳೆ. ನಾನು ಧೂಳಿನಂತೆ ಕೆಳಗೆ ನಿಮ್ಮ ಪಾದಗಳಲ್ಲಿ ಲೀನಳಾಗಿದ್ದೇನೆ. ದೇವತೆಗಳು ಭಕ್ತಿಯನ್ನು ನೋಡುತ್ತಾರೆ ವ್ಯಕ್ತಿ ಮತ್ತು ಆಡಂಬರವನ್ನಲ್ಲ. ನೀವು ಮೊದಲೇ ಮಹಾ ವ್ಯಕ್ತಿಯಾಗಿದ್ದವರು ಈಗ ಇನ್ನೂ ಮಹತ್ವವನ್ನು ಪಡೆದಿರಿ. ನೀವು ಊರ್ಮಿಳೆಯ ಭಾಗ್ಯವಾಗಿದ್ದೀರಿ ಎಂದುಕೊಳ್ಳುತ್ತಾಳೆ. ಮತ್ತೊಮ್ಮೆ ಲಕ್ಷ್ಮಣನು ಹಿಂದಿಗಿರುದಂತೆ ಭಾವಿಸಿ, ಹಿಂದಿರುಗಿ ಹೋಗಿ, ತಪೋಭ್ರಷ್ಟರಾಗಬೇಡಿ ಎಂದು ಬೇಡುತ್ತಾಳೆ. ಹೀಗೆ ಊರ್ಮಿಳೆಯು ಬಗೆ ಬಗೆಯಾಗಿ ರೋಧಿಸುವುದನ್ನು ಸಾಕೇತ ರಾಮಾಯಣದುದ್ದಕ್ಕೂ ನೋಡಬಹುದು. ಇಷ್ಟಾದರೂ ತನ್ನಿಂದಾಗಿ ತನ್ನ ಪತಿಯ ವ್ರತಭಂಗವಾಗಬಾರದೆಂಬ ಎಚ್ಚರಿಕೆ ಅವಳ ಪ್ರತಿಯೊಂದು ನಡೆಯಲ್ಲಿ ಮಾತ್ರವಲ್ಲ ಭಾವನೆಯಲ್ಲೂ ತುಂಬಿದೆ ಎನ್ನವುದು ಊರ್ಮಿಳೆಯ ಶ್ರೇಷ್ಠತೆಗೆ ಸಾಕ್ಷಿಯಾಗಿದೆ.

ಸರಯೂ ನದಿಯ ದಡದ ಮನೆಯೊಂದರಲ್ಲಿ ನಿಂತ ಊರ್ಮಿಳೆಯ ಸ್ಥಿತಿಯನ್ನು ಕವಿ ಮನಕಲಕುವಂತೆ ವರ್ಣಿಸಿದ್ದಾರೆ.

ಮಹಡಿಯ ಮೇಲೆ ಕಿಟಕಿಯ ಬಳಿ ನಿಂತಿರುವ ಊರ್ಮಿಳೆಯ ಮುಖ ಅನಂತ ವಿರಹದಿಂದ ಚಿಕ್ಕದಾಗಿರುತ್ತದೆ. ದೇಹ ಕೃಶವಾಗಿದೆ, ಕಣ್ಣುಗಳೇ ದೊಡ್ಡದಾಗಿ ಕಾಣುತ್ತಿದ್ದರೂ ಅವು ಕಾಂತಿಯುಕ್ತವಾಗಿದೆ. ಆಕೆಯ ಧೈರ್ಯವು ಕುಗ್ಗಿದ್ದರೂ ಪ್ರಿಯನ ನೆನಪಿನಿಂದ ಸ್ಮೃತಿ ಮಾತ್ರ ಜಾಗೃತವಾಗಿದೆ. ತಲೆಗೂದಲು ಜಟೆಯಂತಾಗಿದ್ದು ಪ್ರಿಯನು ಹಾದು ಬರುವ ಮಾರ್ಗವನ್ನು ಗುಡಿಸುವ ಪೊರಕೆಯಂತೆ ಕಾಣುತ್ತಿತ್ತು. ಊರ್ಮಿಳೆಯ ಗೆಳತಿ ಸಮೀಪದಲ್ಲಿಯೇ ನಿಂತಿದ್ದಾಳೆ. ಆಕೆ ಊರ್ಮಿಳೆಗಾಗಿ ಮರುಗುತ್ತಿರುವುದರಿಂದ ಅವರು ಒಂದೇ ದೇಹದ ಎರಡು ರೂಪಗಳಂತೆ ಕಾಣುತ್ತಿದ್ದಾರೆ. ಅವರಿಬ್ಬರಲ್ಲೂ ಸಾಮ್ಯವಿದೆ. ಯೋಗಿನಿಯರಿಗಿಂತ ಹೆಚ್ಚು ತೇಜಸ್ಸುಳ್ಳ ಊರ್ಮಿಳೆಯು ಹೇಳುತ್ತಾಳೆ. ಕತ್ತಲೆಯು ಒಟ್ಟಿಗೆ ಹರಡಿದಂತಿಲ್ಲದೆ ಅಲ್ಲಲ್ಲಿ ಬೇರೆ ಬೇರೆಯಾದಂತೆ ಕಾಣುತ್ತಿದೆ. ಬ್ರಹ್ಮಾಂಡವೇ ಒಡೆದು ಚೂರಾಗಿರುವಂತೆ ಕಾಣುತ್ತಿದೆ. ಅದರ ಮಧ್ಯೆ ನಿಶ್ಚಲ ಸಮಾಧಿಸ್ಥನಾಗಿರುವ ಲಕ್ಷ್ಮಣನು ಈ ಸಮಯದಲ್ಲಿ ಕಾಡಿನ ಯಾವ ಮೂಲೆಯಲ್ಲಿ ಇರಬಹುದು ಎನ್ನುತ್ತಾಳೆ. ಘೋರ ತಪಸ್ವಿನಿಯಂತೆ ಊರ್ಮಿಳೆಯ ತನುಮನಗಳೆರಡೂ ಲಕ್ಷ್ಮಣ ಧ್ಯಾನದಲ್ಲಿ ಲೀನವಾಗಿ ಹೋಗಿದೆಯೋ ಎಂಬಂತೆ ಊರ್ಮಿಳೆಯು ಪ್ರಕೃತಿಯ ಒಂದೊಂದು ಅಂಶದಲ್ಲೂ ತನ್ನ ಪತಿಯ ಛಾಯೆಯನ್ನೇ ಕಾಣುತ್ತಾಳೆ. ಸರಯೂ ನದಿಯ ಸೌಭಾಗ್ಯವನ್ನು ಕೊಂಡಾಡುತ್ತಾಳೆ.

ತನ್ನ ಬಾಲ್ಯದ ಘಟನೆಗಳನ್ನು ನೆನಪಿಸಿಕೊಂಡು ಅಂದಿನ ಒಂದೊಂದು ಸಂದರ್ಭವನ್ನೂ ತನ್ನ ಇಂದಿನ ಜೀವನಕ್ಕೆ ಹೋಲಿಸಿಕೊಳ್ಳುತ್ತಾಳೆ. ತಾನೆಂದು ಕೇಳಿದ ಪಾರ್ವತಿಯ ಕಥೆಯಲ್ಲಿ ಅವಳು ಶಿವನಿಗಾಗಿ ಮಾಡಿದ ತಪಸ್ಸು ಸಾಧನೆಗಳನ್ನು ನೆನದು ಸಾಂತ್ವನಗೊಂಡವಳಂತೆ ವರ್ತಿಸುತ್ತಾಳೆ, ತನ್ನ ಸ್ಥಿತಿಯೂ ಅದಕ್ಕಿಂತ ಭಿನ್ನವಾಗೇನೂ ಇಲ್ಲವೆಂಬಂತೆ ಭಾವಿಸುತ್ತಾಳೆ. ಸೀತಾ ಸ್ವಯಂವರನ್ನು ನೆನಪಿಸಿಕೊಳ್ಳುತ್ತಾಳೆ. ಶಿವಧನಸ್ಸನ್ನು ಎತ್ತಿ ರಾಮನು ಸೀತೆಯನ್ನು ಪಡೆದನು. ನನ್ನ ತಾಯಿ ತನ್ನ ನಾಲ್ಕೂ ಹೆಣ್ಣುಮಕ್ಕಳಿಗೂ

ಉತ್ತಮ ವರನನ್ನು ನೀಡೆಂದು ಪಾರ್ವತಿಯನ್ನು ಪ್ರಾರ್ಥಿಸುತ್ತಿದ್ದರು. ಅದರಂತೆಯೇ ಲಕ್ಷ್ಮಣನು ನನಗೆ ದೊರೆತನು. ಕೌಶಿಕನ ರೂಪದ ನಮ್ಮ ಶುಭೋದಯವು ಆಯಿತು. ರಾಮಲಕ್ಷ್ಮಣರನ್ನು ಕರೆತಂದ ಆ ಘಳಿಗೆ ನಮ್ಮ ಜೀವನದ ಅಮೃತ ಘಳಿಗೆಯಾಗಿತ್ತು. ಸರಯೂ ನದಿ, ಹೂದೋಟಗಳು ನಮ್ಮ ಪತಿಗಳನ್ನು ಪಡೆಯುವ ಮಾರ್ಗದ ರಂಗ ಸ್ಥಳವಾಯಿತೆಂದು ಭಾವಿಸುತ್ತಾಳೆ.

ಗೂಢವಾದ ರಹಸ್ಯವು ಅಗೋಚರವಾಗಿ ಕಾಣುವಂತೆ ದೂರದಲ್ಲಿ ಕಾಗೆಯು ಕೂಗುತ್ತಿತ್ತು. ನನಗೆ ಯಾವುದೋ ಮೂಲೆಯಲ್ಲಿ ಕುಳಿತುಕೊಳ್ಳುವ ಇಚ್ಛೆಯಾಗುತ್ತಿತ್ತು. ನನ್ನ ದೃಷ್ಟಿ ಬಾಹ್ಯವನ್ನು ಬಿಟ್ಟು ಅಂತರಂಗದೆಡೆಗೆ ತಿರುಗಿತ್ತು. ಮನಸ್ಸು ಯಾವುದರಿಂದಲೋ ಆಕರ್ಷಿತವಾಗಿತ್ತು. ವಿಜ್ಞೂಢಳಾಗಿದ್ದೆ ಎನ್ನುವ ಮೂಲಕ ಮುಂದಿನ ಘಟನೆಯು ನಡೆಯುವುದಕ್ಕೆ ದೊರಕಿದ ಸೂಚನೆಯನ್ನು ನೆನಪಿಸಿಕೊಳ್ಳುತ್ತಾಳೆ. ಮನೆಯಲ್ಲಿ ಶಾಂತಿ ತುಂಬಿತ್ತು. ವಿಶ್ರಾಂತಿಯು ಮಾತ್ರ ದೂರವಾಗಿತ್ತು. ವಿರಹದಿಂದ ನಾನೊಬ್ಬಳು ಮಾತ್ರ ಎಚ್ಚೆತ್ತಿದ್ದೆ. ಹಗಲುರಾತ್ರಿಗಳ ವ್ಯತ್ಯಾಸ ಕಾಣದೆ ಇದ್ದ ಊರ್ಮಿಳೆಯ ಮನಸ್ಥಿತಿ ಹೀಗಿತ್ತು. ರಾತ್ರಿಯಲ್ಲಿ ಎಚ್ಚರವಾಗಿರುತ್ತ ಹಗಲಲ್ಲಿ ಸ್ವಪ್ನವನ್ನು ಕಾಣುತ್ತಿರುವ ಅವಳ ಸ್ಥಿತಿ ಚಿಂತಾಜನಕವಾಗಿತ್ತು.

ತನ್ನ ವಿವಾಹ ಪೂರ್ವದ ದಿನಗಳನ್ನು ಸರಯೂ ನದಿಯೊಂದಿಗೆ ಬಗೆ ಬಗೆಯಾಗಿ ಹೇಳಿಕೊಳ್ಳುತ್ತಾಳೆ. ಸರಯೂ ನಿನಗೆ ನಿನ್ನ ಜೀವನದಲ್ಲಿ ಚಲನೆಯಿದೆ. ಆದರೆ ನನಗೆ ಪತಿವಿಯೋಗವೆಂಬ ವ್ಯಥೆಯೇ ಬಂಧನವಾಗಿದೆ. ಊರ್ಮಿಳೆಯ ಕಣ್ಣುಗಳಿಂದ ನೀರು ಟಪಟಪನೆ ಉದುರುತ್ತಿದ್ದವು. ಗೆಳತಿಯಾದ ಸುಲಕ್ಷಣೆಯು ಮೆಲ್ಲಗೆ ಗೆಳತಿಯನ್ನು ತನ್ನ ತೊಡೆಯ ಮೇಲೆ ಒರಗಿಸಿಕೊಳ್ಳುತ್ತಾಳೆ. ದುಃಖಿತಳಾದ ಊರ್ಮಿಳೆಯು ಹಾಗೆಯೇ ಮಲಗಿ ಕನಸಿನಲ್ಲಿ ನಗುತ್ತಿದ್ದಳು. ಊರ್ಮಿಳೆಯ ಈ ಸ್ಥಿತಿಯನ್ನು ಕಂಡು ಗೆಳತಿಯು ಅಳುತ್ತಿದ್ದಳು.

ಹೀಗೆ ಸಾಕೇತ ರಾಮಾಯಣದಲ್ಲಿ ಊರ್ಮಿಳೆಯ ವಿರಹ ವ್ಯಥೆಯು ವೇದನೆಯು ನದಿಯಾಗಿ ಹರಿದು ಲಕ್ಷ್ಮಣ ಸಾಗರವನ್ನು ಸೇರಲು ತವಕಿಸುವಂತೆ ಕಾಣುತ್ತದೆ. ಊರ್ಮಿಳೆಯ ಮನೋವ್ಯಥೆಯನ್ನು ಎಷ್ಟು ಬಗೆಯಲ್ಲಿ ವರ್ಣಿಸಿದರೂ ಕವಿಗೆ ತೃಪ್ತಿಯಿಲ್ಲ. ರಾಮಾಯಣದ ಆರಂಭಿಕ ಘಟನೆಗಳನ್ನೆಲ್ಲ ಕವಿಯು ಊರ್ಮಿಳೆಯ ಮಾತುಗಳಲ್ಲೇ ಹೇಳಿಸುತ್ತಾನೆ.

ಭರತ ಮಾಂಡವಿಯರ ಸಂಭಾಷಣೆಯಲ್ಲಿ ಊರ್ಮಿಳೆಯ ಬಗ್ಗೆ ಮಾಂಡವಿಯು ಹೇಳುವ ಮಾತು 'ಅಕ್ಕನ (ಊರ್ಮಿಳೆ) ಕಣ್ಣುಗಳಿಂದ ಹರಿಯುತ್ತಿದ್ದ ಕಂಬನಿಯು ಬತ್ತಿಹೋಗಿದೆ. ಏನಾದರೂ ಹೇಳುವುದೇನು, ಕೇಳಲು ಆಗದಷ್ಟು ನಿಶ್ಯಕ್ತಳಾಗಿದ್ದಾಳೆ. ಹೆಚ್ಚು ಹೊತ್ತು ಮಾತನಾಡಿಸಿದರೆ ದೀನ ಭಾವದಿಂದ ತಂಗೀ, ಈ ಒಂದು ದಿನ ಏನು ದೊಡ್ಡದೇ? ಎಷ್ಟು ವರ್ಷಗಳಿಂದಲೂ ಪ್ರಿಯತಮನನ್ನು ನಿರೀಕ್ಷಿಸುತ್ತಿರುವ ಈ ಕಣ್ಣುಗಳು ಇನ್ನೂ ಇವೆ' ಎನ್ನುತ್ತಾಳೆ.

ಮುಂದೆ ಶತೃಘ್ನನು ತನ್ನ ಸೈನಿಕರಿಗೆ 'ಶತ್ರುವಿನ ಸ್ವರ್ಣಲಂಕೆಯನ್ನು ಲೂಟಿ ಮಾಡಿರಿ' ಎಂದೊಡನೆಯೇ ಕೂಡದು ಕೂಡದು ಎನ್ನುವ ಧ್ವನಿ ಕೇಳಿಬಂತು.

ವೀಣೆಯನ್ನು ನುಡಿಸುವಾಗ ಬೆರಳುಗಳು ಮೇಲಿನಿಂದ ಇಳಿದು ಬರುವಂತೆ ಸತಿ ಊರ್ಮಿಳೆಯು ತನ್ನ ಗೃಹದಿಂದ ಇಳಿಯುತ್ತಾ, ಓಡಿ ಬಂದಳು. ರಾಗದ ಜೊತೆಗೆ ತಾಳವೂ ಇರುವಂತೆ, ತನ್ನ ಸಖಿಯನ್ನು ಎಳೆದು ತಂದಳು. ಲಕ್ಷ್ಮಣನ ರಾಣಿಯಾದ ಊರ್ಮಿಳೆಯು ಶತ್ರುಘ್ನನ ಪಕ್ಕದಲ್ಲಿ ನಿಂತಳು. ಕಾರ್ತಿಕೇಯನ ಪಕ್ಕದಲ್ಲಿ ನಿಂತ ಭವಾನಿಯಂತೆ ಕಾಣುತ್ತಿದ್ದಳು. ಜಟೆಯಂತೆ ಹೆಣೆದುಕೊಂಡು ತಲೆಗೂದಲು ತಡೆಯಿಲ್ಲದೆ ಇಳಿದುಬಿದ್ದಿತು.

ಸೀತಾರಾಮಲಕ್ಷ್ಮಣರು ಅಯೋಧ್ಯೆಗೆ ಹಿಂದಿರುಗಿದುದನ್ನು ಕಂಡು ಊರ್ಮಿಳೆಯು ಉಲ್ಲಸಿತಳಾದಳು. ಅವಳ ಸಖಿಯು 'ಇಷ್ಟು ದಿನ ಈ ಉಲ್ಲಾಸ ಎಲ್ಲಿ ಹೋಗಿತ್ತು? ಬಾ ನಿನ್ನನ್ನು ಸ್ವಲ್ಪ ಸಿಂಗರಿಸುತ್ತೇನೆ' ಎನ್ನುತ್ತಾಳೆ ಅದಕ್ಕೆ ಊರ್ಮಿಳೆಯು,

'ಸಖೀ ನನಗೆ ಶೃಂಗಾರವೇ? ಅದು ನನ್ನನ್ನು ಸುಂದರಗೊಳಿಸಬಲ್ಲುದೇ? ಅವರು ನನ್ನನ್ನು ವಸ್ತ್ರಗಳಿಂದ ಅಲಂಕೃತಳಾದಾಗ ಮಾತ್ರ ಮೆಚ್ಚುವರೇ? ನಾನು ಚಿತ್ರಿಸಿರುವ 'ಉರಿದ ಬತ್ತಿ'ಯ ಕುಡಿಯನ್ನು ಚಾಚಿ, ಉರಿ ಮಾಡಲೆಳಸುವೆಯಾ? ಇಷ್ಟು ವರ್ಷಗಳ ವಿರಹಾಗ್ನಿಯಲ್ಲಿ ನನ್ನ ರೂಪ ಯೌವ್ವನಗಳು ದಗ್ಧವಾಗಿ ಹೋಗಿವೆ. ವಸ್ತ್ರಾಲಂಕಾರದಿಂದ ನಷ್ಟವಾದ ರೂಪ ಯೌವನಗಳನ್ನು ತರಲು ಸಾಧ್ಯವೇ? ಬೇಡ, ಬೇಡ, ನನ್ನ ಪ್ರಾಣೇಶ ಕೃತಕಾಲಂಕಾರದಿಂದ ಮೋಸ ಹೋಗುವುದು ಬೇಡ. ನಾನು ಈಗ ಯಾವ ರೂಪದಲ್ಲಿರುವೇನೋ ಅವರು ಹಾಗೆಯೇ ನನ್ನನ್ನು ಪಡೆಯಲಿ. ಕೃತಕ ಶೃಂಗಾರದಿಂದ ಆಕರ್ಷಿಸಲು ನಾನು ಶೂರ್ಪನಖಿಯಲ್ಲವಲ್ಲ... ಅಯ್ಯೋ! ನೀನೇಕೆ ಅಳುತ್ತಿರುವೆ? ಹೃದಯದ ಪ್ರೀತಿಯು ಹೃದಯವನ್ನು ಆಕರ್ಷಿಸುತ್ತದೆ. ಬಾಹ್ಯ ಆಡಂಬರದಿಂದ ಏನೂ ಪ್ರಯೋಜನವಿಲ್ಲ' ವೇಷದಿಂದ ಅಲಂಕಾರದಿಂದ ನಾನು ಆ ಯೌವನದ ಉಲ್ಲಾಸವನ್ನು ಎಲ್ಲಿಂದ ತರಲಿ?

"ಗೆಳತಿ ಇಷ್ಟು ದಿನ ನೀನು ಚಿಪ್ಪಿನಂತಾಗಿ, ಪ್ರೀತಿಯ ಸ್ವಾತಿ ನಕ್ಷತ್ರದ ನೀರನ್ನು ಕುಡಿದಿದ್ದೀಯೆ. ರಾಜಹಂಸಿನಿ, ರಾಣೀ, ಈಗ ನೀನು ಆ ಮುತ್ತುಗಳನ್ನು ಆರಿಸಿಕೋ" 'ಇಷ್ಟು ದಿನ ವಿರಹದ ದುಃಖದಲ್ಲಿಯೇ ಕಳೆದೆ, ಈಗ ಮಿಲನದ ಸಮಯದಲ್ಲಿಯೂ ಅಳುತ್ತೇನೆ. ಈ ಕಂಬನಿಯಿಂದ ಪ್ರಿಯನ ಪಾದಧೂಳಿಯನ್ನು ತೊಳೆಯುತ್ತೇನೆ. ಇದಕ್ಕಿಂತಲೂ ಹೆಚ್ಚಿನದೇನೂ ಬೇಡ, ಗೆಳತಿ, ಈ ಊರ್ಮಿಳೆಯು ಅವರ ರಾಣಿಯಾಗಿದ್ದಳು. ಇದು ಬಹಳ ಹಿಂದಿನ ಮಾತು. ಈಗ ನಾನು ಆ ಸ್ವಾಮಿಯ ಸೇವಕಿಯಾಗಿರಲು ಇಚ್ಛಿಸುತ್ತೇನೆ. ರಾಣಿಯಾಗಿ ಆಡಳಿತ ನಡೆಸುವ ಇಚ್ಛೆ ಇಲ್ಲ, ದಾಸಿಯಾಗಿ ಸೇವೆ ಮಾಡಿಕೊಂಡಿರುವ ಬಯಕೆಯಾಗಿದೆ.

ಗೆಳತಿ, ಈ ಊರ್ಮಿಳೆಯು ಯವತಿಯೋ ಅಥವಾ ಬಾಲಕಿಯೋ? ಶಾರೀರಿಕವಾಗಿ ಅವಳು ಹೇಗೆ ಇರಬಹುದು. ಆದರೆ ಮಾನಸಿಕವಾಗಿ ಹೇಗಿದ್ದಾಳೆ ಎಂಬುದೂ ತಿಳಿಯದು. ನೀನೇ ಹೇಳು, ನನ್ನ ಕನಸು ನನಸಾಗಿರುವುದನ್ನು ಹಾಗೆಯೇ ನೋಡಲೇ? ಅಥವಾ ವೇಷಭೂಷಣಗಳಿಂದ ಅಲಂಕೃತಳಾಗಿ ನಾನು ಅವರಿಗೆ ಕಾಣಿಸಿಕೊಳ್ಳಲೇ? ಸಖೀ, ಈಗ ನನಗೆ ಈ ಶುಭ್ರವಾದ ಸೀರೆಯೇ ಸಾಕು. ನನ್ನ ನಾಚಿಕೆಯನ್ನು ಅವರಿಗೇ ವಹಿಸಿದ್ದೇನೆ? ವ್ಯರ್ಥವಾಗಿ ಚಿಂತೆಯನ್ನೇಕೆ ನೀನು ಮಾಡುತ್ತಿರುವೆ? ಸಖೀ, ಹರ್ಷಾತೀರೇಕದಿಂದ ನನ್ನ ಹೃದಯ ತುಂಬಿದೆ. ಸ್ವಲ್ಪ ನನ್ನನ್ನು ಆಲಿಂಗಿಸು ಬಾ. ಸಂಧ್ಯಾಕಾಲದ ಈ ಕೆಂಪು ಎಷ್ಟು ಕಠೋರವಾಗಿದೆ. ನೋಡು! ಪತಿಯೊಡನೆ ಸೇರುವೆನೆಂದು ಹೆಮ್ಮೆ ಪಡಲೇ? ಹೆಮ್ಮೆಯ ದಿನಗಳು ಕಳೆದು ಹೋಗಿವೆ. ಆದರೂ ನನ್ನ ಮನಸ್ಸಿನ ಇಚ್ಛೆಗಳೆಲ್ಲವೂ ಪೂರ್ಣವಾಗಿದೆ.

ಶೇಫಾಲೀ ವೃಕ್ಷದ ಹತ್ತಿರ ಕುಂಜದ ಬಳಿ ಇರುವ ಶಿಲೆಯ ಆಸನದ ಮೇಲೆ ಶೇಫಾಲೀ ಹೂಗಳು ಬಿದ್ದಿವೆ. ಅವುಗಳಲ್ಲಿ ಕೆಲವನ್ನು ಆಯ್ದು ತಾ. ವನವಾಸದಲ್ಲಿದ್ದವರಿಗೆ ಪುಷ್ಪಗಳ ಆಕರ್ಷಣೆಯೇ ಶ್ರೇಷ್ಠವಾದದ್ದು "ಪ್ರಿಯೇ, ಈ ದುಂಬಿಯು ಆ ಹೂವುಗಳನ್ನು ಎಂದೋ ಪಡೆದುಬಿಟ್ಟಿದೆ" ಎನ್ನುತ್ತಾ ಲಕ್ಷ್ಮಣನು ಅಲ್ಲಿಗೆ ಬಂದನು. ಬೆಚ್ಚಿ ಬಿದ್ದು ಊರ್ಮಿಳೆ ಗಂಡನನ್ನು ನೋಡಿದಳು. ಅಷ್ಟರಲ್ಲಿ ಅವಳ ಗೆಳತಿ ಎಲ್ಲಿಯೋ ಮಾಯವಾಗಿದ್ದಳು. ಊರ್ಮಿಳೆ ನಮಸ್ಕರಿಸಲು ಬಾಗಿದಳು. ಅಷ್ಟರಲ್ಲಿ ಅವಳ ಪರಿಯು ತೋಳುಗಳಲ್ಲಿ ಸೇರಿಹೋಗಿದ್ದಳು.

ಮುಂದೆ ತನ್ನಲ್ಲಿ ಮೊದಲಿನ ಯೌವನವಿಲ್ಲವೆಂದು ತಿಳಿದು ಊರ್ಮಿಳೆಯು 'ಆ ಆನಂದದ ಹಗಲು ರಾತ್ರಿಗಳಾಗಲೀ ಸಂಜೆ-ಬೆಳಗ್ಗೆಗಳಾಗಲೀ ಎಲ್ಲಿವೆ? ನಾವು ನಕ್ಕು ನಲಿದು ಆಡುತ್ತಿದ್ದ ಆ ಆಟ ಈಗ ಕಳೆದು ಹೋಗಿದೆ. ಪ್ರಿಯನೇ, ನಮ್ಮ ಜೀವನದ ಆ ಬೆಳೆಯುತ್ತಿದ್ದ ಬಳ್ಳಿ ಈಗ ಎಲ್ಲಿದೆ? ಎನ್ನುತ್ತಾಳೆ. ಅದಕ್ಕೆ ಲಕ್ಷ್ಮಣನು 'ಪ್ರಿಯೆ ಯೌವನವು ಮಳೆಗಾಲದಂತೆ. ಅದು ಕಳೆದುಹೋಯಿತು. ಈಗ ನಮಗೆ ದೊರಕಿರುವುದು ಶರತ್‌ಕಾಲದ ಶುದ್ಧವಾದ ಗಂಭೀರವಾದ ನೀರಿನ ಝುರಿಯಂತಿರುವ ಪ್ರೌಢಾವಸ್ಥೆ.

ಕೇಳು "ನಮಗೆ ಯಾವುದು ಆರಾಧ್ಯ ವಸ್ತುವೋ ಅದು ಯಾವಾಗಲೂ ನಮ್ಮ ಬಳಿಯೇ ಇರುತ್ತದೆ. ಬಾ, ನಾವು ಜೀವನದಲ್ಲಿ ಯಾವುದನ್ನು ಸಾಧಿಸಲು ಸಾಧ್ಯವಿದೆಯೋ ಅದನ್ನು ಸಾಧಿಸೋಣ, ಅದೃಷ್ಟದ ವಿಷಯವನ್ನು ಅದೃಷ್ಟವೇ ತಿಳಿಯಬಲ್ಲದು. ಈಗ ನಮ್ಮ ಎದುರಿನಲ್ಲಿ ಏನಿದೆಯೋ ಅದನ್ನೇ ಏಕೆ ಗೌರವಿಸಬಾರದು? ನಮ್ಮ ಎದುರಿನಲ್ಲೇ ನಮ್ಮ ಪ್ರೇಮ ಪ್ರವಾಹವು ಹರಿಯಲಿ, ಯಾವುದು ಆದರ್ಶವೋ ಅದೇ ನಮಗೆ ಭಗವತ್ ರೂಪ' ಎನ್ನುತ್ತಾನೆ.

**ಪಂಪ ರಾಮಾಯಣ ಮತ್ತು ತೊರವೆ ರಾಮಾಯಣ**

ಪಂಪ ರಾಮಾಯಣ ಮತ್ತು ತೊರವೆ ರಾಮಾಯಣದಲ್ಲಿ ಊರ್ಮಿಳೆಯ ಪ್ರಸ್ತಾಪವಿಲ್ಲ. ಇನ್ನು ಶ್ರೀರಾಮಾಯಣ ದರ್ಶನದಲ್ಲಿ ಊರ್ಮಿಳೆಗೆ ವಿಶೇಷ ಸ್ಥಾನವನ್ನು ನೀಡಲಾಗಿದೆ.

**೪.೪ ಶ್ರೀ ರಾಮಾಯಣ ದರ್ಶನಂದಲ್ಲಿ ಊರ್ಮಿಳೆಯ ಪಾತ್ರದ ನಿರ್ವಚನ**

ರವೀಂದ್ರರಿಂದ ಪ್ರೇರಣೆ ಪಡೆದವರಲ್ಲಿ ಕುವೆಂಪು ಕೂಡ ಒಬ್ಬರು. ಮಹಾಕಾವ್ಯಗಳ ರಚನೆ ಇನ್ನು ಮುಂದೆ ಸಾಧ್ಯವಿಲ್ಲ ಎಂಬ ಅಭಿಪ್ರಾಯ ಚಾಲ್ತಿಯಲ್ಲಿದ್ದ ಸಂದರ್ಭದಲ್ಲಿ ಕುವೆಂಪು ಅವರು ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ರಚಿಸಿ ಅಲ್ಲಿ ಪಾತ್ರಗಳಿಗೆ ನ್ಯಾಯೋಚಿತವಾದ ಸ್ಥಾನಮಾನಗಳನ್ನು ನೀಡಲು ಪ್ರಯತ್ನಿಸಿದರು. ವಾಲ್ಮೀಕಿಗೆ ನಿಷ್ಠೆಯನ್ನು ತೋರುತ್ತಲೆ, ಅವರ ಕವಿತ್ವಕ್ಕೆ ಬೆರಗಾಗುತ್ತಲೆ ಕಥಾ ಪೋಷಣೆಗೆ ಪೂರಕವಲ್ಲದ ಪಾತ್ರಗಳನ್ನು ಏನು ವಾಲ್ಮೀಕಿ ಉಪೇಕ್ಷಿಸಿದ್ದರೊ ಅವಕ್ಕೆ ಸಾಧ್ಯವಾದಷ್ಟು ಅವಕಾಶವನ್ನು ಕಲ್ಪಿಸುವ ಪ್ರಯತ್ನವನ್ನು ಕುವೆಂಪು ಅವರು ಮಾಡಿದರು. ಅವರೇ ಹೇಳಿದಂತೆ ಅಜ್ಜನ ಹೆಗಲ ಮೇಲೆ ಕುಳಿತ ಮೊಮ್ಮಗನಂತೆ ತಮ್ಮ ದೃಷ್ಟಿಯನ್ನು ಬಹುದೂರ ಹರಿಸಿದ್ದಾರೆ. ಕುವೆಂಪು ಅವರ ಊರ್ಮಿಳೆ ಗುಪ್ತರ ಊರ್ಮಿಳೆಯಂತೆ ವಿರಹಿಣಿಯಲ್ಲ, ತಪಸ್ವಿನೀ. ಈ ತಪಸ್ವಿನಿ ಅಶಂಕೆ, ನಿರೀಕ್ಷಣೆ, ಭೀತಿ, ಖಿನ್ನತೆ ಹಾಗೂ ಹತಾಶೆಗಳೆಂಬ ಪಂಚಾಗ್ನಿಗಳ ಮಧ್ಯೆ ತಪಸ್ಸನ್ನಾಚರಿಸುತ್ತಿದ್ದಾಳೆ. ರಾಮ–ಲಕ್ಷ್ಮಣರ ವನಗಮನದಿಂದ ಅವರು ಹಿಂತಿರುಗಿ ಬರುವವರೆಗೂ ಸರಯೂ ನದಿಯ ತೀರದಲ್ಲಿ ಕುಟೀರವೊಂದನ್ನು ನಿರ್ಮಿಸಿಕೊಂಡು ಅವರ ಶ್ರೇಯಸ್ಸನ್ನು ಸದಾ ಬಯಸುತ್ತಿರುವ ಸಾಧ್ವಿಶಿರೋಮಣಿ ಇವಳು. ಅವಳ ಸ್ಥಿತಿಗತಿಯನ್ನು ಮನಸ್ಥಿತಿಯನ್ನು ವಿವರಿಸುವ ಈ ಪದ್ಯವನ್ನು ಗಮನಿಸೋಣ,

ಮಾತಾ ಪಿತೃಗಳ ಕಣ್ಮಣಿಯಾದ ಊರ್ಮಿಳೆ ರಾಜಕುವರಿಯಾಗಿ ಮೆರೆಯುವ ಬದಲು ತಪಸ್ವಿನಿಯಾಗಿ ಪತಿಯ ಗೃಹದಲ್ಲಿ ಕಳೆಯುತ್ತಾಳೆ. ಕುವೆಂಪು ಅವರೂ ಗುಪ್ತರ ಹಾಗೆ ಊರ್ಮಿಳೆ ಲಕ್ಷ್ಮಣರ ಸರಸಪೂರ್ಣ ಜೀವನದ ಚಿತ್ರವನ್ನು ಕಲ್ಪಿಸಿಕೊಂಡಿದ್ದಾರೆ. ಅವರ ನಡುವೆ ವಿರಸವೇ ಇಲ್ಲ. ರಾಮಸೀತೆಯರಂತೆ ಇವರೀರ್ವರೂ ಸುಖಿಗಳು. ಒಮ್ಮೆ ಊರ್ಮಿಳೆಯ ಕನವರಿಕೆಯಲ್ಲೇ ಇದ್ದ ರಾಮನಿಗೆ ಲಕ್ಷ್ಮಣನನ್ನು ಕರೆಯುತ್ತಿರುವಂತೆ ಕನಸು ಬೀಳುತ್ತದೆ. ತಕ್ಷಣವೇ ರಾಮ ಲಕ್ಷ್ಮಣನಿಗೆ ನಡುರಾತ್ರಿಯಲ್ಲಿ ಎಚ್ಚರಿಸಿ ಬೆಳಕಾದ ಕೂಡಲೇ ಅಯೋಧ್ಯೆಗೆ ತೆರಳುವಂತೆ ಸೂಚಿಸುತ್ತಾನೆ. ಇಲ್ಲಿ ಸೀತೆ ತನ್ನ ಅಂತರಂಗವನ್ನರುಹತ್ತಾಳೆ. ಅಕ್ಕನ ದುಃಖದಿಂದ ದುಃಖಗೊಂಡು ಸಂತೈಸುವ ಊರ್ಮಿಳೆಯನ್ನು ಕಾಣುತ್ತೇವೆ. ಊರ್ಮಿಳೆಯು ದೃಢ ನಿರ್ಧಾರವನ್ನು ತಳೆದು ಸಂಯವವನ್ನು ಸೂಚಿಸುವ ಪ್ರತಿಮೆಯಾಗಿ ಕಲ್ಪವಸಿಯಾಗಿ, ಸೀತಾರಾಮರಿಗೇ ಗುರು ಸ್ವರೂಪಳಾಗಿ, ಎಚ್ಚರಿಕೆಯಾಗಿ ಪರಿಣಮಿಸಿ ಚಾರಿತ್ರ್ಯದ ಉನ್ನತಿಯ ಶಿಖರವನ್ನೇರಿದ್ದಾಳೆ. ಇದಕ್ಕಿಂತ ಹೆಚ್ಚಿನ ಪ್ರಶಂಸೆಯನ್ನು ಬೇರ್‍ಯಾವ ಕವಿಯೂ ನೀಡಲು ಸಾಧ್ಯವಿಲ್ಲ. ಹದಿನಾಲ್ಕು ವರ್ಷಗಳ ವನವಾಸ ಮುಗಿಸಿ

ಅಯೋಧ್ಯೆಗೆ ಹಿಂತಿರುಗಿದ ರಾಮಲಕ್ಷ್ಮಣ ಹಾಗೂ ಸೀತೆಯನ್ನು ಕಾಣಲು ಊರ್ಮಿಳೆ ತನ್ನ ತಪಃಕ್ಷೇತ್ರವನ್ನು ತೊರೆದು ಬರುವಾಗಲೂ ಕಂಡುಬರುವ ಪ್ರಕೃತಿಯ ವರ್ಣನೆ, ಊರ್ಮಿಳೆಯ ಸ್ವಭಾವ ವರ್ಣನೆ, ಆ ತಪೋಭೂಮಿಯ ಮಹಿಮಾ ವರ್ಣನೆ ಅದ್ಭುತವಾಗಿ ಮೂಡಿಬಂದಿದೆ. ಶುಭ್ರವಸನವನ್ನು ಧರಿಸುವ ಶುಭ್ರ ಚೇತನೆ ಊರ್ಮಿಳಾದೇವಿ. ಅವಳ ಜೀವನದಲ್ಲಿ ಮತ್ತೆ ವಸಂತಾಗಮನವಾಗಿದೆ. ಈ ಸಂದರ್ಭದಲ್ಲಿ ತಾನು ಪಟ್ಟ ಕಷ್ಟ ಕೋಟಲೆಗಳನ್ನು ಏಕೆ ನೆನೆಯಬೇಕು. ಕುವೆಂಪು ಅವರ ಊರ್ಮಿಳೆಯ ಈ ಪರಿಜ್ಞಾನ ಓದುಗರಲ್ಲಿ ಅಚ್ಚರಿ ಮೂಡಿಸುತ್ತದೆ. ಕಷ್ಟಗಳನ್ನೆಲ್ಲಾ ತಾನು ನುಂಗಿ ಸುಖವನ್ನು ಮಾತ್ರ ಇತರರಿಗೆ ಉಣಬಡಿಸಿದ ಊರ್ಮಿಳೆ ತ್ಯಾಗಮಯಿಯಾಗಿ ಕಂಡುಬರುತ್ತಾಳೆ.

**೪.೫ ಊರ್ಮಿಳೆ ಪಾತ್ರದ ವಿಶ್ಲೇಷಣೆ**

ರಾಮಾಯಣದ ಪ್ರಮುಖ ಪಾತ್ರ ಸೀತೆಯ ಸ್ಥಿತಿಯೇ ಹಾಗಾದರೆ ರಾಮನ ದಾಸ ಲಕ್ಷ್ಮಣನ ಸತಿಯ ಸ್ಥಿತಿ ಮತ್ತಷ್ಟು ಘೋರವೇ ಸರಿ. ಲಕ್ಷ್ಮಣನ ತಾಯಿಯೇ ಲಕ್ಷ್ಮಣನಿಗೆ ನಿನಗೆ ಅಗ್ರಜನಾದ ರಾಮನೇ ತಂದೆ ಅತ್ತಿಗೆಯಾದ ಸೀತೆಯೆ ತಾಯಿ, ಅವರ ಸೇವೆಯೇ ಪರಮಧರ್ಮ, ಅದರಲ್ಲೇ ನಿನ್ನ ಸಾರ್ಥಕತೆಯನ್ನು ಕಂಡುಕೋ ಎಂದು ಹೇಳಿದ ಮೇಲೆ ಊರ್ಮಿಳೆಯ ಬಗ್ಗೆ ಚಿಂತಿಸುವವರ್‍ಯಾರು. ಹಠಮಾಡಿ ವನವಾಸಕ್ಕೆ ಸಿದ್ಧಳಾದ ಸೀತೆಯ ಮನಸ್ಥಿತಿ, ಸಂದರ್ಭ ಊರ್ಮಿಳೆಗೇಕೆ ಒದಗಿಬರಲಿಲ್ಲ. ಸೀತೆಗೆ ಕಷ್ಟವಾಗದ ವನವಾಸ ಊರ್ಮಿಳೆಗೆ ಕಷ್ಟವಾಗುತ್ತಿತ್ತೆ. ರಾಮ ಸೀತೆಗೆ ಬೇಕಾಗಿದ್ದು ಅವರ ದಾರಿಯನ್ನು ಸುಗಮಗೊಳಿಸುವ, ಕುಟೀರವನ್ನು ನಿರ್ಮಿಸುವ, ಆಹಾರ ಪಾನೀಯಗಳನ್ನು ಒದಗಿಸುವ, ಹಗಲು-ರಾತ್ರಿ ಕಾವಲು ಕಾಯುವ ಸೇವಕನೇ ಹೊರತು, ಅವರಂತೆ ಕಾಡಿನಲ್ಲಿ ಸಂಸಾರ ನಡೆಸುವ ಸಹೋದರನಲ್ಲ. ವನಗಮನದ ಸಂದರ್ಭದಲ್ಲಿ ರಾಮ ಈ ಬಗ್ಗೆ ಮೌನವಾಗೇ ಇರುತ್ತಾನೆ. ಮಾನವೀಯತೆ ಮರೆದ ಕವಿ ಕುವೆಂಪು ಅವರು ರಾಮ ಊರ್ಮಿಳೆಯ ಬಗ್ಗೆ ಕನಸು ಕಂಡಂತೆ ವರ್ಣಿಸಿ ರಾಮಸ್ಪಂದನವನ್ನು ಹೇಳ ಹೊರಟಿದ್ದಾರೆ,

> **ತಮ್ಮ, ಪಿಂತಿರುಗಿಯೋಧ್ಯೆಗೀ**
> **ರಾತ್ರಿಯಂ ಕಳೆದು, ಊರ್ಮಿಳೆ ನಿನ್ನನೆಯೆ ಕರೆದು**
> **ಗೋಳಾಡುತಿರ್ಪಂತೆ ಕಂಡೆ ಕನಸಂ.**

ಕೆಲವು ರಾಮಕಥೆಗಳಲ್ಲಿ ಲಕ್ಷ್ಮಣ ಊರ್ಮಿಳೆಗೆ ತಾನು ರಾಮನೊಂದಿಗೆ ಕಾಡಿಗೆ ಹೋಗುವ ಸಂಗತಿಯನ್ನು ಹೇಳುವುದಿಲ್ಲ. ಅವಳನ್ನು ನೇರವಾಗಿ ನೋಡುವ ಧೈರ್ಯವೇ ಅವನಿಗಿರುವುದಿಲ್ಲ. ಅವನಿಗೆ ಅಪರಾಧಿ ಪ್ರಜ್ಞೆ ಕಾಡುತ್ತಿರುತ್ತದೆ. ತನ್ನ ಧರ್ಮಪತ್ನಿಗೆ ಅನ್ಯಾಯ ಮಾಡುತ್ತಿದ್ದೇನೆಂಬ ಭಾವ ಅವನ ಹೃದಯದಲ್ಲಿರುತ್ತದೆ. ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಕುರಿತು ವಿಮರ್ಶಾತ್ಮಕ

ಅಧ್ಯಯನವನ್ನು ಕೈಗೊಂಡ ಡಾ. ಎಚ್.ಜಿ. ಲಕ್ಕಪ್ಪಗೌಡ ಅವರ ಮಾತುಗಳು ನನ್ನ ಅಭಿಪ್ರಾಯವನ್ನು ಸಮರ್ಥಿಸುತ್ತವೆ, "ಹುಟ್ಟಿದಂದಿನಿಂದ ಜೀವಾತ್ಮದಂತೆ ಬೆರತುಕೊಂಡಿದ್ದ ರಾಮನೊಡನೆ ಲಕ್ಷ್ಮಣ ಅರಣ್ಯಕ್ಕೆ ತೆರಳಿದ್ದು ಸರಿ, ಆದರೆ ತನ್ನನ್ನೇ ನಂಬಿಕೊಂಡಿರುವ ಮತ್ತೊಂದು ಜೀವ ಊರ್ಮಿಳೆಯ ಬಗ್ಗೆ ಅವನ ಕರ್ತವ್ಯವೇನೂ ಇಲ್ಲವೆ? ಲಕ್ಷ್ಮಣನಿಗೆ ಶ್ರೀರಾಮ ಅನಿವಾರ್ಯವಾಗಿದ್ದಂತೆ ಊರ್ಮಿಳೆಗೆ ಲಕ್ಷ್ಮಣ ಅನಿವಾರ್ಯವಾಗಿರಲಿಲ್ಲವೇ? ಶ್ರೀರಾಮನಾದರೂ ತಮ್ಮನ ಪ್ರಥಮ ಕರ್ತವ್ಯವನ್ನು ಜ್ಞಾಪಿಸಬಾರದಿತ್ತೆ? ಲಕ್ಷ್ಮಣನಂಥ ಸೇವಾ ದುರಂಧರನ ಸ್ವಾರ್ಥತ್ಯಾಗಿಯ ಕೈಹಿಡಿದ ಕಾಂತೆ ಊರ್ಮಿಳೆ ಸೇವಾತತ್ಪರೆಯಲ್ಲಿ ಸ್ವಾರ್ಥತ್ಯಾಗದಲ್ಲಿ ಲಕ್ಷ್ಮಣನಿಗೆ ಎರಡನೆಯವಳಲ್ಲ. ಅಂತೆಯೇ ಅಂಥ ಪರಮ ಪತಿವ್ರತಾ ಕಾಂತೆಯನ್ನು ಉಪೇಕ್ಷಿಸುವಂಥ ಅಕ್ಷಮ್ಯ ಅಪರಾಧವನ್ನು ಲಕ್ಷ್ಮಣ ಮಾಡಲಾರ" ಎಂದು ಕುವೆಂಪು ಅವರ ಪದ್ಯವನ್ನು ಉಲ್ಲೇಖಿಸುತ್ತಾರೆ.[೧]

**ಭ್ರಾತೃಭಕ್ತಿಯ ಸಂಭ್ರಮಾಧಿಕ್ಯದೊಳ್**
**ಪ್ರೀತಿಯಂ ಬೀಳ್ಕೊಳ್ವುದುಂ ತಾಂ ಮರೆಯನಲ್ತೆ?**
**ಮರೆಯನೆಂದುಂ ಸುಮಿತ್ರಾತ್ಮಜಂ!**

ಕುವೆಂಪು ಅವರ ಮನಸ್ಸು ಕೂಡ ಲಕ್ಷ್ಮಣ ಊರ್ಮಿಳೆಯನ್ನು ಉಪೇಕ್ಷಿಸಿದ್ದು ಸರಿಯಲ್ಲ ಎಂದು ಹೇಳುತ್ತದೆ. ಉಪೇಕ್ಷೆ ಅಕ್ಷಮ್ಯ ಅಪರಾಧ ಎಂಬ ಮಾತನ್ನಾಡುತ್ತಾರೆ. ವಾಲ್ಮೀಕಿ ಈ ಬಗ್ಗೆ ಯಾವುದೇ ಪ್ರಸ್ತಾಪವನ್ನು ಮಾಡುವುದೇ ಇಲ್ಲ. ಲಕ್ಷ್ಮಣನೊಬ್ಬ ದಾಸೀ ಪುತ್ರ ಅವನು ಪುರುಷೋತ್ತಮ ರಾಮನನ್ನು ಅನುಸರಿಸುವುದಷ್ಟೇ ಅವನ ಕರ್ತವ್ಯ. ವೈಯಕ್ತಿಕ ಆಸೆ ಆಕಾಂಕ್ಷೆಗಳೆಲ್ಲ ಇಲ್ಲಿ ಗೌಣ ಎಂಬ ಅಭಿಪ್ರಾಯಕ್ಕೆ ಇಲ್ಲಿ ನಾವು ಬರಬಹುದಾಗಿದೆ. ದಶರಥ ಹಾಗೂ ಕೌಸಲ್ಯೆಗೆ ಅವನ ಮಗನಷ್ಟೇ ಮುಖ್ಯ. ಮಂಥರೆಯ ಸ್ವಾಮಿ ನಿಷ್ಠೆಯ ಅಭಿವ್ಯಕ್ತಿಯಿಂದಾಗಿ ಕೈಕೇಯಿ ತನ್ನ ಹಕ್ಕನ್ನು ಸ್ಥಾಪಿಸಲು ಮುಂದಾಗುತ್ತಾಳೆ. ಸೌಮಿತ್ರೆಯಂತೂ ಧ್ವನಿ ಇಲ್ಲದ ದಶರಥನ ರಾಣಿಯಂತೆ ಕೌಸಲ್ಯೆಯ ಹಿತವನ್ನಷ್ಟೇ ಬಯಸುವ ದಾಸಿಯಂತಿರುತ್ತಾಳೆ. ಲಕ್ಷ್ಮಣನ ವಿವಾಹವಾದರೂ ಒಂದು ಆಕಸ್ಮಿಕ ಘಟನೆ. ಅನಾಯಾಸವಾಗಿ ಊರ್ಮಿಳೆಯ ವಿವಾಹ ಲಕ್ಷ್ಮಣನೊಂದಿಗೆ ನಡೆದುಹೋಗುತ್ತದೆ.

**ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ।**
**ಯತ್ ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಮ್॥**

ಎಂಬ ಶ್ಲೋಕದಿಂದ ರಾಮಾಯಣ ಹುಟ್ಟಿಕೊಳ್ಳುತ್ತದೆ. ಕ್ರೌಂಚ ಪಕ್ಷಿಯ ವೈಧವ್ಯದುಃಖವನ್ನು ಭರಿಸಲಾರದ ವಾಲ್ಮೀಕಿ ಊರ್ಮಿಳೆಯ ೧೪ ವರ್ಷಗಳ ವಿರಹವನ್ನು, ಅಗಲಿಕೆಯನ್ನು ಏಕೆ ಅರ್ಥಮಾಡಿಕೊಳ್ಳಲಿಲ್ಲ. ಇಲ್ಲಿ ವಾಲ್ಮೀಕಿ ಊರ್ಮಿಳೆಯ ಬಗ್ಗೆ ಅನಾದಾರ ಹೊಂದಿದ್ದಾದರೂ ಏಕೆ ಎಂಬ ಪ್ರಶ್ನೆ ಮೂಡುತ್ತದೆ. ಮಹಾಕಾವ್ಯಗಳಲ್ಲಿ ಪ್ರಧಾನ ನಾಯಕ ನಾಯಕಿಯರ ಪಾತ್ರ ಬಹಳ ಮುಖ್ಯವಾಗಿರುತ್ತದೆ.

ಉಳಿದ ಪಾತ್ರಗಳ ಪೋಷಣೆ ಆಗಿರುವುದಿಲ್ಲ. ಅವು ಗೌಣವಾಗಿರುತ್ತವೆ. ಆದರೆ ಓದುಗನಿಗೆ ಅದರ ಓದಿನಿಂದ ಇಲ್ಲಿ ಕವಿಹೃದಯ ಕೂಡ ಪಕ್ಷಪಾತವೆಸಗಿದೆ ಎಂಬ ಒಂದು ಋಣಾತ್ಮಕ ಸಂದೇಶವಂತೂ ರವಾನೆಯಾಗುತ್ತದೆ

ವಾಲ್ಮೀಕಿ ರಾಮಾಯಣದಲ್ಲಿ ಊರ್ಮಿಳೆಯನ್ನು ನಮ್ಮ ಮನೆಯಲ್ಲಿ ಮತ್ತೊಂದು ವಸ್ತುವಿದೆ ಅದನ್ನು ನಿನಗೊಪ್ಪಿಸುತ್ತೇನೆ ಎಂಬಷ್ಟು ಸರಳವಾಗಿ ಜನಕ ಮಹಾರಾಜ ಲಕ್ಷ್ಮಣನನ್ನು ಕುರಿತು ಹೇಳುತ್ತಾನೆ.

**'ಸೀತಾಂ ರಾಮಾಯ ಭದ್ರಂ ತೇ ಊರ್ಮಿಳಾಂ ಲಕ್ಷ್ಮಣಾಯವೈ**

**ವೀರ್ಯಶುಲ್ಕಂ ಮಮಸುತಾಂ ಸೀತಾಂ ಸುರಸುತೋಪ ಮಾಮ್॥**

ಕೆಲವು ಜನಪದ ರಾಮಾಯಣಗಳಲ್ಲಿ ಲಕ್ಷ್ಮಣನೇ ಶಿವಧನಸ್ಸನ್ನು ಮುರಿಯುತ್ತಾನೆ. ಜನಪದ ಕಥೆಗಳಲ್ಲಿ ಸಾಮಾನ್ಯವಾಗಿ ಕಿರಿಯವನೇ ಹೆಚ್ಚು ಬುದ್ಧಿವಂತ ಬಲಶಾಲಿಯಾಗಿರುತ್ತಾನೆ. ಹಾಗೆ ನೋಡಿದರೆ ಸೀತೆಯನ್ನು ಲಕ್ಷ್ಮಣನಿಗೆ ಕೊಟ್ಟು ವಿವಾಹ ಮಾಡಬೇಕಾಗಿತ್ತು. ಅಂತಹ ಪ್ರಸಂಗಗಳು ಯಾವ ರಾಮಾಯಣಗಳಲ್ಲೂ ಬರುವುದಿಲ್ಲ. ಒಂದು ವೇಳೆ ಜನಕನಿಗೆ ಸೀತೆಯೊಬ್ಬಳೇ ಮಗಳಿದ್ದಿದ್ದರೆ ಕುಂತಿಯ ಅಣತಿಯಂತೆ ದ್ರೌಪದಿಯನ್ನು ಪಾಂಡವರು ಹಂಚಿಕೊಂಡಂತೆ ಕೌಸಲ್ಯೆಯ ಮಾತಿನಂತೆ ಸೀತೆಯನ್ನು ರಾಮಲಕ್ಷ್ಮಣರು ವಿವಾಹವಾಗುವ ಪ್ರಸಂಗ ಉದ್ಭವಿಸುತ್ತಿತ್ತು. ಪುಣ್ಯಕ್ಕೆ ಊರ್ಮಿಳೆಯ ಜನನವಾದ್ದರಿಂದ ಅಂತಹ ಪ್ರಸಂಗ ಉದ್ಭವಿಸಲಿಲ್ಲ. ಮತ್ತೊಬ್ಬ ರಾಮಾಯಣಕರ್ತ ಭವಭೂತಿ ಊರ್ಮಿಳೆಯ ವಿಚಾರವನ್ನು ತುಂಬಾ ದೀರ್ಘವಲ್ಲದೇ ಇದ್ದರೂ ಸೂಕ್ಷ್ಮವಾಗಿ ಪ್ರಸ್ತಾಪಿಸಿರುವುದು ಕಂಡುಬರುತ್ತದೆ.

ಇಂತಹ ಅನಾದಾರಕ್ಕೆ ಒಳಗಾದ ಪಾತ್ರದ ಬಗ್ಗೆ ಮೊದಲಿಗೆ ನೊಂದು ನುಡಿದವರು ರಾಷ್ಟ್ರಕವಿ ರವೀಂದ್ರನಾಥ ಠ್ಯಾಗೋರ್ ಅವರು. ಅದರಲ್ಲೂ ಊರ್ಮಿಳೆಯ ಬಗ್ಗೆ ಅಪಾರ ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದಾರೆ. ಅದಕ್ಕಾಗಿಯೇ 'ಕಾವ್ಯದ ಅನಾದಾರ' ಎಂಬ ಸುಂದರವಾದ ಲೇಖನವನ್ನು ಬರೆದರು. ಇದರಿಂದ ಪ್ರಭಾವಿತರಾಗಿ ಊರ್ಮಿಳೆಯ ಬಗ್ಗೆ ಕಾವ್ಯ, ನಾಟಕ, ಕವಿತೆಗಳನ್ನು ಅನೇಕರು ರಚಿಸಿದದರು. ರಾಮಾಯಣಗಳ ಮರುಸೃಷ್ಟಿ ಹೇಗೆ ಸಾಧ್ಯವಾಯಿತೊ, ಹಾಗೆಯೇ ರಾಮಾಯಣದ ವಿವಿಧ ಪಾತ್ರಗಳಿಗೆ ಪ್ರಾಮುಖ್ಯತೆಯನ್ನು ನೀಡಿ ರಚನೆಗೊಂಡ ಕಾವ್ಯಗಳು ಅನೇಕ. ಈ ಹಿಂದೆಯೇ ಹೇಳಿದಂತೆ ಭವಭೂತಿ ಉತ್ತರ ರಾಮಚರಿತೆಯಲ್ಲಿ ಸೂಚ್ಯವಾಗಿ ಸೀತೆ ತನ್ನ ತರ್ಜನಿಯ ಬೆರಳಿನಿಂದ ಊರ್ಮಿಳೆಯ ಚಿತ್ರವನ್ನು ಲಕ್ಷ್ಮಣನಿಗೆ ತೋರಿಸುತ್ತಾಳೆ. ಇದು ಆ ಪಾತ್ರದ ಬಗ್ಗೆ ಅನೇಕ ರಚನೆಗಳು ಸೃಷ್ಟಿಯಾಗಲು ನೀಡಿದ ಒಂದು ಸೂಚನೆಯಂತೆ ಭಾಸವಾಗುತ್ತದೆ. ಭಾಸ ತನ್ನ ನಾಟಕದಲ್ಲಿ ಕೈಕೇಯಿ ಪಾತ್ರಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿರುವುದನ್ನು ಕಾಣುತ್ತೇವೆ. ಜೈನರಾಮಾಯಣಗಳಲ್ಲಿ ರಾವಣನ ಪಾತ್ರಕ್ಕೆ ಪ್ರಾಮುಖ್ಯತೆ ನೀಡಿರುವುದು ಕಂಡುಬರುತ್ತದೆ. ರವೀಂದ್ರರು ಚರ್ಚಿಸುವುದಕ್ಕೆ ಪೂರ್ವದಲ್ಲಿ ಯಾವ ಪ್ರಾಚೀನ ಕವಿಯ ಗಮನವನ್ನು ಊರ್ಮಿಳೆ ಸೆಳೆದಿಲ್ಲ ಎಂಬುದು ಇಲ್ಲಿ ಸ್ಪಷ್ಟ. ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಕುವೆಂಪು ವಿರಚಿತ

‘ಶ್ರೀರಾಮಾಯಣ ದರ್ಶನಂ’, ಶ್ರೀಮತಿ ತಿರುವಲೆ ರಾಜಮ್ಮ “ಭಾರತಿ”ಯವರ ತಪಸ್ವಿನಿ ನಾಟಕ, ಕುವೆಂಪು ಅವರ ‘ಊರ್ಮಿಳಾದೇವಿ’ ಪದ್ಯ, ಕೆ.ಡಿ. ಕುರ್ತುಕೋಟಿ ಅವರ ‘ಊರ್ಮಿಳೆ’ ಎಂಬ ನೀಳ್ಗವನ ಹಿಂದೀಯಲ್ಲಿ ಮೈಥಿಲಿಶರಣಗುಪ್ತರ ‘ಸಾಕೇತ’ ಮಹಾಕಾವ್ಯ, ಪೃಥ್ವೀನಾಥಶರ್ಮರ ‘ಊರ್ಮಿಲಾ ದೇವಿ’ (ನಾಟಕ), ಬಾಲಕೃಷ್ಣ ಶರ್ಮಾ, ‘ನವೀನ್’ರ ಕಾವ್ಯ ಊರ್ಮಿಳಾ. ಆಚಾರ್ಯ ಮಹಾವೀರ ಪ್ರಸಾದ ದ್ವಿವೇದಿಯವರು ‘ಊರ್ಮಿಳೆಯ ವಿಷಯದಲ್ಲಿ ಕವಿಗಳ ಉದಾಸೀತನತೆ’ ಕುರಿತು ಒಂದು ಲೇಖನ ಬರೆದಿದ್ದಾರೆ.

ಇವರೆಲ್ಲ ಸರಿಯಾಗಿ ಊರ್ಮಿಳೆಯ ಪಾತ್ರ ನಿರ್ಲಕ್ಷೆ ಒಳಗಾಗಿರುವುದು ಗುರುತಿಸಿದ್ದಾರೆ. ಆದರೆ ಆಕೆಗೆ ಲಕ್ಷ್ಮಣನ ಸಮ್ಮಿಲನವನ್ನು ಒದಗಿಸುವ ಪ್ರಯತ್ನವನ್ನು ಯಾರೂ ಮಾಡಿಲ್ಲ. ಕೆಲವರು ಕನಸು ಕಂಡಂತೆ ಚಿತ್ರಿಸಿದ್ದಾರೆ. ಕೆಲವರು ವಿರಹಿಣಿಯಂತೆ, ಮತ್ತೆ ಕೆಲವರು ತಪಸ್ವಿನಿಯಂತೆ ಚಿತ್ರಿಸಿ ಆ ಪಾತ್ರಕ್ಕೆ ನ್ಯಾಯ ಒದಗಿಸುವ ಪ್ರಯತ್ನ ಮಾಡಿದ್ದಾರೆ. ವಾಲ್ಮೀಕಿಯ ಪ್ರಧಾನ ಉದ್ದೇಶಕ್ಕೆ ವ್ಯತಿರಿಕ್ತವಾಗಿ ಯಾರು ಚಿಂತಿಸುವ ಸಾಹಸ ಮೆರೆದಿಲ್ಲ. ಜೈನ ರಾಮಾಯಣಗಳಲ್ಲಿ ರಾವಣನ ಪಾತ್ರವನ್ನು ಉದ್ಧರಿಸಿದಂತೆ ಊರ್ಮಿಳೆ ಪಾತ್ರದ ಉದ್ಧಾರವಾಗಿಲ್ಲ. ಸಾಕೇತದ ಸಾಫಲ್ಯತೆಯ ಕುರಿತು ಪ್ರೊ. ಕೃಷ್ಣಶಂಕರ ಶುಕ್ಲ ಹಾಗೂ ಪೊ. ವಿಶ್ವಂಭರ ಅವರುಗಳ ಅಭಿಪ್ರಾಯ ನನ್ನ ಹಿಂದಿನ ಮಾತನ್ನು ಸಮರ್ಥಿಸುತ್ತವೆ,

> “ಕಾವ್ಯದ ರಮಣೀಯತೆ, ವಿಷಾದದ ಮಾರ್ಮಿಕತೆ, ಕಲ್ಪನೆಯ ತೀವ್ರತೆ, ಶೈಲಿಯ ವೈವಿಧ್ಯತೆಯಲ್ಲಿ ಆನಂದಗೊಂಡ ಮನಸ್ಸು ಕಾವ್ಯಕುಂಜವೀಥಿಯಿಂದ ಹೊರಬರಲು ಬಯಸುವುದಿಲ್ಲ”– ಪ್ರೊ. ಕೃಷ್ಣಶಂಕರ ಶುಕ್ಲ.

ಇಲ್ಲಿ ನಾವು ಕಾವ್ಯದ ರಮಣೀಯತೆಯನ್ನು ಅನುಭವಿಸುತ್ತೇವೆ. ವಿರಹದ ಅಭಿವ್ಯಕ್ತಿಗೆ ಬಳಸುವ ರೂಪಕಗಳಿಗೆ ಮನಸೋಲುತ್ತೇವೆ. ಶೈಲಿಗೆ ತಲೆದೂಗುತ್ತೇವೆ. ಇದರೊಳಗೆ ಊರ್ಮಿಳೆಯ ನೋವು ನಮಗೆಲ್ಲಿ ಕಾಣಿಸುತ್ತದೆ. ಇಂತಹ ಕಾವ್ಯ ಸೃಷ್ಟಿಯ ಮೂಲಕ ಊರ್ಮಿಳೆಯಂತಹ ನಿರ್ಲಕ್ಷಿತ ಪಾತ್ರದ ಉದ್ಧಾರ ಸಾಧ್ಯವೆ ಎಂಬ ಪ್ರಶ್ನೆ ನಮಗೆ ಮೂಡುವುದು ಸಹಜ.

“ಊರ್ಮಿಳೆಯ ಉದ್ಧಾರವಾಗಿಲ್ಲ” ಎಂಬ ಮಾತು ಸತ್ಯ. ಊರ್ಮಿಳೆಯನ್ನು ಉದ್ಧರಿಸುವ ಶಕ್ತಿ ಯಾರಲ್ಲಿದೆ? ಎಷ್ಟೇ ದೊಡ್ಡ ಕವಿಯಾದರೂ ಆ ಮಹಾಚೇತನದ ವಿಷಯದಲ್ಲಿ ಶ್ರದ್ಧಾಂಜಲಿಗಳನ್ನು ಸಲ್ಲಿಸಬಹುದೇ ಹೊರತು, ಆಕೆಯನ್ನು ಉದ್ಧರಿಸುತ್ತೇನೆಂದು ಜಂಬ ಕೊಚ್ಚಲಾರ”[೨] ಗುಪ್ತರ ವಿರಹ ವರ್ಣನೆ ಒಂದು ಒಣ ಪ್ರಸಂಗ ಎಂದು ಹೇಳುತ್ತಾ ಊರ್ಮಿಳೆ ಕುಲವಧುವೋ ಅಲ್ಲವೊ ಎಂಬ ಸಂಶಯವನ್ನು ವ್ಯಕ್ತಪಡಿಸುತ್ತಾರೆ. ಮಹಾತ್ಮ ಗಾಂಧೀಯವರೂ ಊರ್ಮಿಳೆಯ ಪಾತ್ರ ಉದ್ಧಾರವಾಗಿಲ್ಲ ಎಂಬುದನ್ನು ಮಾರ್ಮಿಕವಾಗಿ ನುಡಿಯುತ್ತಾರೆ. “ಭಾಷೆಯ ದೃಷ್ಟಿಯಿಂದ ಒಂದು ವೇಳೆ ಊರ್ಮಿಳಾ ವಿರಹ ಸುಂದರವಾಗಿದ್ದರೂ, ಬಹುಶಃ ಸಾಕೇತದಲ್ಲಿ ಅದಕ್ಕೆ ಸ್ಥಾನವಿರಲಾರದು.[೩]

ಊರ್ಮಿಳೆ ಎಂಬುದು ಸ್ತ್ರೀ ಪಾತ್ರದ ಪ್ರತಿನಿಧಿ. ಈ ಹಿಂದೆ ನಾವು ಚರ್ಚಿಸಿದಂತೆ ಉಪೇಕ್ಷೆ ಎಂಬುದು ಸ್ತ್ರೀಯರಿಗೆ ಅಂಟಿಕೊಂಡೇ ಬಂದಿರುವಂತಹದ್ದು. ಅದು ಸೀತೆಯಾದರೂ ಅಷ್ಟೇ ಊರ್ಮಿಳೆಯಾದರೂ ಅಷ್ಟೇ. ಆದರೂ ಕಾವ್ಯೋಪೇಕ್ಷಿತೆಯಾದ ಊರ್ಮಿಳೆಯ ಪಾತ್ರ ರವೀಂದ್ರರನ್ನು ಕಾಡಿದ್ದರಲ್ಲಿ ಅಚ್ಚರಿಯೇನಿಲ್ಲ. ಊರ್ಮಿಳೆಯೇನು ಸಾಧಾರಣ ಕನ್ಯೆಯಲ್ಲ ರಾಜಪುತ್ರಿ ಜನಕ ಮಹಾರಾಜನ ಪ್ರೀತಿಯ ಮಗಳು. ರಾಜನೀತಿಯನ್ನೆಲ್ಲ ಚೆನ್ನಾಗಿ ಅಭ್ಯಾಸ ಮಾಡಿದ್ದ ಅರಮನೆಯ ರೀತಿ ನೀತಿ ಚೆನ್ನಾಗಿ ಬಲ್ಲ ರಾಜಕುವರಿ, ಲಕ್ಷ್ಮಣನ ಮಡದಿಯಾಗಿ ಬಂದಮೇಲೂ ಆ ಪ್ರವೃತ್ತಿ ಮುಂದುವರಿಸಿಕೊಂಡು ಹೋಗುತ್ತಾಳೆ. ರಾಮಲಕ್ಷ್ಮಣರ ವನಗಮನದ ನಂತರವೂ ಭರತನೊಂದಿಗೆ ರಾಜ್ಯದ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಾರೆ. ಗುಪ್ತರ ಆಕೆಯ ಸಾಮಾಜಿಕ ಕಾಳಜಿಯನ್ನು ಬಿಂಬಿಸುವಂತಹ ಪದ್ಯದ ಸಾಲುಗಳನ್ನು ಗಮನಿಸಬಹುದಾಗಿದೆ,

**ಕಬ್ಬು, ಭತ್ತ, ಹತ್ತಿಯ ಬೆಳೆ ಎಂತಿಹುದೆಂದು ಇಂದು**
**ನಾಡ ಸುಭಿಕ್ಷವನು ಕುರಿತು ಮೈದುನನ ಕೇಳಿದೆನು.**
**ಈ ಬಾರಿ ದೇವಿ, ಇಂದ್ರದೇವನ ಕೃಪೆ ತಾನಿಮ್ಮಡಿಸಿದೆಯೆನಿಪುದು.**
**ತಂಗಾಳಿಯಲಿ ಬಳುಕುವ ತುಂಬಿದ ಹೊಲಗಳ ನೋಡಿದೊಡೆ' ಎಂದಿಹನು**[೮]

ಮತ್ತೊಂದು ಉದಾಹರಣೆಯನ್ನು ಗಮನಿಸಬಹುದಾಗಿದೆ,

**ಹಳ್ಳಿಯೊಂದರಲ್ಲಿ ರೈತನನ್ನು ಕೇಳಿದೊಡೆ, ತಾನವನು**
**ಅನ್ನ ಬಟ್ಟೆಯ, ಹಾಲ ಹೊಳೆಹರಿಯುತ್ತಿದ್ದುದನು ಬಣ್ಣಿಸಿದ.**
**ಆದರೆ 'ಈ ವರುಷ ರುಚಿ ಎಂತಿಹುದೊ ನಾವರಿಯೆವು!**
**ಎಂದಾಳಾರೋ ಓರ್ವ ರೈತನ ಮಡದಿ.**[೫]

ಇಂತಹ ಉನ್ನತ ಸ್ಥಾನದಲ್ಲಿರುವ ಪಾತ್ರದ ವಿಯೋಗ ರವೀಂದ್ರರ ಮನಃ ಕಲಕಿರಬಹುದು. ಆದರೆ ಊರ್ಮಿಳೆಯ ಬಗ್ಗೆ ಸಹಾನುಭೂತಿ, ಸಂವೇದನೆಗೆ ರವೀಂದ್ರರು ಕೊಡುವ ಕಾರಣ ಅಷ್ಟೊಂದು ಗಂಭೀರ ಎನಿಸುವುದಿಲ್ಲ. ಅವರ ಈ ಮಾತುಗಳು ಊರ್ಮಿಳೆಯನ್ನು ಕುರಿತು ಇಷ್ಟು ಪ್ರಮಾಣದ ಸಾಹಿತ್ಯ ರಚನೆಗೆ ಕಾರಣವಾಯಿತೆ ಎಂಬ ಅನುಮಾನ ಮೂಡುತ್ತದೆ. ಮುಂದುವರಿದು ಮಾಂಡವಿ–ಶೃತಕೀರ್ತಿಗಳ ವಿಚಾರವಾಗಿ ನಮಗೇನೂ ಗೊತ್ತಿಲ್ಲ ಎಂದು ಹೇಳುತ್ತಾ, ಗೊತ್ತು ಮಾಡಿಕೊಳ್ಳಬೇಕೆಂಬ ಕುತೂಹಲವೂ ಇಲ್ಲ ಎಂದು ಹೇಳುತ್ತಾರೆ. ಸ್ತ್ರೀ ಪಾತ್ರಗಳ ಸಂವೇದನೆಯೇ ಅವರ ಆತ್ಯಂತಿಕ ವಿಷಯವಾಗಿದ್ದರೆ, ರಾಮಾಯಣದ ಎಲ್ಲ ಉಪೇಕ್ಷಿತ ಪಾತ್ರಗಳ ಬಗ್ಗೆಯೂ ಗಮನಹರಿಸಬೇಕಾಗಿತ್ತು ಎಂದೆನಿಸುತ್ತದೆ. ಅವರ ಮಾತುಗಳನ್ನು ಗಮನಿಸೋಣ, "ಹೀಗೆ ಭಾವಿಸುವುದಕ್ಕೆ (ಊರ್ಮಿಳೆಯ ಪಾತ್ರದ ಅನಾದಾರ) ಇರುವ ಕಾರಣ ಇಂತಹ

ಮಧುರವಾದ ಹೆಸರು ಸಂಸ್ಕೃತದಲ್ಲಿ ಮತ್ತೊಂದಿಲ್ಲದಿರುವುದೇ; ಆದಕಾರಣ ಊರ್ಮಿಳಾದೇವಿಗೆ ಆ ಹೆಸರಿನ್ನಿಟ್ಟುದಕ್ಕಾಗಿ ನಾನು ವಾಲ್ಮೀಕಿಗೆ ಕೃತಜ್ಞನಾಗಿದ್ದೇನೆ. ಕವಿಗುರುವು ಆಕೆಯ ವಿಷಯದಲ್ಲಿ ಅನೇಕ ಅನ್ಯಾಯಗಳನ್ನು ಮಾಡಿದ್ದಾನೆ; ಆದರೆ ಅದೃಷ್ಟವಶಾತ್ ಆಕೆಗೆ 'ಮಾಂಡವಿ' ಅಥವಾ 'ಶೃತಕೀರ್ತಿ' ಎಂಬುದಾಗಿ ಹೆಸರಿಡದೆ 'ಊರ್ಮಿಳಾ' ಎಂದಿಟ್ಟಿರುವುದು ಒಂದು ವಿಶೇಷ ಸೌಭಾಗ್ಯ. ಮಾಂಡವಿ, ಶೃತಕೀರ್ತಿಗಳ ವಿಚಾರವಾಗಿ ನಮಗೇನೂ ಗೊತ್ತಿಲ್ಲ. ಗೊತ್ತುಮಾಡಿಕೊಳ್ಳಬೇಕೆಂಬ ಕುತೂಹಲವೂ ಇಲ್ಲ.[೬] ಅಂದರೆ ಕವಿವರ್ಯರ ಗಮನ ಸೆಳೆಯುವುದು ಸೀತೆ, ಊರ್ಮಿಳೆಯಂತಹ ಪಾತ್ರಗಳೇ ಹೊರತು ಮಂಡೋದರಿ, ಶೂರ್ಪನಕಿಯಂತಹ ಪಾತ್ರಗಳಲ್ಲ ಎಂಬುದು ನನ್ನ ಅಭಿಪ್ರಾಯ. ಎಲ್ಲಕ್ಕಿಂತ ಮಿಗಿಲಾಗಿ ಸ್ತ್ರೀಪಾತ್ರಗಳನ್ನು ಸಂಪೂರ್ಣವಾಗಿ ಕಡೆಗಣಿಸಿರುವಾಗ, ಅಂದರೆ ಪಿತೃಪ್ರಧಾನ ವ್ಯವಸ್ಥೆಯನ್ನು ಪ್ರತಿನಿಧಿಸುವ ಕಾವ್ಯಗಳಲ್ಲಿ ಕಡೆಗಣಿಸಿರುವಾಗ ಕನಿಷ್ಠ ಸೀತೆ ಊರ್ಮಿಳೆಯಂತಹ ಪಾತ್ರಗಳಿಗಾದರೂ ನ್ಯಾಯ ಒದಗಿಸುವಂತಹ ಕೆಲಸ ನಡೆದದ್ದು ಒಂದು ಹಂತದ ಸಂತೃಪ್ತಿಯೇ ಸರಿ.

ಗುಪ್ತರು ಊರ್ಮಿಳೆಯ ಹದಿನಾಲ್ಕು ವರ್ಷಗಳ ವಿರಹ ವರ್ಣನೆಯನ್ನು ಮಾಡಲು ಪ್ರಯತ್ನಿಸಿದರೆ ಕುವೆಂಪು ಅವರ ಊರ್ಮಿಳೆ ರಾಮಲಕ್ಷ್ಮಣ ಸೀತೆಯ ಹಿತವನ್ನು ಬಯಸುವ ತಪಸ್ವಿನಿಯಾಗಿದ್ದಾಳೆ. ಕಾಡಿನಲ್ಲಿರುವ ಲಕ್ಷ್ಮಣ ಒಂದರಗಳಿಗೆಯೂ ಊರ್ಮಿಳೆಯನ್ನು ನೆನಪು ಮಾಡಿಕೊಂಡ ಸಂದರ್ಭ ಕಂಡುಬರುವುದಿಲ್ಲ. ಲಕ್ಷ್ಮಣನಿಗೆ ನಿಜವಾಗಿಯೂ ಊರ್ಮಿಳೆಯ ಮೇಲೆ ಪ್ರೀತಿ ಇತ್ತೆ. ಒಂದುವೇಳೆ ಪ್ರೀತಿ ಇದ್ದಿದ್ದೇ ಆಗಿದ್ದರೆ ನವವಿವಾಹಿತ ಪ್ರೀತಿಯ ಮಡದಿಯನ್ನು ತ್ಯಜಿಸಿ ರಾಮನನ್ನು ಸೀತೆಯನ್ನು ಅನುಸರಿಸುತ್ತಿದ್ದನೆ. ಇದಕ್ಕೆ ಇರಬಹುದಾದ ಬಲವಾದ ಕಾರಣವೇನು. ಕುವೆಂಪು ಅವರು ರಾಮ ಸೀತೆಯರ ಮೂಲಕ ಲಕ್ಷ್ಮಣನ ವಿರಹವನ್ನು ವ್ಯಕ್ತಪಡಿಸುವಂತೆ ಚಿತ್ರಿಸಿದ್ದಾರೆ, "ಒಂದು ಬೈಗಿನಲ್ಲಿ ಸೌದೆಯನ್ನು ಹೊತ್ತು ತಂದು ಅಲ್ಲಿ ಊರ್ಮಿಳಾವಲ್ಲಭ ವಿಶ್ರಮಿಸುವುದನ್ನು ಸೀತಾರಾಮರು ನೋಡುತ್ತಾರೆ. ಆತ ಆ ತಾಣದಲ್ಲಿ ತನ್ನ ಪ್ರಾಣವಲ್ಲಭೆಯನ್ನು ನೆನೆದು ಬೇಯುತ್ತಿರುವನೆ? ತನ್ನ ಸತಿಗಾಗಿ ದೇವರನ್ನು ಬೇಡುತ್ತಿರುವನೇ? ಎಂದು ಮುಂತಾಗಿ ಆಲೋಚಿಸುತ್ತಾರೆ. ಆದರೆ ಲಕ್ಷ್ಮಣ ರಾಮ ಸೀತೆಯ ಸೇವೆಯಲ್ಲಿ ಸುಖವಾಗಿದ್ದಾನೆ. ಸೀತೆಯ ಮೇಲೆ ಒಂದು ರೀತಿಯ ಮೋಹ ಎನಿಸುವಷ್ಟರ ಮಟ್ಟಿಗೆ ಲಕ್ಷ್ಮಣ ಅವರ ಸೇವೆಯಲ್ಲಿ ಸಂಪೂರ್ಣ ಮಗ್ನನಾಗಿದ್ದಾನೆ. ಇದನ್ನು ಸಮರ್ಥಿಸಬಹುದಾದುಕ್ಕೆ ಕೆಲವು ಅಂಶಗಳನ್ನು ಇಲ್ಲಿ ಚರ್ಚಿಸೋಣ. "ಅರಣ್ಯಕಾಂಡವು ಇನ್ನು ಎರಡು ಆಸಕ್ತಿದಾಯಕ ಅಂಶಗಳನ್ನು ಸೂಚಿಸುತ್ತದೆ. ಮೊದಲನೆಯದು ಹಿರಿಯಣ್ಣನ ಪತ್ನಿಯ ಮೇಲೆ ತಮ್ಮನಿಗಿರುವ ಅಧಿಕಾರದ ಸಾಮಾಜಿಕ ಕಟ್ಟಳೆ. ಲಕ್ಷ್ಮಣನು ಸೀತೆಯೊಬ್ಬಳನ್ನೇ ಬಿಟ್ಟು ಹೋಗಲು ನಿರಾಕರಿಸಿದಾಗ ಆಕೆ ರಾಮನ ಮರಣಾನಂತರ ನೀನು ನನ್ನನ್ನು ಮದುವೆಯಾಗಲು ಸಾಧ್ಯವಿಲ್ಲ ಎಂಬ ವ್ಯಂಗೋಕ್ತಿಯನ್ನು ಆಡುತ್ತಾಳೆ. ಪ್ರಾಯಶಃ ಅಣ್ಣನು ತೀರಿಕೊಂಡರೆ ಅವನ ಹೆಂಡಿತಯನ್ನು

ತಮ್ಮನು ಮದುವೆಯಾಗುವ ಸಂಪ್ರದಾಯ ಇದ್ದಿರಬೇಕು"[೭] ಲಕ್ಷ್ಮಣನನ್ನು ಕಟುವಾಗಿ ಟೀಕಿಸಿದ ಅಂಶವನ್ನು ಎಲ್ಲ ಕವಿಗಳು ಸ್ಪಷ್ಟವಾಗಿ ಅಭಿವ್ಯಕ್ತಿಗೊಳಿಸಿದ್ದಾರೆ, ವಾಲ್ಮೀಕಿ ಈ ಪ್ರಸಂಗವನ್ನು ಹೀಗೆ ವರ್ಣಿಸಿದ್ದಾನೆ,

ತಮುವಾಚ ತತಸ್ತತ್ರ ಕು ತಾ ಜನಕಾತ್ಮಜಾ।
ಸೌಮಿತ್ರೇ ಮಿತ್ರೂಪೇಣ ಭ್ರಾತುಸ್ತ್ವಮಸಿ ಶತ್ರುವ್ಮ್॥
ಯಸ್ತ್ವಮಸ್ಯಾಮವಸ್ಥಾಯಾಂ ಭ್ರಾತರಂ ನಾಭಿಪತ್ರ್ಯಸೇ।
ಇಚ್ಛಸಿ ತ್ವಂ ವಿನಶ್ಯಂತಂ ರಾಮಂ ಲಕ್ಷ್ಮಣ ಮತ್ಕೃತೇ॥
ಲೋಭಾನ್ಮಮ ಕೃತೇ ನೂನಂ ನಾನುಗಚ್ಛಸಿ ರಾಘುವಮ್।
ವ್ಯಸನಂ ತ್ರೇಯಂ ಮನ್ಯೇ ಸ್ನೇಹೋ ಭ್ರತರಿ ನಾಸ್ತಿತೇ॥
ತೇನ ತಿಷ್ಠಸಿ ವಿಸ್ರಬ್ಧಸ್ತಮಪಶ್ಯನ್ ಮಹಾದ್ಯುತಿಮ್।
ಕಿಂ ಹಿ ಸಂಶಯ್‌ಮಾಪನ್ನೇ ತಸ್ಮಿನ್ನಿಹ ಮಯಾ ಭವೇತ್॥
ಕರ್ತವ್ಯಮಿಹ ತಿಷ್ಠಂತ್ಯಾ ಯತ್ಪ್ರಧಾನಸ್ತ್ವಮಾಗತಃ।
ಇತಿ ಬ್ರುವಾಣಾಂ ವೈದೇಹೀಂ ಬಾಷ್ಪಶೋಕಪರಿಪ್ಲುತಾನ್[೮]

ತೊರವೆ ರಾಮಾಯಣದಲ್ಲೂ ಈ ಪ್ರಸಂಗ ಮುಂದಿನಂತೆ ಚಿತ್ರಿತಗೊಂಡಿದೆ,

"ಅಕಟ ಲಕ್ಷ್ಮಣದೇವ ಪ್ರತ್ಯ ಕ್ಷಕೆ ಪ್ರಮಾಣವದೇಕೆ ಪರಮಾ
ತ್ಮಕ ಪರಂಪರನೆಂದು ನೆಱೆ ಬಾಯಾರಲೇಕೆನ್ನ
ಯುಕುತಿಗಿದು ಮಱೆಯಲ್ಲವೇ? ಕೌ। ಳಿಕದ ಮಾತೇಕೆನ್ನೊಡನೆ ಸಾ
ಕಕಟ ಗಂಡನ ಕೊಂಡುಬಾ ಹೋಗೆಂದಳಿಂದುಮುಖಿ
ವಿಷಯ ಕೊಂಬೆನು ತಾರದಿರಲೀ। ವಸತಿಗುರಿಯನು ಚಾಚಿ ಜೀವವ
ಬಿಸುಡುವೆನು ಬೀಳುವೆನು ಘಾತೋದಕದ ಕೂಪದಲಿ
ರಸನೆಯನು ಕಿತ್ತುಸುವ ನಿನಗೊ। ಪ್ಪಿಸುವೆನೆಂದಾಕ್ಷೇಪ ಮುಖದು
ಬ್ಬಸದ ರೋಷಾವೇಷದಲಿ ಗಜರಿದಳು ಲಕ್ಷ್ಮಣನ
ಬಗೆಯನರಿದೆನು ನಿನ್ನ ಚಿತ್ತವ । ಬಗೆವವಳು ತಾನಲ್ಲವನ್ಯರ
ಬಗೆಗೆ ಸಿಲುಕುವಳೆಂದು ಬಗೆದೆಯಲಾ ಮನಸ್ಸಿನಲಿ
ಸೊಗಸುವವಳಹುದಲ್ಲವೆಂಬು। ಜ್ಜುಗವ ನೀನೇ ಬಲ್ಲೆಯೆನೆ ಕರ
ಯುಗಳದಲಿ ಮುಚ್ಚಿದನು ಕಿವಿಯನು ರಾಮರಾಮೆನುತ್"[೯]

ಕುವೆಂಪು ಅವರ ರಾಮಾಯಣ ದರ್ಶನಂನಲ್ಲಿ ಈ ಪ್ರಸಂಗವನ್ನು ಕವಿ ಮುಂದಿನಂತೆ ವಿವರಿಸಿದ್ದಾರೆ.

ಭ್ರಾತೃಘಾತಕ ಪಾಪಿ,

ಸಾಯಿ, ನಡೆ, ತೊಲಗು, ಕಣ್ಬೊಲದಿಂ। ಸುಮಿತ್ರಾತ್ಮ

ಜಾತ ಪಾತಕವೊ ನೀಂ। ಗೋಮುಖ ವ್ಯಾಘ್ರನೊಲ್

ಬಂದೆಯೆಮ್ಮೊಡಗೂಡಿ, ಪೂರ್ವಜನ್ಮದ

ಕರ್ಮಪಾಕಂ ಬರ್ಪವೋಲ್[೧೦]

ನಿಮಣ್ಣನಂ ಪ್ರೀತಿಸುವ ಮೊದಲೆ ಪ್ರೀತಿಸಿದೆ

ನಾನಾತನಂ। ಪೊಲ್ಲನುಡಿಗೆಡೆಗೊಟ್ಟರೀಗಳಾ

ಬಳಿಕ್ಕೆ ನೀಂ ನೋವನುಣ್ಣಿರಿ[೧೧]

ಮುಂದುವರೆದು ಸೀತೆ ನುಡಯುತ್ತಾಳೆ,

ಎಲವೋ ಲಕ್ಷ್ಮಣ,

ಎಳೆಯ ಮುಳ್ ಚುಚ್ಚಲ್ಕೆ ನೋವಲ್ತದುವೆ ಮೆಚ್ಚು;

ಬೆಳೆದಾರಾಮುಳ್, ಅದರ ಕಚ್ಚು ಮುತ್ತಹುದೆ ಪೇಳ್

ಎಳೆಯ ಕರು ಬೆಳೆದ ಮೇಲದರ ತಾಯನೆ ಬೆದೆಗೆ ಬಯಸಿದಪುದಯ್ಯೊ[೧೨]

ಸುಮಿತ್ರೆ ಲಕ್ಷ್ಮಣನಿಗೆ ಹೇಳುವ ಮಾತುಗಳನ್ನು ಗಮನಿಸಿದರೆ ಲಕ್ಷ್ಮಣನಿಗೆ ಸೀತೆ ಮಾತೃ ಸ್ವರೂಪಿಣಿ. ರಾಮನನ್ನು ನಿನ್ನ ಪಿತನಿಗೆ ಸಮ ಎಂದು ನುಡಿಯುತ್ತಾಳೆ. 'ಸೀತಾ ರಾಮರು ಕಾಡಿಗೆ ಹೋಗುವುದಾದರೆ ಅಯೋಧ್ಯೆಯಲ್ಲಿ ನಿನಗೇನೂ ಕೆಲಸವಿಲ್ಲ ಎಂದು ಹೇಳುತ್ತಾಳೆ. ಶ್ರೀರಾಮನಲ್ಲಿ ಭಕ್ತಿಶ್ರದ್ಧೆಯುಳ್ಳವರೇ ಈ ಪ್ರಪಂಚದಲ್ಲಿ ಎಲ್ಲರಿಗೂ ಪೂಜ್ಯರೂ, ಪರಮಪ್ರಿಯರೂ ಆಗಿದ್ದಾರೆ ಎನ್ನುವ ಮೂಲಕ ರಾಮನು ಪರಮಾತ್ಮನೆಂಬುವ ಸತ್ಯವನ್ನು ಬಿಡಿಸಿಡುತ್ತಾಳೆ. ಶ್ರೀರಾಮ ಭಗವಂತನಾದರೆ ಸೀತೆ ಲಕ್ಷ್ಮಿಯಲ್ಲವೆ. ಅಂತಹ ಮಾತೃ ಸ್ವರೂಪಿಣಿಯ ಪುತ್ರ ಸಮಾನನಾದ ಲಕ್ಷ್ಮಣನನ್ನು ಕುರಿತು ಇಂತಹ ಮಾತುಗಳನ್ನಾಡುವುದರ ಉದ್ದೇಶವೇನು. ಏಕಾಏಕಿ ಅಷ್ಟೊಂದು ಸುಲಭವಾಗಿ ಸೀತೆ ಇಂತಹ ನಿರ್ಣಯಕ್ಕೆ ಬರಲು ಸಾಧ್ಯವೆ. ಅದು ಸಾಧ್ಯವಾಗುವುದಾದರೆ ಸಂಕಾಲಿಯಾ ಅವರು ಹೇಳುವ ಮಾತುಗಳಿಗೆ ಪುಷ್ಟಿ ದೊರೆಯುತ್ತದೆ. ಮುಂದುವರಿದು ಸ್ಮೃತಿಗಳಲ್ಲಿ ಉಲ್ಲೇಖವಿರುವಂತೆ 'ಸ್ತ್ರೀ ತನ್ನ ತಂದೆ-ಸಹೋದರ-ಮೈದುನ ಅಥವಾ ವಯಸ್ಸಿಗೆ ಬಂದ ಮಗ ಇವರಲ್ಲಿ ಯಾರೊಬ್ಬರೊಡನೆಯೂ ಏಕಾಂತದಲ್ಲಿರಬಾರದು ಎಂದು ವಿಧಿಸಿದೆ. ಇದು ಪುರುಷನಿಗಿರುವ ಲೈಂಗಿಕ ಭೀತಿಯನ್ನು ಸಾರುತ್ತದೆ. ಆಗಿದ್ದಲ್ಲಿ ಲಕ್ಷ್ಮಣ ಸೀತೆ ಏಕಾಂತದಲ್ಲಿರಲು ಹೇಗೆ ಸಾಧ್ಯವಾಯಿತು. ಊರ್ಮಿಳೆಯ ಬಗ್ಗೆ ವಿಚಲಿತರಾಗಲು ರಾಷ್ಟ್ರಕವಿ ರವೀಂದ್ರರಿಗೆ ಮತ್ತೊಂದು ಕಾರಣವಿರಬಹುದೆಂದು ಪ್ರಧಾನಗುರುದತ್ತ ಅವರು ಗುರುತಿಸುತ್ತಾರೆ. ಹದಿನೆಂಟನೆಯ ಶತಮಾನದಲ್ಲಿದ್ದ

ಭವಾನಿ ಚರಣನೆಂಬ ಬಂಗಾಳೀ ಕವಿಯೊಬ್ಬನು 'ಲಕ್ಷ್ಮಣೇರ್ ದಿಗ್ವಿಜಯ' ಎಂಬ ಶೀರ್ಷಿಕೆಯ ತನ್ನ ಗ್ರಂಥದಲ್ಲಿ ಊರ್ಮಿಳೆಗೆ ಸವತಿಯೊಬ್ಬಳನ್ನು ಕಲ್ಪಿಸಿದ್ದಾನೆ. ಜೈನ ರಾಮಾಯಣಗಳಲ್ಲೂ ಲಕ್ಷ್ಮಣ ಪತ್ನಿಯರ ಪಂಕ್ತಿಯಲ್ಲಿ ಘನಮಾಲೆ ಎಂಬ ಒಬ್ಬಳ ಹೆಸರು ಉಲ್ಲೇಖಗೊಂಡಿದೆ.[೧೩]

ಇಲ್ಲಿ ಗಮನಿಸಬೇಕಾದದ್ದು ಪಾತಿವ್ರತ್ಯದ ಕಲ್ಪನೆ ಎಂದಿನಿಂದ ಆರಂಭವಾಯಿತು. ಅದಕ್ಕೆ ಇದ್ದಂತಹ ಸಾಂಸ್ಕೃತಿಕ ಒತ್ತಡ, ಸಾಮಾಜಿಕ ಒತ್ತಡಗಳೇನು ಎಂಬುದು. ರಾಜ ಬಹುಪತ್ನಿ ವಲ್ಲಭ. ಅವರ ಕಾಮತೃಷೆಯನ್ನು ತೀರಿಸಿಕೊಳ್ಳಲು ಧರ್ಮಪತ್ನಿಯೇ ಆಗಬೇಕೆಂದೇನಿಲ್ಲ. ಸೀತೆಯ ಮಾತುಗಳು ಇದನ್ನು ಸಮರ್ಥಿಸುತ್ತದೆ, 'ನೀನು ಅಯೋಧ್ಯೆಗೆ ಹಿಂತಿರುಗಿ ಸುಂದರ ಸ್ತ್ರೀಯರೊಂದಿಗೆ ಆನಂದಿಸುತ್ತೀಯೆ ಎಂದು ಸೀತೆ ಅನುಮಾನಿಸುವುದು.' ಶ್ರೀರಾಮ ಆಚರಿಸುವ ಏಕಪತ್ನೀವ್ರತದ ಬಗ್ಗೆ ಸೀತೆಗೆ ಏನೂ ಖಾತ್ರಿಯಿದ್ದಂತೆ ಕಂಡುಬರುವುದಿಲ್ಲ. ಪರಸ್ಪರರು ಅವರವರ ದೃಷ್ಟಿಯಲ್ಲಿ ಮೊತ್ತೊಬ್ಬರನ್ನು ಅನುಮಾನಿಸುತ್ತಾರೆ. ಇದಕ್ಕೆ ಕಾರಣ ಆ ಕಾಲದಲ್ಲಿರಬಹುದಾದ ಲೈಂಗಿಕ ಸ್ವಾತಂತ್ರ್ಯ. ಶಾಂತಿಪರ್ವದ ೨೦೭ನೆಯ ಅಧ್ಯಾಯವು– ಸಾಂಪ್ರದಾಯಿಕ ನೆಲೆಯಲ್ಲಿ ಈ ವಿವಾಹ ಸಂಸ್ಥೆಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಅದನ್ನು ಗಮನಿಸಿದರೆ ತ್ರೇತಾಯುಗದಲ್ಲಿ ಸ್ತ್ರೀ ಪುರುಷ ಸಂಬಂಧಗಳು ಹೇಗಿದ್ದವು ಎಂಬುದು ತಿಳಿಯುತ್ತದೆ.

**ಕೃತಯುಗೇ...**
**ನ ಚೈಷಾಂ ಮೈಥುನೋ ಧರ್ಮೋ ಬಭೂವ ಭರತರ್ಷಭ**
**ಸಂಕಲ್ಪಾ ದೇ ವೈ ತೇಷಾಂ ಅಪತ್ಯಮುಪ ಪದ್ಯತೇ**
**ತತಸ್ತ್ರೇತಾಯುಗೇ ಕಾಲೇ ಸಂಸ್ಪರ್ಶಾಜ್ಜಾಯತೇ ಪ್ರಜಾ**
**ನ ಹ್ಯಭೂನ್ ಮೈಥುನೋ ಧರ್ಮಸ್ತೇಷಾಮಪಿ ಜನಾಧಿಪ**
**ದ್ವಾಪರೇ ಮೈಥುನೋ ಧಮಃ ಪ್ರಜಾನಾಮ ಭವನ್ನೃಪ**
**ತಥಾ ಕಲಿಯುಗೇ ರಾಜನ್ ದ್ವಂದ್ವ ಮಾಪೇದಿರೇ ಜನಾಃ**

ಅಂದರೆ, ಕೃತಾಯುಗದಲ್ಲಿ ಸ್ತ್ರೀ ಪುರುಷರ ಸಮಾಗಮವು ಮನಸೋ ಇಚ್ಛೆ ನಡೆಯುತ್ತಿತ್ತು. ತಾಯಿ, ತಂದೆ, ಅಣ್ಣ, ತಂಗಿ ಎಂಬ ಬೇಧವಿರಲಿಲ್ಲ. ಇದು ಯೂಥಾವಸ್ಥೆಯಾಗಿತ್ತು.

ತ್ರೇತಾಯುಗದಲ್ಲಿ ಸ್ತ್ರೀ–ಪುರುಷರ ಪರಸ್ಪರ ಸ್ಪರ್ಶವಾದರೆ ಆ ಸ್ತ್ರೀ–ಪುರುಷರಿಗೆ ಆ ಮಟ್ಟಿಗೆ ಸಂಭೋಗಿಸಲು ಸಮಾಜವು ಒಪ್ಪಿಗೆಯನ್ನು ನೀಡುತ್ತಿತ್ತು. ಇದು ಬೇಕು–ಬೇಡಗಳ ಅಥವಾ ಇಷ್ಟ–ಅನಿಷ್ಟಗಳ ಅವಸ್ಥೆಯಾಗಿತ್ತು. ಮಾತ್ರವಲ್ಲ, ಗಂಡು ಹೆಣ್ಣಿನ ಈ ಸಹಜ ಜೈವಿಕ ಕ್ರಿಯೆಯನ್ನೂ ಸಮಾಜವು ನಿಯಂತ್ರಿಸತೊಡಗಿತ್ತು.

ದ್ವಾಪರ ಯುಗದಲ್ಲಿ ಮೈಥುನ ಧರ್ಮವು ಪ್ರಾರಂಭವಾಯಿತು. ಅಂದರೆ ತಂಡದಲ್ಲಿ ಸ್ತ್ರೀ–ಪುರುಷರು ಜೊತೆಜೊತೆಯಾಗಿ ಇರತೊಡಗಿದರು. ಆದರೆ ಈ ಜೋಡಿಗಳಿಗೆ ಇನ್ನೂ ಸ್ಥಿರಾವಸ್ಥೆಯು ಪಾಪ್ತವಾಗಿರಲಿಲ್ಲ.

ಹಾಗಾಗಿ ವಿವಾಹ ವ್ಯವಸ್ಥೆ, ದಂಪತಿಗಳು ಎಂಬ ಪರಿಕಲ್ಪನೆ ಹುಟ್ಟಿಕೊಂಡದ್ದು ಕಲಿಯುಗದ ಆರಂಭಘಟ್ಟದಲ್ಲಿ ಎಂದು ರಾಜವಾಡೆ ವಿ.ಕೆ. ಅವರು ಅಭಿಪ್ರಾಯಪಡುತ್ತಾರೆ. ಆದರೆ ರಾಮಾಯಣ ಮಹಾಭಾರತ ಕಾಲಕ್ಕೆ ಜ್ಞಾತಿ ಸಂಬಂಧಗಳು ಪರಿಚಿತವಾಗಿದ್ದನ್ನು ನಾವು ಗಮನಿಸುತ್ತೇವೆ. ಅಂದರೆ ಅನುಕೂಲಸಿಂಧುವಾಗಿ ಮಾತ್ರ ಎರಡೂ ರೀತಿಯಲ್ಲಿ ಸಂಬಂಧಗಳು ರೂಢಿಯಲ್ಲಿದ್ದವು ಎಂದು ಕಾಣುತ್ತದೆ. ಪಿತೃ ಪ್ರಧಾನ ವ್ಯವಸ್ಥೆಯು ಸ್ತ್ರೀಯರಿಗಿದ್ದ ಲೈಂಗಿಕ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿ ಅವರನ್ನು ಕೌಟುಂಬಿಕ, ಧಾರ್ಮಿಕ ಹಾಗೂ ಲೈಂಗಿಕ ಕಟ್ಟುಪಾಡುಗಳಿಗೆ ಒಳಪಡಿಸಿ ಸ್ತ್ರೀ ಮಾದರಿಗಳನ್ನು ಸೃಷ್ಟಿಸಿ ಶೋಷಣೆಗೆ ಒಳಪಡಿಸಲಾರಂಭಿಸಿದವು. ಸ್ತ್ರೀ ಧರ್ಮವನ್ನು ಪುರುಷಾಧಿಕಾರಕ್ಕೆ ಪೂರಕವಾಗಿ ಕಟ್ಟಿದರು. ಹಾಗೆಯೇ ಸ್ತ್ರೀ ಒಂದುವೇಳೆ ಲೈಂಗಿಕ ಸ್ವಾಂತಂತ್ರ್ಯವನ್ನು ವಹಿಸಿದರೆ ಆಕೆಯ ಬದುಕು ದುರಂತವಾಗುತ್ತದೆ ಎನ್ನುವುದಕ್ಕೂ ಕೆಲವು ಕಥೆಗಳನ್ನು ಸೃಜಿಸಿದರು. ಕುಂತಿ ತೆಗೆದುಕೊಂಡ ಸ್ವಾತಂತ್ರ್ಯ, ಶಕುಂತಲೆ ತೆಗೆದುಕೊಂಡ ಸ್ವಾತಂತ್ರ್ಯ ಅವರ ದುರಂತ ಬದುಕಿಗೆ ಕಾರಣವಾಗಿರುವುದನ್ನು ನಾವು ಕಂಡಿದ್ದೇವೆ.

ಹಾಗಾಗಿ ಲಕ್ಷ್ಮಣ ಯಾವುದೇ ಅರೆಮನಸ್ಸಿನಿಂದ ರಾಮಸೀತೆಯರ ಜೊತೆಗೆ ವನವಾಸಕ್ಕೆ ತೆರಳಲಿಲ್ಲ ಎಂಬುದು ಕಂಡುಬರುತ್ತದೆ. ಪೆರಿಯಾರರ ಬರಹಗಳನ್ನು ಗಮನಿಸಿದರೆ ಈ ಅಭಿಪ್ರಾಯಕ್ಕೆ ಮತ್ತಷ್ಟು ಪುಷ್ಟಿ ದೊರೆಯುತ್ತದೆ.

"ಸೀತೆಯೊಬ್ಬಳು ಚಾರಿತ್ರ್ಯಹೀನ ಹೆಂಗಸು..... ಸೀತೆಯನ್ನು ಯಾರು ಬೇಕಾದರು ಅಪಹರಿಸಿಕೊಂಡು ಹೋಗಲಿ ಅವಳು ಸಾಯಲಿ। ಅದರಿಂದಾಗುವುದಾದರೂ ಏನು। ಒಬ್ಬ ಕ್ಷುದ್ರ ಹೆಂಗಸಿಗಾಗಿ ನಾವು ಹೆಣಗಬೇಕೇ? ಎಂದು ತನ್ನ ಅಣ್ಣನೊಂದಿಗೆ ತನ್ನ ಅತ್ತಿಗೆಯ ಬಗ್ಗೆ ಬೇಜವಾಬ್ದಾರಿಯಿಂದ ಮಾತನಾಡುತ್ತಾನೆ.[೧೪] ಈ ವಾಕ್ಯಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಎರಡು ಅಭಿಪ್ರಾಯಗಳಿಗೆ ಬರಬಹುದಾಗಿದೆ. ಒಂದು ಸೀತೆಯ ಬಗ್ಗೆ ಲಕ್ಷ್ಮಣನಾಡುವ ಮಾತು ಆ ಕಾಲದಲ್ಲಿ ಸ್ತ್ರೀಯರಿಗೆ ನೀಡಲಾಗಿದ್ದ ಸ್ಥಾನಮಾನದ ಬಗ್ಗೆ ನಮಗೆ ಸ್ಪಷ್ಟ ಅಭಿಪ್ರಾಯ ದೊರೆಯುತ್ತದೆ. ಸ್ತ್ರೀಯೊಬ್ಬಳನ್ನು ಯಾರು ಬೇಕಾದರೂ ಹೇಗೆ ಬೇಕಾದರೂ ಬಳಸಿಕೊಳ್ಳಬಹುದು ಅದಕ್ಕೆ ನಿರ್ಬಂಧವಿರಲಿ ಎಂಬುದು. ಲಕ್ಷ್ಮಣನು ಹೇಳುವ ಮಾತುಗಳನ್ನು ರಾಮನ ಮಾತುಗಳೂ ಸಮರ್ಥಿಸುತ್ತವೆ. ರಾವಣನ ಸಂಹಾರವಾದ ಮೇಲೆ ಸೀತೆಯನ್ನು ಉದ್ದೇಶಿಸಿ ರಾಮನಾಡುವ ಮಾತನ್ನು ಗಮನಿಸಿದರೆ ನಮಗೆ ಇದು ವೇದ್ಯವಾಗುತ್ತದೆ,

'ನನ್ನ ಪೌರುಷವೇನೆಂಬುದನ್ನು ಜಗತ್ತು ಈಗ ಕಂಡಿತು। ನನ್ನ ಶ್ರಮವು ಫಲಿಸಿತು. ನನ್ನ ಪ್ರತಿಜ್ಞೆಯು ಕೈಗೂಡಿರುವುದರಿಂದ ಇನ್ನು ನಾನು ಸ್ವತಂತ್ರನಾಗಿದ್ದೇನೆ। ಎನ್ನುತ್ತಾನೆ. ಎದುರಿಗಿದ್ದ ಸೀತೆಯನ್ನು ನೋಡಿದಷ್ಟೂ ರಾಘುವನ ತಾಳ್ಮೆಯು ತಪ್ಪುತ್ತ ಹೋಗುತ್ತದೆ. ಉರಿಯುವ ಬೆಂಕಿಗೆ ತುಪ್ಪವನ್ನು ಹೊಯ್ದಂತಾಗಿ ಅವನ ಕೋಪವು ಹೆಚ್ಚಿತು. ಹುಬ್ಬು ಗಂಟಿಕ್ಕಿತು, ಓರೆಗಣ್ಣಿನಿಂದ ಜಾನಕಿಯನ್ನು ನೋಡುತ್ತಾ ಅವಳನ್ನು ಉದ್ದೇಶಿಸಿ ನೆರೆದಿದ್ದ ವಾನರ ರಾಕ್ಷಸರೆದುರಿಗೆ ರಾಘವನು ಪುರುಷವಾಕ್ಯಗಳನ್ನಾಡಿದನು, "ಸೀತೆ, ತನಗೊದಗಿದ

ಅವಮಾನ ಪ್ರಸಂಗವನ್ನು ಸಹಿಸಲಾರದೆ ಅದನ್ನು ತೊಡೆದುಹಾಕುವುದಕ್ಕಾಗಿ, ಮನುಷ್ಯನು ಏನು ಮಾಡಬೇಕೋ– ಏನು ಮಾಡಲು ಸಾಧ್ಯವೋ ಅದೆಲ್ಲವನ್ನೂ ಮಾಡಿ ಸಾಧಿಸಿದ್ದಾಯಿತು. ಈ ರಣಪರಿಶ್ರಮವೆಲ್ಲವೂ ನನ್ನ ಮಿತ್ರರ ಪರಿಶ್ರಮದಿಂದ ಫಲಿಸಿತು. ಭದ್ರೆ, ಈ ಪರಿಶ್ರಮವು ನಿನಗೋಸ್ಕರವಾಗಿ ಅಲ್ಲ ಎಂಬುದು ನಿನಗೆ ತಿಳಿದಿರಲಿ! ಸದಾಚಾರವನ್ನು ರಕ್ಷಿಸುವುದಕ್ಕಾಗಿಯೂ, ಎಲ್ಲೆಡೆಯೂ ನನಗೆ ಬರುವ ಅಪವಾದವನ್ನು ನಿರ್ಮೂಲಗೊಳಿಸುವುದಕ್ಕಾಗಿಯೂ, ವಿಶ್ವ ವಿಖ್ಯಾತವಾದ ನನ್ನ ವಂಶಕ್ಕೆ ಅಂಟುವ ಅಪಕೀರ್ತಿಯನ್ನು ವಿಧ್ವಂಸಗೊಳಿಸುವುದಕ್ಕಾಗಿಯೂ ಈ ಪರಿಶ್ರಮವನ್ನು ವಹಿಸಿದೆನು. ಪರಗೃಹ ವಾಸದಿಂದ ನಿನ್ನ ಚಾರಿತ್ರದಲ್ಲಿ ನನಗೆ ಸಂದೇಹ ಉಂಟಾಗಿದೆ। ನನ್ನೆದುರಿಗೆ ನಿಂತಿರುವ ನೀನು ನೇತ್ರರೋಹಿಯ ಎದುರಿಗಿರುವ ದೀಪದಂತೆ, ಕಣ್ಣನ್ನು ಕೊರೆಯುತ್ತಿರುವೆ! ಆದ್ದರಿಂದ, ಎಲೌ ಜನಕ ಜನಕರಾಜತನೆಯೇ, ಯಥೇಷ್ಟವಾಗಿ ಎಲ್ಲಿಗಾದರೂ ಹೋಗು, ಅನುಜ್ಞೆಯನ್ನು ಕೊಟ್ಟಿದ್ದೇನೆ! ಭದ್ರೆ, ಇದೋ ಹತ್ತು ದಿಕ್ಕುಗಳೂ ಇವೆ. ನಿನ್ನಿಂದ ನನಗೆ ಆಗಬೇಕಾದ್ದು ಏನೂ ಇಲ್ಲ. ಉತ್ತಮ ಕುಲದಲ್ಲಿ ಜನಿಸಿದ ತೇಜಸ್ವಿಯಾದ ಯಾವ ಪುರುಷನು ತಾನೇ, ಚಿರಕಾಲದವರೆಗೆ ಪರಗೃಹದಲ್ಲಿರುವ ಸ್ತ್ರೀಯನ್ನು ಒಳ್ಳೆಯ ಅಭಿಪ್ರಾಯದಿಂದ ಹೃತ್ಪೂರ್ವಕವಾಗಿ ಸ್ವೀಕರಿಸಿಯಾನು? ನೀನು ಈಗಲಷ್ಟೇ ರಾವಣನ ಮಡಿಲಿಂದ ಜಾರಿಬಂದಿರುವೆ. ಅವನ ಕೆಟ್ಟ ಕಣ್ಣಿಗೆ ಸಿಕ್ಕಿದವಳು. ಮಹತ್ತರವಾದ ವಂಶ ನನ್ನದು ಎಂದು ಹೇಳಿಕೊಳ್ಳುವ ನಾನು ಮತ್ತೆ ನಿನ್ನನ್ನು ಹೇಗೆ ಸ್ವೀಕರಿಸಲಿ? ವಂಶದ ಹೆಸರನ್ನುಳಿಸುವುದಕ್ಕಾಗಿ ನಿನ್ನನ್ನು ಜಯಸಿ ತಂದು ಕೈ ಬಿಟ್ಟ ಕೀರ್ತಿಯನ್ನು ಮತ್ತೆ ಗಳಿಸಿದ್ದೇನೆ. ನಿನ್ನಲ್ಲಿ ನನಗೆ ಯಾವ ಆಸಕ್ತಿಯೂ ಇಲ್ಲ. ಮನಬಂದ ಕಡೆಗೆ ಇಲ್ಲಿಂದ ಹೊರಟುಹೋಗು। ಎನ್ನುತ್ತಾನೆ. ರಾಮನ ಮಾತು ಇಲ್ಲಿಗೇ ಮುಗಿಯುವುದಿಲ್ಲ 'ನಾನು ಈ ಮಾತನ್ನು ನಿಶ್ಚಯಿಸಿಕೊಂಡೇ ಹೇಳಿದ್ದೇನೆ, ಬೇಕಾದರೆ ಲಕ್ಷ್ಮಣನನ್ನೋ, ಭರತನನ್ನೋ ಜೀವನಕ್ಕಾಗಿ ಆಶ್ರಯಿಸು. ವಾನರೇಂದ್ರನಾದ ಸುಗ್ರೀವನಿದ್ದಾನೆ, ರಾಕ್ಷಸೇಂದ್ರ ವಿಭೀಷಣನಿದ್ದಾನೆ ಯಾರಾನ್ನಾದರೂ ಆಶ್ರಯಿಸು, ಜೀವಿಸು ಎಂದು ಹೇಳುತ್ತಾನೆ.

ಶ್ರೀರಾಮನ ಮಾತುಗಳನ್ನು ಗಮನಿಸಿದರೆ ಲೈಂಗಿಕ ಕಟ್ಟುಪಾಡುಗಳು ಆ ಯುಗದಲ್ಲಿ ಅಷ್ಟು ಸ್ಪಷ್ಟವಾಗಿರಲಿಲ್ಲ ಎಂಬುದು ಗೋಚರವಾಗುತ್ತದೆ. ಅದಕ್ಕಾಗಿಯೇ ಆತ ಸದಾಚಾರದ ರಕ್ಷಣೆಯ ಮಾತನಾಡುತ್ತಾನೆ. ಲಕ್ಷ್ಮಣ, ಭರತ, ಸುಗ್ರೀವ ಅಥವಾ ವಿಭೀಷಣನನ್ನು ಆಶ್ರಯಿಸು ಎಂದು ಹೇಳುತ್ತಾನೆ. ಆ ಸಂದರ್ಭದಲ್ಲಿ ವಿವಾಹ ವ್ಯವಸ್ಥೆ ಸಂಪೂರ್ಣ ಅನುಷ್ಠಾನಕ್ಕೆ ಬಂದಿರಲಿಲ್ಲ ಎಂಬ ಶಾಂತಿಪರ್ವದ ಉಲ್ಲೇಖಗಳು ಇಲ್ಲಿ ಸ್ಪಷ್ಟವಾಗುತ್ತದೆ. ಆದರೆ ಪದೇ ಪದೇ ವಸಿಷ್ಠರು, ದೇವತೆಗಳು, ಕಡೆಗೆ ವಾಲ್ಮೀಕಿ ಆಕೆಯ ಚಾರಿತ್ರ್ಯದ ಬಗ್ಗೆ ಪ್ರಮಾಣ ಪತ್ರ ನೀಡುತ್ತಾರೆ. ಲೈಂಗಿಕ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕುವ ಆರಂಭಿಕ ಪ್ರಕ್ರಿಯೆಗಳಂತೆ ಇವು ಕಂಡುಬರುತ್ತವೆ. ಅದಕ್ಕಾಗಿ ಲಕ್ಷ್ಮಣನಿಗೆ ಊರ್ಮಿಳೆಯ ದೀರ್ಘಕಾಲದ ವಿಯೋಗವು ಯಾವುದೇ ಭಾದೆ ಕೊಡದು. ಕಾಡಿಗೆ ಹೊರಟ ಸೀತೆಗೆ ರಾಮನು ಹೇಳುವ ಮಾತುಗಳು ಜೀವನಕ್ಕಾಗಿ

ಯಾರನ್ನಾದರೂ ಆಶ್ರಯಿಸುವುದು ತಪ್ಪಲ್ಲ ಎಂಬ ಸಂದೇಶವನ್ನು ಸಾರುತ್ತವೆ. ಸೀತೆಯು ಕಾಡಿಗೆ ಹೊರಡುವ ಪ್ರಸಂಗವನ್ನು ಪೆರಿಯಾರ್ ಅವರು ಹೀಗೆ ವಿವರಿಸಿ ಸ್ತ್ರೀ ಪುರುಷ ಸಂಬಂಧ ತುಂಬಾ ತೆಳುವಾಗಿದ್ದುದನ್ನು ಸಮರ್ಥಿಸುತ್ತಾರೆ.

"ಸೀತೆಯು ಅವನೊಂದಿಗೆ ಕಾಡಿಗೆ ಹೋಗಬೇಕಾಗಿ ಬಂದಾಗ ಆಕೆಯು ಅರಮನೆಯಲ್ಲಿಯೇ ಭರತನ ಇಚ್ಛಾನುವರ್ತಿಯಾಗಿ ಉಳಿಯಬೇಕೆಂದು ಇಚ್ಛಿಸಿದ ಮತ್ತು ಅದರಿಂದ ತಮಗೆ ಮುಂದೆ ಬಹಳ ಲಾಭವಾಗುವುದೆಂದೂ ಹೇಳಿದ. ಇದನ್ನು ಕೇಳಿದ ಸೀತೆ ಸಿಟ್ಟಿಗೆದ್ದು 'ನೀನೊಬ್ಬ ಷಂಡ! ನೀನೊಬ್ಬ ಗಂಡಿನ ವೇಷದಲ್ಲಿರುವ ಹೆಂಗಸು (ಶಿಖಂಡಿ) ಎಂದು ತಿಳಿಯದೆ ನನ್ನ ತಂದೆ ನನ್ನನ್ನು ನಿನಗೆ ಮದುವೆ ಮಾಡಿದರು. ಬೇರೆಯವರಿಗೆ ತನ್ನ ಹೆಂಡತಿಯನ್ನು ತೆರವಿಟ್ಟು ಹೊಟ್ಟೆಹೊರೆಯುವವನಂತೆ ನೀನು ಮಾತನಾಡುತ್ತಿದ್ದೀಯೆ' ಎಂದು ಕಿರುಚುತ್ತಾಳೆ.[೧೫] ಆ ಕಾಲದಲ್ಲಿ ಹೆಂಗಸರನ್ನು ತೆರವಿಟ್ಟು ಜೀವನ ನಿರ್ವಹಣೆ ಮಾಡುವ ಕ್ರಮವಿತ್ತು ಎಂಬುದು ಇದರಿಂದ ಕಂಡುಬರುತ್ತದೆ. ತ್ರೇತಾಯುಗದಲ್ಲಿ ಸ್ವಾಮಿನಿಷ್ಠೆ, ಪಾತಿವ್ರತ್ಯ, ಏಕಪತ್ನಿ ವ್ರತ, ಮುಂತಾದ ಪರಿಕಲ್ಪನೆಗಳು ಇನ್ನು ಗರಿಗಟ್ಟುತ್ತಿದ್ದವು. ಅವುಗಳನ್ನು ಚಿರಸ್ಥಾಯಿಗೊಳಿಸಲು ಋಷಿಮುನಿಗಳು ಪ್ರಯತ್ನಿಸುತ್ತಿದ್ದರು ಎಂಬುದು ಸ್ಪಷ್ಟ. ಆ ಕಾರಣಕ್ಕಾಗಿಯೇ ಲಕ್ಷ್ಮಣನ ಸ್ವಾಮಿನಿಷ್ಠೆ ಭಕ್ತಿಯ ಬಗ್ಗೆ ವಾಲ್ಮೀಕಿ, ಕುವೆಂಪು, ಪಂಪ, ಜೈನ ರಾಮಾಯಣಗಳ ಕರ್ತೃಗಳು ಸಾಕಷ್ಟು ವಿವರಣೆಗಳನ್ನು ಒದಗಿಸಿದ್ದಾರೆ. ಸಾಕೇತ ರಚಿಸಿದ ಗುಪ್ತರ ವಿರಹವಾಗಲಿ, ಕುವೆಂಪು ಅವರ ತಪಸ್ವಿನಿ ಆಯಾಮವಾಗಲಿ ಲಕ್ಷ್ಮಣನಿಗೆ ಒದಗಿ ಬರುವುದೇ ಇಲ್ಲ. ಅವನ ವಿರಹ, ನೋವನ್ನು ಸ್ಪಂದನಶೀಲಾ ಕವಿಗಳು ರಾಮಸೀತೆಯರ ಬಾಯಿಯಿಂದ ವ್ಯಕ್ತಪಡಿಸುವ ಸಾಹಸ ಮಾಡಿದ್ದಾರೆ. ವಾಲ್ಮೀಕಿಯಂತೂ ಅದರ ಬಗ್ಗೆ ತಲೆಕೆಡಿಸಿಕೊಂಡಂತಿಲ್ಲ.

ಏಕಪತ್ನಿವ್ರತ, ಪಾತಿವ್ರತ್ಯ ಮುಂತಾದ ಪರಿಕಲ್ಪನೆಗಳು ರಾಮಾಯಣ ಕಾಲದಲ್ಲಿ ದ್ವಂದದಲ್ಲಿದ್ದವು ಎಂಬುದು ಭರತನ ಮಾತುಗಳಿಂದಲೂ ಕಂಡುಬರುತ್ತದೆ. 'ತನ್ನ ತಾತನ ಮನೆಯಿಂದ ವಾಪಸ್ಸು ಬಂದು ಭರತ ಮೊದಲು ಕೇಳುವ ಮಾತು' ರಾಮನು ಯಾವುದಾದರೂ ಹೆಂಗಸಿಗೆ ಅತ್ಯಾಚಾರ ಮಾಡಿದನೇ ಎಂದು ಪ್ರಶ್ನಿಸುವುದು. (ಅಯೋಧ್ಯಾ ಕಾಂಡ, ೭೨ನೆಯ ಅಧ್ಯಾಯ).[೧೬] ಸ್ತ್ರೀಯ ಸಹಮತಿಯಿಲ್ಲದೆ ರಾಮ ಅತ್ಯಾಚಾರ ಎಸಗಿದನೇ ಎಂಬುದು. ಅನುಮತಿ ರಹಿತ ಗಮ್ಯ ಅಪರಾಧವಾಗಿತ್ತು ಎಂಬುದು ಇಲ್ಲಿ ಕಂಡುಬರುತ್ತದೆ. ಮುಂದುವರಿದು ರಾಮನೊಂದಿಗೆ ಕಾಡಿನಲ್ಲಿ ಮಾತುಕತೆ ನಡೆಸುತ್ತಾ "ರಾಜ್ಯಕ್ಕೆ ವಾಪಸ್ಸು ಬಂದು ವಿನೋದಪ್ರಿಯ ಅಂತಃಪುರದ ಹೆಂಗಸರ ನಡುವೆ ಸಿಂಹಾಸನವನ್ನಲಂಕರಿಸು" ಎಂದು ಭರತ ಅರಿಕೆ ಮಾಡಿಕೊಳ್ಳುತ್ತಾನೆ (ಅಯೋಧ್ಯಾಕಾಂಡ ೧೦೫ನೆಯ ಅಧ್ಯಾಯ) ವಾಲಿಯನ್ನು ಮರೆಯಲ್ಲಿ ನಿಂತು ಸಂಹಾರ ಮಾಡಿದ್ದು ತಪ್ಪು ಎಂಬ ಅರಿವು ಬಂದಾಗ ಅದಕ್ಕೆ ರಾಮ ತಾನೇ ಒಂದು ಸಮರ್ಥನೆಯನ್ನು ಕೊಟ್ಟುಕೊಳ್ಳುತ್ತಾನೆ. 'ಪರಪತ್ನಿಗಳುಪಿದಾತಂ'– ಕಾಮಾಂಧನನ್ನು ವಧಿಸುವುದು ತನ್ನ ಕರ್ತವ್ಯವೆಂದು ತಿಳಿದು ಹಿಂದು ಮುಂದು ನೋಡದೆ ವಾಲಿಯನ್ನು ವಧಿಸುವ ಪ್ರತಿಜ್ಞೆ ಮಾಡಿದೆ ಎಂದು ರಾಮ ಹೇಳುತ್ತಾನೆ.

ಕುವೆಂಪು ಅವರು ಅಸುರಿ ಶಕ್ತಿಯನ್ನು ಸಂಹರಿಸಿದ ಭಗವಂತ ಎಂಬ ಸಮರ್ಥನೆಯನ್ನು ನೀಡುತ್ತಾರೆ. ಭಗವಂತನ ಕೃಪೆ ಪಾಪದ ಉದ್ಧಾರಾರ್ಥವಾಗಿ ಪಾಪಿಯನ್ನು ಬೆನ್ನಟ್ಟುತ್ತದೆ.

**ನಿರ್ಲಕ್ಷಿಸುತೆ ದೈವವಂ, ಪ್ರತಿಭಟಿಸಿ**
**ದೈವೀಪರಂಗಳು ಶಕ್ತಿಯಂ, ನೆಮ್ಮುತ್ತೆ**
**ತನ್ನಹಂಕಾರಮಂ ಸ್ವಬಲಮಂ ಸ್ವಾರ್ಥಮಂ,**
**ಚಲದಿಂ ವಿರೋಧಿಸಲ್ ವೈರಭಾವವನಾಂತ**
**ಆಸುರೀ ಸಾಧನೆಯ ದೈವೀವಿಮುಖಮಪ್ಪ**
**ಲೌಕಿಕ ಪರಾಕ್ರಮದ ಶಿಕ್ಷಾರಕ್ಷೆಗಿನ್ನಿಹುದೆ,**
**ಪೇಳ್, ಕೃಪಾಬಾಣಕ್ಕೆ ಬೆನ್ನಲ್ಲದನ್ಯ ಲಕ್ಷ್ಯಂ**
**ತುದಿಗೆ?**[೧೭]

ಕೃಪಾಬಾಣ ಬೆನ್ನಿನಿಂದಲೇ ಬರುವುದು. ಅದು ಎದುರಿಗೆ ಬಂದರೆ ಕೃಪಾ ಬಾಣವಾಗುವುದಿಲ್ಲ, ಇರಲಿ ಮುಂದೆ ವಾಲಿಯ ಕಳೇಬರದ ಮುಂದೆ ರೋಧಿಸುತ್ತಿದ್ದ ತಾರೆಯನ್ನು ಸಮಾಧಾನಪಡಿಸಿ ಸುಗ್ರೀವನೊಂದಿಗೆ ಬದುಕುವಂತೆ ಸೂಚಿಸುತ್ತಾನೆ. ಇಂತಹ ದ್ವಂದಗಳು ಉದ್ದಕ್ಕೂ ನಮಗೆ ಗೋಚರವಾಗುತ್ತವೆ. ಪೋಲಂಕಿ ರಾಮಮೂರ್ತಿಯವರು ಲಕ್ಷ್ಮಣನನ್ನು ಕುರಿತು ಸೀತೆಯಾಡುವ ಮಾತುಗಳು ಲಕ್ಷ್ಮಣನಿಗೆ ಸೀತೆಯಲ್ಲಿ ಒಂದು ರೀತಿಯ ಮೋಹವಿತ್ತು ಎಂಬುದನ್ನು ಸಮರ್ಥಿಸುತ್ತದೆ. ಸೀತೆಯಲ್ಲಿದ್ದ ರಾಮ ನಿಷ್ಠೆಯನ್ನು ಪ್ರಶ್ನಿಸುವ ಉದ್ದೇಶ ನಮ್ಮದಲ್ಲ ಊರ್ಮಿಳೆಯಂತಹ ಪ್ರಾಣಕಾಂತೆಯನ್ನು ೧೪ ವರುಷ ಬಿಟ್ಟು ಒಂದರಗಳಿಗೆಯೂ ಆಕೆಯ ಬಗ್ಗೆ ಚಿಂತಿಸದೇ ಇರುವುದು ಹಾಗೂ ಸ್ತ್ರೀ ಪುರುಷ ಸಂಬಂಧಗಳು ಎಷ್ಟು ಜಾಳು ಜಾಳಾಗಿದ್ದವು ಎಂಬುದನ್ನು ದೃಢಪಡಿಸುವ ಉದ್ದೇಶ ಮಾತ್ರ ನಮ್ಮದು. ಮುಂದೆ ಪುರೋಹಿತಶಾಹಿ ವ್ಯವಸ್ಥೆ ವಿವಾಹ ಎಂಬ ವ್ಯವಸ್ಥೆಯನ್ನು ಆರಂಭಿಸಿ, ಅನೇಕ ಮಾದರಿಗಳನ್ನು ಸೃಷ್ಟಿಸಿ ಆಕೆಯನ್ನು ಆಧೀನಳನ್ನಾಗಿಸಿ, ತನಗೆ ಮಾತ್ರ ನಿಷ್ಠೆಯಿಂದ ಇರುವಂತೆ ಮಾಡಿ, ತಾನು ಹಾಕಿದ ಸಂಸ್ಕೃತಿ ಎಂಬ ಹೆಸರಿನ ಗೆರೆದಾಟಿದರೆ ಆಗಬಹುದಾದ ದುರಂತವನ್ನೂ ಮತ್ತದೇ ಮಾದರಿಗಳ ಮೂಲಕ ನಿರ್ದೇಶಿಸಿರುವುದನ್ನು ಪ್ರಶ್ನಿಸುವ ಸಲುವಾಗಿ ಮೂಲ ವಾಲ್ಮೀಕಿಯ ಸಾಲುಗಳನ್ನೇ ಆಧಾರವಾಗಿಟ್ಟುಕೊಂಡು ರಾಮಮೂರ್ತಿಯವರು ಲಕ್ಷ್ಮಣನನ್ನು ಕುರಿತು ಹೇಳಿದ ಮಾತುಗಳನ್ನು ಉಲ್ಲೇಖಿಸಬಯಸುತ್ತೇನೆ. ಹನಮಂತನ ಮೂಲಕ ಸೀತೆ ರಾಮ ಲಕ್ಷ್ಮಣರಿಗೆ ಕಳುಹಿಸುವ ಸಂದೇಶ,

"ಕೌಸಲ್ಯಾಮಾತೆಯು ಲೋಕಸಂರಕ್ಷಣಾರ್ಥವಾಗಿ ಯಾರನ್ನು ಹಡೆದಿರುವಳೋ (ಈ ಮಾತುಗಳಲ್ಲಿ ತನ್ನ ಉದ್ಧಾರದ ಉದ್ದೇಶ ರಾಮನಿಗಿಲ್ಲ ಎಂಬ ಅಂಶ ವ್ಯಂಜಿತವಾಗುತ್ತದೆ) ಆತನಿಗೆ ಕುಶಲವನ್ನು ವಿಚಾರಿಸಿದ್ದೇನೆಂದು ನನ್ನ ಪರವಾಗಿ ಹೇಳು, ತಲೆಬಾಗಿ ನಮಸ್ಕರಿಸಿದ್ದೇನೆಂದು ತಿಳಿಸು (೫೫–೫೬)

ಸುಮಿತ್ರಾದೇವಿಯ ಸುಕುಮಾರ ಲಕ್ಷ್ಮಣ. ಅವನು ಹೂಮಾಲೆಗಳು, ರತ್ನಗಳು, ಉತ್ತಮ ಸ್ತ್ರೀಯರು, (ಸ್ತ್ರೀಲೋಲ ಎಂಬ ಅಭಿಪ್ರಾಯ ಮೂಡುತ್ತದೆ) ಇನ್ನೆಲ್ಲಿಯೂ ದೊರಕದಷ್ಟು ಐಶ್ವರ್ಯ– ಇವೆಲ್ಲವನ್ನು ತೊರೆದು ತಂದೆತಾಯಿಗಳನ್ನು ಒಪ್ಪಿಸಿ ಅಣ್ಣನ ಹಿಂದೆಯೇ ಬಂದುಬಿಟ್ಟನು (೫೭–೫೮). ಆ ಧರ್ಮಾತ್ಮನು ಉತ್ತಮವಾದ ಸುಖವನ್ನು ತ್ಯಜಿಸಿ ಕಾಡಿನಲ್ಲಿ ಅಣ್ಣನಿಗೆ ಬೆಂಬಲವಾಗಿ ಇದ್ದುಬಿಟ್ಟನು. ಅವನಿಗೆ ಸಿಂಹದಂತಹ ಹೆಗಲು; ಅಜಾನುಬಾಹು; ಧೀರ, ನೋಡಿದರೆ ಆನಂದವಾಗುವುದು. ರಾಮನನ್ನು ತಂದೆಯೆಂದೂ, ನನ್ನನ್ನು ತಾಯಿಯೆಂದೂ ತಿಳಿದುಕೊಂಡಿದ್ದಾನೆ. ರಾವಣನು ನನ್ನನ್ನು ಅಪಹರಿಸಿದ್ದು ಆ ವೀರನಿಗೆ ಗೋತ್ತಾಗದೇ ಹೋಯಿತು. ಲಕ್ಷ್ಮಣನು ಗುರುಹಿರಿಯರ ಸೇವಕ; ಸಮರ್ಥ; ಹೆಚ್ಚು ಮಾತನಾಡತಕ್ಕವನಲ್ಲ. ನನ್ನ ಮಾವನಿಗೆ ಪ್ರಿಯನಾದ ರಾಜಪುತ್ರ, ಆತನಿಗೆ ತಕ್ಕಮಗ. ರಾಮನಿಗೆ ಲಕ್ಷ್ಮಣನೆಂದರೆ ನನ್ನ ಮೇಲೆ ಇರುವುದಕ್ಕಿಂತಲೂ ಅಧಿಕ ಪ್ರೀತಿ (೬೧–೬೨). ಯಾವ ಕಾರ್ಯವನ್ನು ವಹಿಸಿದರೂ ನಡೆಸಬಲ್ಲ ದಕ್ಷ. ರಾಮನು ಅವನನ್ನು ಕಂಡು ಮೃತನಾದ ತನ್ನ ತಂದೆಯನ್ನು ಸ್ಮರಿಸಿಕೊಂಡು ದುಃಖಿಸದೆ ಇದ್ದನು. ಲಕ್ಷ್ಮಣನು ಮೃದು ಸ್ವಭಾವದವನು, ಶುದ್ಧಾತ್ಮ, ಕಾರ್ಯದಕ್ಷ. ಆತನ ಕುಶಲವನ್ನು ವಿಚಾರಿಸಿದ್ದೇನೆಂದು ಹೇಳು.[೧೮] ಮತ್ತೆ ಈ ಸಾಲುಗಳಿಂದ ನಮ್ಮ ದ್ವಂದ್ವ ಮುಂದುವರಿಯುತ್ತದೆ. ಇಷ್ಟೆಲ್ಲಾ ಸದಭಿಪ್ರಾಯವಿದ್ದ ಸೀತೆ ಮಾರೀಚನ ವಧೆ ಸಂದರ್ಭದಲ್ಲಿ ಅಷ್ಟೊಂದು ಹೀನಾಯವಾಗಿ ನಿಂದಿಸಿದ್ದೇಕೆ. ಲೋಕದ ದೃಷ್ಟಿಗೆ ಸರಿಯೆಂದು ತೋರಲು ಅಥವಾ ಆಕೆಯ ರಾಮ ನಿಷ್ಠೆಯ ಪ್ರಮಾಣವನ್ನು ಮತ್ತೊಮ್ಮೆ ದೃಢಪಡಿಸಲು ಕವಿ ಅಗತ್ಯಕ್ಕಿಂತ ಹೆಚ್ಚು ಕಠೋರವಾದ ಮಾತುಗಳನ್ನು ಸೀತೆಯ ಬಾಯಿಂದ ಆಡಿಸಿದ್ದಾನೆ. ಸೀತೆಯ ಮಾತುಗಳಲ್ಲಿ ಊರ್ಮಿಳೆಯಂತಹ ಪ್ರಾಣಸಖಿಯನ್ನು ಬಿಟ್ಟುಬಂದ ಲಕ್ಷ್ಮಣ ಎಂಬುದು ಕಂಡುಬರುವುದಿಲ್ಲ, ಬದಲಿಗೆ ಉತ್ತಮ ಸ್ತ್ರೀಯರು' ಎಂಬ ಮಾತು ಬರುತ್ತದೆ. ಉತ್ತಮ ಸ್ತ್ರೀಯರಲ್ಲಿ ಊರ್ಮಿಳೆಯೂ ಒಬ್ಬಳಿರಬಹುದು ಎಂದು ನಾವು ಭಾವಿಸಿಕೊಳ್ಳಬೇಕು.

ಇಂತಹ ಲೈಂಗಿಕ ಸ್ವಾತಂತ್ರ್ಯವನ್ನು ಹೊಂದಿದ್ದ ರಾಮಾಯಣ ಕಾಲದ ಸ್ತ್ರೀಯರನ್ನು ಅಥವಾ ಸ್ವತಂತ್ರವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಂತಹ ಅವಕಾಶಗಳು ಆ ಕಾಲದಲ್ಲಿತ್ತು ಎಂಬುದು ಕಂಡುಬರುತ್ತದೆ. ಮುಂದೆ ಈ ಸ್ವಾತಂತ್ರ್ಯವನ್ನು ಕಳೆದುಕೊಂಡ ಸ್ತ್ರೀಯರು ಈಗಲೂ ಅಧೀನರಾಗಿ, ಎರಡನೆಯ ಪ್ರಜೆಯಾಗಿ ಸಂಸ್ಕೃತಿ ಸಂಸ್ಕಾರದ ಹೆಸರಿನಲ್ಲಿ ಹಾಕಿದ ಗೆರೆಯನ್ನು ದಾಟಲಾರದೆ, ಅಲ್ಲಿರಲೂ ಆಗದೆ ಒದ್ದಾಡುತ್ತಿದ್ದಾರೆ. ಶ್ರೀಮತಿ ಎಚ್.ಎಸ್. ಅವರ ಹೆಣ್ಣು ಹೆಂಗಸು ಕೃತಿಯಲ್ಲಿ ಹೆಣ್ಣಿನ ಲೈಂಗಿಕತೆಯನ್ನು ಪ್ರತಿಬಂಧಿಸುವ ಬಹುಮುಖ್ಯ ಸಾಮಾಜಿಕ ಸಂಸ್ಥೆಯೇ ವಿವಾಹ ಎಂದು ಪ್ರತಿಪಾದಿಸುತ್ತಾರೆ. ಸಮಾಜದ ಸದಸ್ಯರ ಲೈಂಗಿಕತೆಯನ್ನು ಕ್ರಮಬದ್ಧಗೊಳಿಸುವ ನಾಗರಿಕತೆಯ ಹೆಸರಿನಲ್ಲಿ ಹುಟ್ಟಿಕೊಂಡ ಒಂದು ಸಂಸ್ಥೆ ಇದು. ಆದರೆ, ವಾಸ್ತವದಲ್ಲಿ ಹೆಣ್ಣಿನ ಲೈಂಗಿಕತೆಯನ್ನು ಒಬ್ಬ ಪುರುಷನಿಗೆ ಅಧೀನಪಡಿಸುವುದೇ ಈ ಸಂಸ್ಥೆಯ ಮೂಲ ಉದ್ದೇಶ ಎನ್ನುವುದೇನೂ ರಹಸ್ಯದ ಸಂಗತಿಯಲ್ಲ, ಹೆಣ್ಣಿನ ಬಗ್ಗೆ ಹೊಮ್ಮಿರುವ ಎಲ್ಲ

ಸಾಮಾಜಿಕ ಚಿಂತನೆಗಳನ್ನೇ ಪೋಷಿಸುವತ್ತಾ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗುತ್ತಿದೆ.[೧೯] ವಿವಾಹ ವ್ಯವಸ್ಥೆಯಿಂದ ಹೊರಗುಳಿದು ಸ್ವತಂತ್ರ್ಯ ಲೈಂಗಿಕತೆಯನ್ನು ಅನುಭವಿಸಲು ಸ್ತ್ರೀ ಒಂದು ವೇಳೆ ಮುಂದಾದರೆ ಕುಂತಿ, ಶಕುಂತಲೆಯರಿಗಾದ ಸ್ಥಿತಿಯೇ ಇಂದಿನ ಆಧುನಿಕ ಮಹಿಳೆಗೂ ಆಗುತ್ತದೆ. ಶ್ರೀಮತಿಯವರ ಮಾತುಗಳಲ್ಲೇ ಹೇಳುವುದಾದರೆ, ಇಂದಿನ ನಾಗರಿಕತೆಯಲ್ಲಿ ಹೆಣ್ಣಿಗೆ ತನ್ನ ಲೈಂಗಿಕತೆಯ ಮೇಲೆ ಸಾಕಷ್ಟು ಹತೋಟಿ ಸಿಕ್ಕಿದೆ ಎಂಬ ಭ್ರಮೆ ಹುಟ್ಟಿಸುವ ಸಂದರ್ಭಗಳು ಸಾಕಷ್ಟಿವೆ. ಪ್ರೇಮ ವಿವಾಹದಿಂದ ಹಿಡಿದು, ವಿಧವಾ ವಿವಾಹ, ವಿವಾಹ ವಿಚ್ಛೇದನೆ, ತನಗೆ ಮಗು ಬೇಡವೆನಿಸಿದರೆ ಸಂತಾನ ನಿರೋಧಕಗಳ ಬಳಕೆ ಅಥವಾ ಗರ್ಭಪಾತಕ್ಕೆ ಅವಕಾಶಗಳಂಥವು ಹೆಣ್ಣಿನ ಎದುರು ತೆರೆದುಕೊಂಡಿವೆ ಅಥವಾ ಇನ್ನೂ ಮುಂದೆ ಹೋಗಿ, ತೀವ್ರವಾದಿಯಾಗಿ ಪುರುಷ ಸಂಗವನ್ನೇ ನಿರಾಕರಿಸಿ ಸಲಿಂಗಿಯಾಗಿ ಲೆಸ್ಬಿಯಾನ್ ಎನಿಸುವವರೆಗಿನ ಪ್ರಸಂಗಗಳೂ ಇವೆ. ಆದರೆ, ಈ ಯಾವುದೇ ಸಂದರ್ಭದಲ್ಲೂ, ಲೈಂಗಿಕತೆಯ ಸ್ವಾತಂತ್ರ್ಯವನ್ನು ಚಲಾಯಿಸಲು ಹೊರಟ ಹೆಣ್ಣು ಸಮಾಜದ ಎದುರು ಅಪರಾಧಿ ಎನಿಸಿ ಅಪಮಾನಿತಳಾಗುತ್ತಾಳೆ. ಅರಕ್ಷಿತ, ನಿರ್ಗತಿಕ ಸ್ಥಿತಿಗೆ ಇಳಿಯಬೇಕಾದಂತಹ ತೀರ್ವ ಶಿಕ್ಷೆ ಈ ಅಪರಾಧಕ್ಕೆ ಕಾದಿಟ್ಟದ್ದು ಎಂಬುದೂ ಖಚಿತವೇ. ಸಮಾಜವು ಒಡ್ಡುವ ಈ ಸವಾಲುಗಳನ್ನು ಎದುರಿಸಿಯೂ ತನ್ನ ಲೈಂಗಿಕ ಸ್ವಾತಂತ್ರ್ಯವನ್ನು ಜಾರಿಗೊಳಿಸುತ್ತೇನೆ ಎಂಬ ಧೈರ್ಯ ಸಾಧಾರಣ ಯಾವ ಹೆಂಗಸಿಗೂ ಬರಲಾರದು.[೨೦] ರಾಮಾಯಣದ ಕಾಲದಿಂದ ಇಂದಿನವರೆಗೆ ಪುರುಷ ಪ್ರಧಾನ ವ್ಯವಸ್ಥೆ ಯಾವ ನಿರ್ಬಂಧಗಳನ್ನು ವಿಧಿಸಿತ್ತೊ ಅದರಿಂದ ಹೊರಬರಲು ಇನ್ನು ಸಾಧ್ಯವಾಗಿಲ್ಲ. ಮುಂದೆಯೂ ಸಾಧ್ಯವಾಗುತ್ತೊ ಇಲ್ಲವೋ ಗೊತ್ತಿಲ್ಲ. ಅಷ್ಟೊಂದು ಧೈರ್ಯವಾಗಿ ಸಮಾಜವನ್ನು ಎದುರಿಸಿ ಬದುಕಲು ಸಾಧ್ಯವೇ ಇಲ್ಲ. ಸತಿಯಾಗಲೂ ಒಪ್ಪದ ತಾಯಿಯನ್ನು ಮಗನೇ ಬಲವಂತವಾಗಿ ಅಗ್ನಿಗೆ ದೂಕಿ ಮುಂದೆ ಬರುತ್ತದೆ ಎಂದು ಭವಿಷ್ಯ ನುಡಿದ ಕಂಟಕಗಳಿಂದ ದೂರಾದ ಸಂದರ್ಭಗಳು ನಮ್ಮ ಮುಂದಿವೆ. ಇದಕ್ಕಿಂತ ದುರಂತ ಮತ್ತೊಂದಿಲ್ಲ ಎಂಬುದನ್ನು ನಾವು ಗಂಭೀರವಾಗಿ ಗಮನಿಸಬೇಕು.

ಗುಪ್ತರ ಊರ್ಮಿಳೆ ಸ್ಥಾಪಿತ ಮೌಲ್ಯಗಳನ್ನು ಪ್ರತಿಪಾದಿಸುವ ಸ್ತ್ರೀ ರೀತಿಯಲ್ಲೇ ಚಿತ್ರಣಗೊಂಡಿದ್ದಾಳೆ. ಅವರು ವರ್ಣಿಸಿರುವ ಪ್ರೇಮಜೀವನ ಮತ್ತು ವಿರಹ ಜೀವನಗಳ ನಡುವೆ ಸಮತೋಲನ ಕಾಯ್ದುಕೊಳ್ಳಲು ಪ್ರಯತ್ನಿಸಿದ್ದಾರೆ. ಪ್ರಧಾನಗುರುದತ್ತ ಅವರು Long Fellow ಹಾಗೂ ಗಯಟೆಯ ಮಾತುಗಳನ್ನು ಉಲ್ಲೇಖಿಸುತ್ತಾ ಈ ಸಮತೋಲನದಿಂದಲೇ ಜೀವನದ ಸಮ್ಯಕ್ ಚಿತ್ರವನ್ನು ಪಡೆಯುಲು ಸಾಧ್ಯ ಎಂದು ವಿವರಿಸುತ್ತಾರೆ. ಅವರ ಅಭಿಪ್ರಾಯವನ್ನು ಗಮನಿಸೋಣ.

**In to each life some rain must fall,**
**some days must be dark and dreary**

**('Rainy day', Long Fellow)**

ಇಂತಹ ಪ್ರಸಂಗಗಳಲ್ಲಿ ಕಣ್ಣುಗಳಿಂದ ಧುಮುಕಿ ಹರಿಯುವ ಅಶ್ರುಧಾರೆ ಸುಖಮಯ ದಿನಗಳ ಹರ್ಷಾಶ್ರುಗಳೊಡನೆ ಸೇರಿ ಪೂರ್ಣ ಜೀವನದ ಸಮ್ಯಕ್ ಚಿತ್ರವನ್ನು ನಮ್ಮ ಮುಂದಿರುಸುತ್ತದೆ. ಇಂತಹ ಅನುಭವಗಳಿಂದ ವಂಚಿತನಾದ ವ್ಯಕ್ತಿ ದೈವೀಶಕ್ತಿಯ ಅನುಭವದಿಂದಲೂ ವಂಚಿತನಾಗುವನೆಂಬುದು 'ಗಯಟೆಯ' ಅಭಿಪ್ರಾಯ.[30] ಅಂದರೆ ಸುಖದುಃಖಗಳು ಎರಡೂ ಇದ್ದರೆ ಅನುಭಾವಿಗಳಾಗಲೂ ಸಾಧ್ಯ. ಪ್ರಕೃತಿಯಲ್ಲಿ ಕತ್ತಲೆ, ಮಳೆ ಇರುವಂತೆ ಜೀವನದಲ್ಲೂ ಅಂತಹ ನೋವಿನ ಘಟನೆಗಳು ಘಟಿಸಬೇಕೆಂಬುದು ಅವರ ಅಭಿಪ್ರಾಯ. ಜೀವನದ ಅದರಲ್ಲೂ ಯೌವನ ಸುಖವನ್ನು ಅನುಭವಿಸುವಂತಹ ಅಮೂಲ್ಯವಾದ ೧೪ ವರ್ಷಗಳು ಪತಿಯಿಂದ ದೂರವಿರುವಂತಹ ಪ್ರಸಂಗ ಒದಗಿಬಂದರೆ ಕೆಲವೇ ದಿನಗಳ ಸಖ್ಯದ ನೆನಪಿನಲ್ಲಿ ಸುದೀರ್ಘವಾದ ಅವಧಿಯನ್ನು ಸವೆಸುವುದು ಹೇಗೆ. ಅದೂ ಹೋಗಲಿ ಇದು ಸೀತೆಗೂ ಅನ್ವಯಿಸಿದ್ದರೆ ಸರಿ. ಅಕ್ಕನಿಗೆ ದೊರೆತ ಪತಿ ಸಾಮೀಪ್ಯದ ಯೋಗ ಆಕೆಗೆ ದೊರೆಯದೇ ಇದ್ದುದು ಘೋರ ಅನ್ಯಾಯವಲ್ಲವೆ. ಸೀತೆಯ ಮಾತುಗಳನ್ನು ಕೇಳಿ ಆಕೆ ಮತ್ತಷ್ಟು ನೋವು ಅನುಭವಿಸುತ್ತಾಳೆ,

**ಇಂದು ನನಗೊದಗಿದೀ ಸುಕೃತವು**

**ದೊರೆಯದೇ ಹೋಯ್ತೆ ನಿನಗಕಟಾ॥**

ಇಷ್ಟಕ್ಕೆ ಸೀತೆ ಸುಮ್ಮನಾಗುತ್ತಾಳೆಯೇ, ಇಲ್ಲ. ಈಶ್ವರನೇ ಈಗ ನಮಗೆ ರಕ್ಷಕನೆಂದು ಊರ್ಮಿಳೆ ಹೇಳಿದ ಮಾತಿಗೆ ಸೀತೆಯೂ ಧ್ವನಿಗೂಡಿಸಿ ಹೌದು, ತಂಗಿ, ಮನೆ, ಕಾಡು ಎಲ್ಲ ಕಡೆಯೂ ಅವನೇ ನಮಗೆ ರಕ್ಷಕನೆಂದು ನುಡಿಯುತ್ತಾಳೆ.

**"ಬಹನ್! ಧೈರ್ಯಕಾ ಅವಸರ್ ಹೈ।**

**ವಹ್ ಬೋಲಿ– 'ಅಬ್ ಈಶ್ವರ್ ಹೈ" ।**

**ಸೀತಾ ಬೋಲೀ ಕಿ– ಹ್ನಾಬಹನ್,**

**ಸಭೀ ಕಹ್ಣೀ, ಗೃಹ್ ಹೊ ಕಿ ಗಹನ್।"**

ನನಗೆ ಕಾಡಿನಲ್ಲಿ ಈಶ್ವರನ ರಕ್ಷೆ, ಮನೆಯಲ್ಲಿರುವ ನಿನಗೂ ರಕ್ಷೆ ಎಂದು ಹೇಳುವ ಮೂಲಕ ನೀನು ಮನೆಯಲ್ಲೇ ಇರು ಎಂದು ಪರೋಕ್ಷವಾಗಿ ನುಡಿಯುತ್ತಾಳೆ. ತನಗಿಲ್ಲದ ಅತ್ತೆ ಮಾವಂದಿರ ಸೇವೆ ಮಾಡಿ ಪಡೆಯುವ ಸಿದ್ಧಿ ಆಕೆಗೆ ದೊರೆಯಲಿ ಎಂದು ಹಾರೈಸುತ್ತಾಳೆ. ನಿನ್ನ ಕರ್ಮ ನೀನು ಅನುಭವಿಸು ನಾನು ರಾಮನೊಂದಿಗೆ ಕಾಡಿಗೆ ಹೋಗಿ ಸುಖವಾಗಿರುತ್ತೇನೆ ಎಂಬ ಅರ್ಥ ಈ ವಾಕ್ಯಗಳಿಂದ ಮೂಡುತ್ತದೆ,

**ಅತ್ತೆ ಮಾವಂದಿರ ಸ್ನೇಹಲತೆ, ಸೋದರಿ ಊರ್ಮಿಳ ಮಹಾವ್ರತೆ,**

**ನಾನೆಲ್ಲಿಯು ಪಡೆಯದ ಸಿದ್ಧಿಯ ಪಡೆವಳು ಇಲ್ಲಿಯೆ.**

ಈ ಸಾಲುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಕವಿಯ ಇಂಗಿತ ಅರ್ಥವಾಗುತ್ತದೆ. ಸೀತೆ ಕೂಡ ರಾಮನೊಂದಿಗಿದ್ದರೂ ಯಾವುದೇ ಸಾರ್ಥಕತೆ ಅವಳಿಗೆ ಲಭಿಸುವುದಿಲ್ಲ ಎಂಬುದನ್ನು ಕವಿ ಸೀತೆಯ

ಬಾಯಿಂದಲೇ ಹೇಳಿಸುತ್ತಾನೆ. ರಾಮನಾಗಲಿ, ದಶರಥ, ಕೌಸಲ್ಯೆ, ಯಾರೂ ಕೂಡ ಊರ್ಮಿಳೆ ಲಕ್ಷ್ಮಣನೊಂದಿಗೆ ಕಾಡಿಗೆ ಹೋಗಲಿ ಎಂಬ ಮಾತನ್ನು ಆಡುವುದಿಲ್ಲ. ಲಕ್ಷ್ಮಣನಿಗಾದರೂ ಎಲ್ಲಿ ಊರ್ಮಿಳೆ ನನ್ನ ಜೊತೆ ಬರಲಿ ಎಂದರೆ ಅಣ್ಣ ನನ್ನನ್ನು ಬಿಟ್ಟು ಹೋಗುತ್ತಾನೋ ಎಂಬ ಅಂಜಿಕೆ, ನಾಚಿಕೆ. ರಾಮ ಊರ್ಮಿಳೆ ಮೂರ್ಛಿಳಾದಾಗ ಲಕ್ಷ್ಮಣನಿಗೆ ನೀನು ಇಲ್ಲಿಯೇ ಇರು ಎಂದು ಹೇಳುತ್ತಾನೆ, ಆದರೆ ಊರ್ಮಿಳೆಯನ್ನು ನಿನ್ನೊಂದಿಗೆ ಕರೆದುಕೊಂಡು ನಡೆ ಎಂದು ಮಾತ್ರ ಹೇಳುವುದಿಲ್ಲ. ದಶರಥ ರಘುಕುಲದ ಅಸಹಾಯ ಸೊಸೆ ಎಂದು ಉದ್ಧರಿಸುತ್ತಾನೆ. ವನವಾಸಕ್ಕೆ ಹೋಗಬೇಕಾಗಿದ್ದುದು ರಾಮ ಮಾತ್ರ, ಅವನ ಅನುಕೂಲಕ್ಕಾಗಿ ಲಕ್ಷ್ಮಣ, ಸೀತೆ ಎಲ್ಲರೂ ಹೊರಡುತ್ತಾರೆ. ಊರ್ಮಿಳೆಯೂ ಜೊತೆಯಲ್ಲಿದ್ದರೆ ಆಗುತ್ತಿದ್ದ ಅನಾಹುತವಾದರೂ ಏನು. ಧೀರರೂ, ಶೂರರೂ ದೈವಾಂಶ ಸಂಭೂತರೂ ಆದ ರಾಮ ಲಕ್ಷ್ಮಣರು ಮತ್ತೊಬ್ಬ ಅಬಲೆಯನ್ನು ಸಂರಕ್ಷಿಸಲಾರದಷ್ಟು ದುರ್ಬಲರೆ. ಊರ್ಮಿಳೆ ಜೊತೆಯಲ್ಲಿದ್ದಿದ್ದರೆ ಸೀತಾಪಹರಣ ಆಗುತ್ತಿರಲಿಲ್ಲ. ಆರ್ಯರ ಸಾಮ್ರಾಜ್ಯ ವಿಸ್ತರಣೆ ಆಗುತ್ತಿರಲಿಲ್ಲ. ಋಷಿ ಮುನಿಗಳ ಯಜ್ಞ ಯಾಗಾದಿಗಳು, ಪ್ರಾಣಿಬಲಿಗಳು ಸುಸೂತ್ರವಾಗಿ ನಡೆಯುತ್ತಿರಲಿಲ್ಲ.

ಗುಪ್ತರು ಸೀತೆಯ ಕೃಪೆಯಿಂದ ಊರ್ಮಿಳೆ ಹಾಗೂ ಲಕ್ಷ್ಮಣರ ಸಮಾಗಮಕ್ಕೆ ಒಂದು ಅವಕಾಶವನ್ನು ಸೃಷ್ಟಿಸಿದ್ದಾರೆ. ಅದು ಕೇವಲ ಕ್ಷಣಕಾಲದ ಭೇಟಿ, ನಿರ್ದಾಕ್ಷಿಣ್ಯವಾಗಿ ಬಿಟ್ಟು ಹೋದ ಲಕ್ಷ್ಮಣ ಆ ಭೇಟಿಯಲ್ಲಿ ಊರ್ಮಿಳೆಯ ಪಾದತಲದಲ್ಲಿ ಬೀಳುತ್ತಾನೆ. ಊರ್ಮಿಳೆ ಆತನನ್ನು ಮೇಲೆಬ್ಬಿಸಿ ಎದರಬೇಡ ನಾನು ನಿನ್ನನ್ನು ಬಂಧಿಸುವುದಿಲ್ಲ ಎಂದು ನುಡಿಯುತ್ತಾಳೆ.

**ವನವನವ ಚರಿಸುವೆನ್ನ ಉಪವನದ ಹರಿಣ**
**ಬಂಧಿಪೆನು ಎಂಬ ಭಯಬೇಡ ಎನ್ನ ಹರಣ**

ಅಂದರೆ ಲಕ್ಷ್ಮಣ ಊರ್ಮಿಳೆಯ ಕಾಲಿಗೆ ಬಿದ್ದುದ್ದು ನನ್ನನ್ನು ಬಂಧಿಸಬೇಡ ಎಂದು ವಿನಂತಿಸಿಕೊಳ್ಳಲೋ ಅಥವಾ ತಾನು ಮಾಡಿದ ತಪ್ಪಿಗೆ ಕ್ಷಮೆ ಯಾಚಿಸಲೋ. ಸೀತೆ ರಾಮನೊಂದಿಗೆ ಹಠ ಮಾಡಿದಂತೆ ಊರ್ಮಿಳೆಯೂ ಹಠಮಾಡುತ್ತಾಳೆಯೋ ಎಂಬ ಭಯವೋ. ಮುಂದುವರಿದು ಗುಪ್ತರು ಈ ಸ್ಥಿತಿಗೆ ತನ್ನದೇ ದೋಷ ಎಂಬಂತೆ ಊರ್ಮಿಳೆ ಭಾವಿಸುವಂತೆ ಚಿತ್ರಿಸಿದ್ದಾರೆ.

**ಕರ್ಮದೋಷವೆಂಬೆನೆ ಸ್ವಾಮಿ,**
**ದಿಟ, ಬಯಸಿದುದ ನಾನೊರೆಯಲಾರದೆ ಹೋದೆ**
**ಆದರೇನು! ನಿನ್ನ ಸಂತಸ, ನನ್ನ ಸಂತಸ;**
**ಇದುಳಿದು ಬೇರೇನನೊರೆಯಲಿ ದೊರೆಯೆ?**[೨೨]

ಊರ್ಮಿಳೆಯ ತಾಯಿ ಸುನಯನಾದೇವಿ ಮಾತೃ ವಾತ್ಸಲ್ಯದಿಂದ ಆಡುವ ಮಾತು ತುಂಬಾ ಮಾರ್ಮಿಕವಾಗಿ ಮೂಡಿಬಂದಿದೆ,

**ದೊರೆಯಲಿಲ್ಲ ನಿನಗೆ ಅಯ್ಯೋ।**

**ಮನೆಯಾಗಲೀ ವನವಾಗಲೀ**

ಸೀತೆಗೆ ದೊರೆತ ಭಾಗ್ಯವೋ ನಿನಗಿಲ್ಲದಾಯಿತೆ ಎಂದು ಆಕೆ ಮಾತೃಮಮಕಾರದಿಂದ ಕೊರಗುತ್ತಾಳೆ.

ಲಕ್ಷ್ಮಣನ ತ್ಯಾಗ 'ಸಹಜ ತ್ಯಾಗ' ಎಂದು ಊರ್ಮಿಳೆ ನಿರ್ಣಯಿಸುತ್ತಾಳೆ. ಇದು ಆಕೆಯ ವಿವೇಕವೆಂದು ಪ್ರಶಂಸಿಸಲಾಗುತ್ತದೆ. ಆದರೆ ಆಕೆಯ ನೋವನ್ನು ಆತನ ತ್ಯಾಗಕ್ಕೆ ಪ್ರೇರಣೆ ಎಂದು ಬಿಂಬಿಸಲಾಗಿದೆ. ಪುರುಷನ ಕರ್ತವ್ಯಗಳಿಗೆ ಸ್ತ್ರೀ ತನ್ನ ಆಸೆ ಆಕಾಂಕ್ಷೆಗಳನ್ನು ಬದಿಗಿರಿಸಿ ಸಹಕರಿಸುವುದು ಅನಿವಾರ್ಯ ಎಂಬುದೇ ಸ್ತ್ರೀ ಧರ್ಮ. ಆಕೆ ನೋವಿನಲ್ಲೂ ಮಾನವೀಯತೆಯ ಪ್ರದರ್ಶನ ಮಾಡುವ ಒಂದು ಸಂದರ್ಭವನ್ನು ಗುಪ್ತರು ಸೃಷ್ಟಿಸಿದ್ದಾರೆ. ಊರ್ಮಿಳೆಯ ನೋವು ಕೇವಲ ಆಕೆಯದಷ್ಟೇ ಅಲ್ಲ, ಅಂತಹ ಅನೇಕ ದುಃಖಿಗಳು ಜಗತ್ತಿನಲ್ಲಿದ್ದಾರೆ ಎಂಬುದನ್ನು ತಿಳಿಯಪಡಿಸಲೂ ಈ ಸಂದರ್ಭವನ್ನು ಸೃಷ್ಟಿಸಿರಬಹುದು, ಅಥವಾ ತನ್ನ ದುಃಖಕ್ಕಿಂತಲೂ ಮಿಗಿಲಾದ ದುಃಖಿಗಳಿರುವುದನ್ನು ಕಂಡು ಸ್ತ್ರೀ ತನ್ನನ್ನು ತಾನು ಸಂತೈಸಿಕೊಳ್ಳಲಿ ಎಂಬ ಆಶಯವೂ ಇರಬಹುದು. ಆಕೆ ತನ್ನ ಸಖಿ ಮೂಲಕ ತನ್ನಂತೆ ಸಂಕಟಪಡುತ್ತಿರುವ ಸಮಾನ ದುಃಖಿನಿಯರನ್ನು ಕರೆ ಎಂದು ನಿರ್ದೇಶನ ನೀಡುತ್ತಾಳೆ,

**"ಪ್ರೋಷಿತಪತಿಕೆಯನೆಲ್ಲರನು**

**ಪುರದೊಳೆನಿತಿಹರೋ ಎಲ್ಲರನು,**

**ಕರೆದು ತಾರೆ, ಸಖಿ"**

ಊರ್ಮಿಳೆ ಜೇಡನ ಬಲೆಯ ರೂಪಕದ ಮೂಲಕ ತನ್ನ ಸ್ವಾತಂತ್ರ್ಯಕ್ಕೆ ವ್ಯವಸ್ಥೆ ಕಡಿವಾಣ ಹಾಕಿತು ಎಂಬುದನ್ನು ಸೂಕ್ಷ್ಮವಾಗಿ, ಮಾರ್ಮಿಕವಾಗಿ ನುಡಿಯುತ್ತಾಳೆ, ರಾಮನೊಂದಿಗೆ ಹೊರಟ ಸೀತೆಯೂ ನನ್ನ ಬಗ್ಗೆ ಆಲೋಚಿಸಲಿಲ್ಲ. ಸೀತೆಗಿಂತಲೂ ಹೆಚ್ಚಿನ ಪ್ರೀತಿಯನ್ನು ಸಂಪಾದಿಸಿದ ಲಕ್ಷ್ಮಣನ ಮನಸ್ಸನ್ನು ರಾಮ ಅರಿಯಲಿಲ್ಲ. ಹಿರಿಯರಾದ ದಶರಥ, ಕೌಸಲ್ಯೆ, ಸೌಮಿತ್ರೆ ಕೇವಲ ಆಕೆಯ ಅಸಹಾಯಕತೆಗೆ ಮರುಗಿದರೆ ಹೊರತು ಆಕೆಗೆ ಸುಖದ ದಾರಿ ತೋರಿಸಲಿಲ್ಲ. ಹಾಗಾಗಿ ಸಮಾಜ, ವ್ಯವಸ್ಥೆ ಸೃಷ್ಟಿಸಿದ ಜೇಡರ ಬಲೆಯಲ್ಲಿ ಬಿದ್ದು ಒದ್ದಾಡುತ್ತಿರುವವಳು ಊರ್ಮಿಳೆಯಲ್ಲದೆ ಮತ್ತಾರು,

**ಜೇಡನ ಬಲೆಯನೋಸರಿಸದಿರು, ಸಖಿ**

**ಸಹಾನುಭೂತಿಯ ಬಯಸಿ ಬಂದಿಹಳು,**

**ನಮ್ಮೀರ್ವರ ಗತಿ ಒಂದೇ, ನಾನು ಜಾಲಗತೆ**

ಊರ್ಮಿಳೆ 'ನಾನೂ ಜಾಲಗತೆ' ಎಂದಾಗ, ಆಕೆಯ ಮೇಲೆ ಎಸೆಯಲ್ಪಟ್ಟ ಜಾಲಗಳನ್ನು ನೆನೆದಾಗ, ತನಗರಿವಿಲ್ಲದಂತೆಯೇ ಆಕೆ ಆ ಬಲೆಯಲ್ಲಿ ಬಿದ್ದಿದ್ದಳಲ್ಲವೇ; ಬಲೆಯಲ್ಲಿ ಬಿದ್ದಳೆನ್ನುವುದಕ್ಕಿಂತಲೂ, ತಮ್ಮ ತಮ್ಮ ಕರ್ತವ್ಯದ ಸೋಗಿನಲ್ಲಿ ಎಲ್ಲರೂ ಸೇರಿ ಆಕೆಯನ್ನು ಈ ಬಲೆಯಲ್ಲಿ ಕೆಡವಿದರೆಂದು ಹೇಳುವುದೇ

ಉಚಿತವೆನಿಸುತ್ತದೆ. ಅವಳ ಹೃದಯದ ವೇದನೆಯ ಅರಿವು ನಮಗುಂಟಾಗುತ್ತದೆ, ಕವಿಯ ಈ ರೂಪಕವೂ ಮಾರ್ಮಿಕವಾಗಿ ಅವಳ ಸ್ಥಿತಿಯನ್ನು ಸೂಚಿಸುತ್ತದೆ.[೨೩] ಗುಪ್ತರು ಆಕೆಯ ಪ್ರೇಮ ಜೀವನವನ್ನು ಎಷ್ಟೇ ರಮ್ಯವಾಗಿ ವರ್ಣಿಸಿರಲಿ, ವಿರಹ ಜೀವನವನ್ನು ಮನಃಕಲಕುವಂತೆ ಚಿತ್ರಿಸಿರಲಿ. ಊರ್ಮಿಳೆಯ ಈ ಮಾತುಗಳಲ್ಲಿ ಆಕೆಯ ಮನಸ್ಸಿನ ವಾಸ್ತವ ಸ್ಥಿತಿ ಅನಾವರಣಗೊಂಡಿದೆ.

ಕೊನೆಯಾಗಿ, ರಾಮಾಯಣಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಅದರಲ್ಲೂ ಪದೇ ಪದೇ ಚರ್ಚೆಗೊಳಗಾಗಿರುವ ಸೀತೆ, ಊರ್ಮಿಳೆ, ಶೂರ್ಪನಖಿ, ಅಹಲ್ಯೆ ಮುಂತಾದ ಪಾತ್ರಗಳು ಎರಡನೆ ದರ್ಜೆಯ ಪಾತ್ರಗಳು. ಈ ಪಾತ್ರ ಹೆಚ್ಚು ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಇದು ಕಡಿಮೆ ನಿರ್ಲಕ್ಷ್ಯಕ್ಕೆ ಎಂಬ ಪ್ರಮಾಣಗಳೇ ಸರಿಯಾದುದಲ್ಲ. ಎಲ್ಲ ಪಾತ್ರಗಳು ಸಮಾನ ದುಃಖಿಗಳು. ಬೇರೆ ಬೇರೆ ಸ್ತರದಲ್ಲಿ ಬೇರೆ ಬೇರೆ ಕ್ರಮದಲ್ಲಿ ಪಿತೃಪ್ರಧಾನ ವ್ಯವಸ್ಥೆಯಿಂದ ಅವಮಾನ, ಶೋಷಣೆಗೆ ಒಳಗಾದವರೆ ಎಲ್ಲರು. ಸ್ತ್ರೀಗಾಗಿ ಪುರುಷ ವ್ಯವಸ್ಥೆ ತನ್ನ ಅಹಂಕಾರದ ಸ್ಥಾಪನೆಗಾಗಿ ಕಟ್ಟಿಕೊಟ್ಟಿರುವ ಸ್ತ್ರೀ ಮಾದರಿಗಳು ಇಂದೂ ಪೂಜನೀಯ. ಜಮದಗ್ನಿಯಿಂದ ಶಿರಸ್ಛೇಧನಕ್ಕೆ ಒಳಗಾದ ರೇಣುಕೆ ಇಂದು ನಮ್ಮ ಸ್ತ್ರೀಯರಿಗೆ ಮಾದರಿ, ಕಲ್ಲಾದ ಅಹಲ್ಯೆ ಇಂದು ಮಾದರಿ, ಸೀತೆ ಮಾದರಿ, ಕುಂತಿ, ಶಕುಂತಲೆ ಎಲ್ಲರೂ ಮಾದರಿಗಳೇ. ಅಂದರೆ ಪುರುಷ ನಿರ್ದೇಶಿತ ಕ್ರಮದಲ್ಲಿ ಸಾಗದ ಇವರೆಲ್ಲರೂ ದುರಂತ ನಾಯಕಿಯರೇ ಆದ ನಮ್ಮ ಸಮಾಜದ ಮಾದರಿಗಳು. ಈ ಮಾದರಿಗಳನ್ನು ಒಡೆದು ಕಟ್ಟಬೇಕಾದ ಅನಿವಾರ್ಯ ನಮ್ಮ ಮುಂದಿದೆ. ಎಂ.ಎಸ್. ಆಶಾದೇವಿಯವರು ಹೇಳುವಂತೆ ಸ್ತ್ರೀಯರು ನೀಲಕಂಠೆಯರಾಗಬೇಕಿದೆ. ಎಲ್ಲಾ ಅವಮಾನ, ನೋವು, ಶೋಷಣೆಗಳನ್ನು ನುಂಗಿ ತಮ್ಮ ಅಸ್ತಿತ್ವವನ್ನು, ಸ್ವಾತಂತ್ರ್ಯವನ್ನು ಕಂಡುಕೊಳ್ಳಬೇಕಾದ ಅನಿವಾರ್ಯತೆ ಇದೆ. ತೆಲುಗು ಭಾಷೆಯ ಸ್ತ್ರೀವಾದಿ ಚಿಂತಕಿ ಈ ನಿಟ್ಟಿನಲ್ಲಿ ಒಂದು ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾರೆ. ಸೀತೆಯೊಂದಿಗೆ ಶೋಷಿತ ಪಾತ್ರಗಳ ಸಂವಾದ ಏರ್ಪಡಿಸುವಂತೆ ಮಾಡಿ ಪುರುಷ ನಿರ್ಮಿತ ಸ್ತ್ರೀಧರ್ಮದ ಸಂಚನ್ನು ಅನಾವರಣಗೊಳಿಸಿದ್ದಾರೆ. ಯಾವುದೇ ಪಾತ್ರಕ್ಕೆ ಅಪಚಾರವಾಗದಂತೆ ಇಂದಿನ ಸ್ತ್ರೀ ಹೇಗೆ ತನ್ನ ಅಸ್ತಿತ್ವನ್ನು ಕಂಡುಕೊಳ್ಳಬೇಕು, ಸಮಾಜವನ್ನು ಎದುರಿಸುವಲ್ಲಿ ಹೇಗೆ ದೃಢರಾಗಬೇಕು, ಪುರುಷ ಪ್ರಪಂಚದಲ್ಲಿ ಒಬ್ಬಳಾಗದೇ ತನ್ನದೇ ಪ್ರಪಂಚದಲ್ಲಿ ತಾನೇಗೆ ಬದುಕಬೇಕು ಎಂಬುದನ್ನು ನಿರೂಪಿಸಿದ್ದಾರೆ. ಪುರುಷ ಪ್ರಪಂಚದ ಸಾಮಾನ್ಯ ಸ್ತ್ರೀಯಂತೆ ಸೀತೆಯ ಪಾತ್ರವನ್ನು ಕಲ್ಪಿಸಿ ಶೂರ್ಪನಖಿ, ಅಹಲ್ಯೆ, ರೇಣುಕೆ, ಊರ್ಮಿಳೆ ಮುಂತಾದ ಪಾತ್ರಗಳು ತಮಗಾದ ಅನುಭವ ನೋವು ಅವಮಾನಗಳ ಹಿನ್ನೆಲೆಯಲ್ಲಿ ನೀಡುವ ಹೇಳಿಕೆಗಳನ್ನು ಅಸಹನೆಯಿಂದ ವಿರೋಧಿಸುತ್ತಾಳೆ. ಅಂತಿಮವಾಗಿ ತನ್ನ ಸ್ವಾನುಭವಕ್ಕೆ ಬಂದಾಗ ಅವರ ಅನುಭವದ ಹೇಳಿಕೆಗಳು ಅವಳಿಗೇ ಅರ್ಥವಾಗುವಂತೆ ಮಾಡಿದ್ದಾರೆ.

ರಾಮ ಲಕ್ಷ್ಮಣರಿಂದ ಅವಮಾನಿತಳಾದ ಶೂರ್ಪನಖಿ ತಾನು ಅನುಭವಿಸಿದ ಯಾತನೆಯಿಂದ ಹೇಗೆ ಹೊರಬಂದಳು ಎಂಬುದನ್ನು ಓಲ್ಗಾ ಅವರುಗಳ ಮಾತುಗಳಿಂದಲೇ ಗಮನಿಸಿದರೆ ಹೆಚ್ಚು ಸ್ಪಷ್ಟವಾಗುತ್ತದೆ.

"ನನ್ನ ರೂಪವನ್ನು ನೋಡಿದ ಪುರುಷರು, ನಾನು ಮೋಹಿಸಿದ ಸುಂದರ ಪುರುಷರು ನನ್ನನ್ನು ಕಂಡು ಅಸಹ್ಯ ಪಡುತ್ತಿದ್ದರು. ಇನ್ನು ಯಾಕೆ ಈ ಬದುಕು ಎಂದುಕೊಂಡ ಆ ದಿನಗಳು ನರಕ ಸದೃಶ್ಯವಾಗಿದ್ದವು. ನನ್ನ ಮನಸ್ಸು ನಿತ್ಯವೂ ನೋವು ಕೋಪಗಳಿಂದ ಹೊತ್ತಿ ಉರಿಯುತ್ತಿತ್ತು. ಶ್ರೀರಾಮನಿಗೆ, ಆತನ ತಮ್ಮನಿಗೆ ಮತ್ತು ನಿನಗೆ (ಸೀತೆಗೆ) ಬಹಳಷ್ಟು ಶಾಪಹಾಕಿರುವೆನು. ನಿಮ್ಮ ಮೇಲೆ ವಿಷಕಾರಿದೆನು. ನನ್ನ ಮನಸ್ಸಿನಲ್ಲಿ ಪ್ರೇಮವು ಲವಲೇಶವೂ ಇಲ್ಲದಂತಾಗಿ ದ್ವೇಷವೇ ಪೀಠವನ್ನು ಹಾಕಿಕೊಂಡು ಕುಳಿತಿತ್ತು. ಸೌಂದರ್ಯವನ್ನು ಪ್ರೀತಿಸುವ ನಾನು, ಅಂದವಾದ ಪ್ರತಿಯೊಂದನ್ನು ದ್ವೇಷಿಸುವುದಕ್ಕೆ ಆರಂಭಿಸಿದೆ. ಸೌಂದರ್ಯವತಿಯರ ಮೇಲಿನ ಅಸೂಯೆಯಾಗಿ ಪರಿವರ್ತನೆಯಾಯಿತು. ಆ ರೋಷದಿಂದ ಹೊರಬರಲು ಪುನಃ ಸೌಂದರ್ಯವನ್ನು ಪ್ರೀತಿಸಲು, ರೂಪ ಕುರೂಪಗಳ ಮೂಲ ಸಾರವೇನೆಂಬುದನ್ನು ಕಂಡುಕೊಳ್ಳಲು ನನ್ನೊಂದಿಗೆ ನಾನು ನನ್ನೊಳಗೆ ದೊಡ್ಡ ಯುದ್ಧವನ್ನೇ ಮಾಡಬೇಕಾಯಿತು" ಸಾಫಲ್ಯಕ್ಕೆ ಅರ್ಥವು ಪುರುಷನ ಸಾಹಚರ್ಯದಲ್ಲಿ ಇಲ್ಲವೆಂದು ಗ್ರಹಿಸಿದೆ.[೨೪]

ಸೀತೆಯನ್ನು ಕುರಿತು ಅಹಲ್ಯೆ ಆಡುವ ಮಾತುಗಳು ಪ್ರಸ್ತುತ ಸಂದರ್ಭಕ್ಕೆ ತುಂಬಾ ಪೂರಕವಾದವು ಎನಿಸುತ್ತದೆ.

"ಮಹಾ ಮಹಾ ಮುನಿಗಳು, ವೇದಾಂತಿಗಳು ಈ ಪ್ರಶ್ನೆಗೆ ಉತ್ತರವನ್ನು ಹುಡುಕುವುದರಲ್ಲಿ ಜೀವನವನ್ನು ಕಳೆಯುತ್ತಿದ್ದಾರೆ. ನೀನೆಂದರೆ ನೀನೇ, ಶ್ರೀರಾಮನ ಪತ್ನಿ ಮಾತ್ರವಲ್ಲ; ಅದಕ್ಕಿಂತ ಮಿಗಿಲಾದದ್ದು, ಮುಖ್ಯವಾದದ್ದು ನಿನ್ನಲ್ಲಿ ಇದೆ. ಅದೇನೆಂದು ತಿಳಿದುಕೊಳ್ಳಲು ಸ್ತ್ರೀಯರಿಗೆ ಯಾರೂ ಹೇಳುವುದಿಲ್ಲ. ಪುರುಷರ ಅಹಂ ಆಸ್ತಿಗಳಲ್ಲಿ, ಪ್ರತಾಪಗಳಲ್ಲಿ, ವಿದ್ಯೆಯಲ್ಲಿ, ಕುಲಗೋತ್ರಗಳಲ್ಲಿದ್ದರೆ, ಸ್ತ್ರೀಯ ಅಹಂ ಪಾತಿವ್ರತ್ಯದಲ್ಲಿ, ಮಾತೃತ್ವದಲ್ಲಿ ಇರುತ್ತದೆ. ಆ ಅಹಂಕಾರವನ್ನು ಹೇಗೆ ದಾಟಬೇಕೆಂದು ಸ್ತ್ರೀಯರಿಗೆ ಯಾರೂ ತಿಳಿಸುವುದಿಲ್ಲ. ವಿಶಾಲ ಪ್ರಪಂಚದಲ್ಲಿ ತಾವು ಭಾಗವೆಂದು ಅವರು ಗುರುತಿಸಲಾರರು, ಒಬ್ಬ ವ್ಯಕ್ತಿಗೆ, ಒಂದು ಮನೆಗೆ, ಒಂದು ವಂಶದ ಗೌರವಕ್ಕೆ ಪರಿಮಿತವಾಗುತ್ತಾರೆ. ಅಹಂ ಜಯಸುವುದು ಪುರುಷರಿಗೆ ಆಧ್ಯಾತ್ಮಿಕ ಗುರಿಯಾಗುತ್ತದೆ. ಅಹಂ ಬೆಳೆಸಿಕೊಳ್ಳುವುದು, ಆ ಅಹಂನಲ್ಲಿಯೇ ಸುಟ್ಟು ಬೂದಿಯಾಗುವುದು ಸ್ತ್ರೀಯರ ಗುರಿಯಾಗುತ್ತದೆ. ಸೀತೆ–ನೀನು ಯಾರೋ, ನಿನ್ನ ಜೀವನದ ಗುರಿಯೇನು ತಿಳಿಯಲು ಪ್ರಯತ್ನಿಸು. ಅದು ಅಷ್ಟು ಸುಲಭವಲ್ಲ. ಆದರೆ ಪ್ರಯತ್ನ ನಿಲ್ಲಿಸಬೇಡ,

ಕೊನೆಗೆ ತಿಳಿದುಕೊಳ್ಳುವಿ, ನಿನಗೆ ಆ ಶಕ್ತಿ ಇದೆ, ಶ್ರೀರಾಮಚಂದ್ರನನ್ನು ಕಾಪಾಡಬಲ್ಲವಳು, ನಿನ್ನನ್ನು ಕಾಪಾಡಿಕೊಳ್ಳಲಾರೆಯಾ– ಇದೆಲ್ಲಾ ಯಾಕೆ ನಡೆದಿದೆ ಎಂದು ವಿಚಾರಿಸದಿರು. ಇದು ನಿನ್ನ ಒಳ್ಳೆಯದಕ್ಕೆ, ನಿನ್ನನ್ನು ನೀನು ತಿಳಿದುಕೊಳ್ಳುವ ಕ್ರಮದ ಭಾಗವಾಗಿ ನಡೆದಿದೆ,... ಈ ಸಕಲ ಪ್ರಪಂಚದಲ್ಲಿ ನೀನಿರುವಿ. ಒಬ್ಬ ರಾಮನಿಗೆ ಮಾತ್ರ ಅಲ್ಲ.[೨೫]

ಅಹಲ್ಯೆ ಸೀತೆಯನ್ನು ಉದ್ದೇಶಿಸಿ ಮಾತನಾಡಿದ ಮಾತುಗಳಂತೆ ಕಂಡರೂ, ಇಡೀ ಸ್ತ್ರೀ ಕುಲಕ್ಕೆ ನೀಡಿದ ಮಾರ್ಗದರ್ಶನದಂತಿದೆ. ರಾಮನನ್ನು ಕಾಪಾಡಬಲ್ಲವಳು ನೀನು, ನಿನ್ನನ್ನು ಕಾಪಾಡಿಕೊಳ್ಳಲಾರೆಯಾ. ಜಗವನ್ನೇ ಪೊರೆಯುವ ಶಕ್ತಿ ನಿನಗಿದೆ. ನಿನ್ನ ಒಳಿತನ್ನು ಕಂಡುಕೊಳ್ಳಲಾರೆಯಾ.

ರಾಮಾಯಣದ ಸ್ತ್ರೀ ಪಾತ್ರಗಳನ್ನು ಪ್ರಾಚೀನ ಕವಿಗಳು ಸಾಂಪ್ರದಾಯಿಕ ರೀತಿಯಲ್ಲಿ ಹೇಗೆ ಚಿತ್ರಿಸಿದ್ದಾರೆ. ಆಕೆ ಪಿತೃ ಪ್ರಧಾನ ಸಂಸ್ಕೃತಿಯೆಂಬ ಹಳಿಯ ಮೇಲೆ ಆಕೆಯನ್ನು ಎಷ್ಟು ಜಾಗರೂಕಳಾಗಿ ನಡೆಸಲು ಪ್ರಯಾಸಪಟ್ಟಿದ್ದಾರೆ. ಅಷ್ಟಾದರೂ ಆಕೆಗೆ ದೊರೆತ ಫಲಫಲವೇನು. ಸೀತೆಗೆ ನಿರಂತರವಾಗಿ ತನ್ನ ದೈವದಿಂದಲೇ ಆದ ನಿರಂತರ ಅವಮಾನ, ವನವಾಸ, ರಘುಕುಲದ ಕುಡಿಗಳನ್ನು ಹೆತ್ತು ಹೊತ್ತು ಬೆಳೆಸಿದ ಸೀತೆಗೆ ಕೊನೆ ಸಿಕ್ಕಿದ್ದು ಏನು! ಅಯೋಧ್ಯೆಯ ಅರಮನೆಯೇ, ಶ್ರೀರಾಮಚಂದ್ರನ ಪಟ್ಟಮಹಿಷಿ ಎಂಬ ಗೌರವವೇ, ಕನಿಷ್ಟ ಶ್ರೀರಾಮನ ಪ್ರೀತಿಯ ಮಾತುಗಳೇ, ಯಾವುದೂ ದೊರೆಯಲಿಲ್ಲ. ತಾನು ಬಂದ ದಾರಿಯಲ್ಲಿ ತನ್ನ ಕರ್ತವ್ಯವನ್ನು ನಿಷ್ಠೆಯಿಂದ ಮುಗಿಸಿ ಸಾಗಿದ ಸಾರ್ಥಕ್ಯ ಭಾವವೊಂದು ಉಳಿದು ಮತ್ತೇನು ಉಳಿದಿದೆ ಆಕೆಗೆ?. ಊರ್ಮಿಳೆಯ ಯೌವನದ ತುತ್ತ ತುದಿಯಲ್ಲಿ ದೊರೆತ ವಿರಹವೇದನೆ, ಸನ್ಯಾಸಿ, ಹುಚ್ಚಿ, ಯಾರ ಮಾತನ್ನು ಕೇಳದ ಅಹಂಕಾರಿ, ತನಗಿಷ್ಟ ಬಂದಂತೆ ತಾನು ಬದುಕಿದಳು ಎಂಬ ಅಪವಾದ. ಅಕ್ಕನಿಗೆ ದೊರೆತ ಭಾಗ್ಯವೂ ಆಕೆಗೆ ದೊರೆಯಲೇ ಇಲ್ಲ. ಅನೇಕ ಪ್ರಾಚೀನ ಕವಿಗಳು ಊರ್ಮಿಳೆಯೆಂಬ ಜನಕನ ಕುವರಿ ಇದ್ದಳು ಎಂಬುದನ್ನು ತುಂಬಾ ಸಾಂಕೇತಿಕವಾಗಿ ಹೇಳಿ ಕೈತೊಳೆದುಕೊಂಡಿದ್ದಾರೆ. ಅನೇಕ ಸಂದರ್ಭಗಳಲ್ಲಿ ರಾಮನಿಗೆ ಸೀತೆಯನ್ನು ಲಕ್ಷ್ಮಣನಿಗೆ ಸೀತೆಯ ತಂಗಿಯನ್ನು ಕೊಟ್ಟು ವಿವಾಹ ಮಾಡಿಕೊಟ್ಟರು ಎಂಬ ಉಲ್ಲೇಖ ಮಾತ್ರ ದೊರೆಯುತ್ತದೆ. ಸದ್ಯದ ಮಾರುಕಟ್ಟೆ ಸಂಸ್ಕೃತಿಯಲ್ಲಿರುವಂತೆ ಒಂದನ್ನು ಖರೀದಿಸಿದರೆ ಮತ್ತೊಂದು ಉಚಿತ ಎಂಬಂತೆ ಊರ್ಮಿಳೆ ಲಕ್ಷ್ಮಣನಿಗೆ ದೊರೆಯುತ್ತಾಳೆ. ಆಕೆಯನ್ನು ಪಡೆಯಲು ಯಾವ ಶಿವಧನಸ್ಸು ಮುರಿಯಲಿಲ್ಲ. ಯಾರ ಮನಸ್ಸನ್ನು ಸಂತೋಷಪಡಿಸಬೇಕಾಗಿರಲಿಲ್ಲ. ಅನಾಯಾಸವಾಗಿ ದೊರೆತ ಸ್ತ್ರೀಯನ್ನು ಆಸ್ತಿಯೆಂಬಂತೆ ಅಷ್ಟೇ ಅನಾಯಾಸವಾಗಿ ಲಕ್ಷ್ಮಣ ಆಕೆಯನ್ನು ಬಿಟ್ಟು ಕಾಡಿಗೆ ಅಗ್ರಜನೊಂದಿಗೆ ತೆರಳುತ್ತಾನೆ.

## ಟಿಪ್ಪಣಿಗಳು

೧. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀ ರಾಮಾಯಣದರ್ಶನಂ, ಒಂದು ವಿಮರ್ಶಾತ್ಮಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ೨೦೧, ಪು-೨೧೦.

೨. ಡಾ. ಪ್ರಧಾನ್ ಗುರುದತ್ತ, ಡಾ. ಮೇ. ರಾಜೇಶ್ವರಯ್ಯ, ಊರ್ಮಿಳಾ, ಔತ್ತರೇಯ ವಿರಹಿಣಿ-ದಾಕ್ಷಿಣಾತ್ಯ ತಪಸ್ವಿನಿ, ಸ್ವಪ್ನ ಬುಕ್ ಹೌಸ್, ೨೦೧೧, ಪುಟ-೬೭.

೩. ಅದೇ-ಪುಟ-೩೬

೪. ಅದೇ-ಪುಟ-೭೧

೫. ಅದೇ-ಪುಟ-೭೧

೬. ಅದೇ-ಪುಟ-೧೪

೭. ಹೆಚ್.ಡಿ. ಸಂಕಾಲಿಯಾ, ಇತಿಹಾಸದ ಕಣ್ಣಲ್ಲಿ ರಾಮಾಯಣ, ನವ ಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೦, ಪುಟ-೮೦.

೮. ಶ್ರೀ ಮದ್ವಾಲ್ಮೀಕಿ ರಾಮಾಯಣಮ್, ಭಾಗ-೨, ಸರ್ಗ-೪೫, ಶೊ: ೫-೯.

೯. ತೊರವೆ ರಾಮಾಯಣ, ಅರಣ್ಯಕಾಂಡ, ಪದ್ಯ: ೯-೧೧.

೧೦. ಕುವೆಂಪು, ರಾಮಾಯಣ ದರ್ಶನಂ, ಪುಟ-೨೪೧, ಸಾಲು:೩೫೪-೩೫೮.

೧೧. ಅದೇ, ಪುಟ-೨೪೧, ಸಾಲು: ೩೬೩-೬೫.

೧೨. ಅದೇ, ಪುಟ-೨೪೧, ಸಾಲು: ೩೬೫-೬೬.

೧೩. ಡಾ. ಪ್ರಧಾನ್ ಗುರುದತ್ತ, ಡಾ. ಮೇ. ರಾಜೇಶ್ವರಯ್ಯ, ಊರ್ಮಿಳಾ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ಪುಟ-೧೯.

೧೪. ಪ್ರೊ. ಎಂ.ಡಿ. ನಂಜುಂಡಸ್ವಾಮಿ, ರಾಮಾಯಣದಲ್ಲಿನ ಪಾತ್ರಗಳು, (ಕನ್ನಡಿಸಿದವರು) ಪೆರಿಯಾರರ ಬರಹಗಳು, ಅಭಿರುಚಿ ಪ್ರಕಾಶನ, ಮೈಸೂರು, ಪುಟ-೨೭.

೧೫. ಅದೇ, ಪುಟ-೪೧.

೧೬. ಅದೇ-ಪುಟ-೨೮.

೧೭. ಕುವೆಂಪು, ಶ್ರೀ ರಾಮಾಯಣ ದರ್ಶನಂ, ಸಂ.೨, ಸಂ.೬, ಸಾಲು ೨೭೫-೮೧.

೧೮. ಪೋಲಂಕಿ ರಾಮಮೂರ್ತಿ, ಸೀತಾಯಣ, ಪುಟ-೪೩.

೧೯. ಡಾ. ಎಚ್.ಎಸ್. ಶ್ರೀಮತಿ, ಹೆಣ್ಣು-ಹೆಂಗಸು, ಪುಟ-೫೮.

೨೦. ಅದೇ-ಪುಟ-೬೦.

೨೧. ಡಾ. ಪ್ರಧಾನ ಗುರುದತ್ತ, ಊರ್ಮಿಳೆ, ಪುಟ-೨೭.

೨೨. ಅದೇ-ಪುಟ-೩೦.

೨೩. ಅದೇ-ಪುಟ-೫೪.

೨೪. ವಿಮುಕ್ತ, ಅಭಿನವ ಚಾತುರ್ಮಾಸಿಕ, ಅನು: ಜಿ. ವೀರಭದ್ರಗೌಡ, ಓಲ್ಗಾ ಕಥಾ ಜಗತ್ತಿನ ಜೊತೆಗೊಂದು ಮಾತುಕಥೆ, ಸಂಪುಟ-೧೮, ಸಂಚಿಕೆ: ೨, ೩, ಮೇ, ಸೆಪ್ಟಂಬರ್-೨೦೧೧, ಪುಟ-೧೦.

೨೫. ಅದೇ.

# ಅಧ್ಯಾಯ–೫

## ರಾಮಾಯಣದ ಪ್ರಮುಖ ಸ್ತ್ರೀ ಪಾತ್ರಗಳು

ರಾಮಾಯಣದ ಎಲ್ಲಾ ಪಾತ್ರಗಳು ನಿರ್ಲಕ್ಷಕ್ಕೆ ಒಳಗಾದವು ಎಂಬ ಒಟ್ಟು ಅಭಿಪ್ರಾಯಕ್ಕೆ ಬರಲು ಈವರೆಗೆ ಪ್ರಯತ್ನಿಸಿದ್ದೇವೆ. ಅದಕ್ಕೆ ಈವರೆಗಿನ ಅಧ್ಯಯನಗಳನ್ನು ಸಮರ್ಥನೆಯಾಗಿ ಬಳಸಿಕೊಂಡಿದ್ದೇವೆ. ಅದರಲ್ಲೂ ಖಳನಾಯಕಿಯರಂತೆ ಚಿತ್ರಣಗೊಂಡ, ಇಡೀ ಕಥೆಗೆ ತಿರುವು ನೀಡಿದ ಕೆಲವು ಪಾತ್ರಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮೊದಲು ರಾಮಾಯಣಗಳಲ್ಲಿ ಈ ಪಾತ್ರಗಳ ಚಿತ್ರಣ ಹೇಗೆ ಆಗಿದೆ ಎಂಬುದನ್ನು ಗಮನಿಸಲಾಗಿದೆ. ನಂತರ ಆ ಪಾತ್ರಗಳ ನಿರ್ಲಕ್ಷಕ್ಕೆ ಇರಬಹುದಾದ ಸಾಂಸ್ಕೃತಿಕ, ಸಾಮಾಜಿಕ ಒತ್ತಡಗಳೇನು ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೫.೧ ಕೈಕೇಯಿ, ಮಂಥರೆ ಮುಂತಾದ ಪ್ರಮುಖ ಸ್ತ್ರೀ ಪಾತ್ರಗಳ ನಿರ್ವಚನ

ಸೂರ್ಯವಂಶದ ದಶರಥನ ಪತ್ನಿ.[೧] ಭರತನ ತಾಯಿ. ಈಕೆಯ ತಂದೆ ಕೈಕೇಯದೇಶದ ಅಶ್ವಪತಿರಾಜ. ಈಕೆಯು ಮಂಥರೆಯ ದುರ್ಬೋಧನೆಗೆ ಒಳಗಾಗಿ ಶ್ರೀರಾಮನ ಹದಿನಾಲ್ಕು ವರ್ಷದ ವನವಾಸಕ್ಕೆ ಕಾರಣಳಾದಳು. ಒಮ್ಮೆ ಶಂಬನೆಂಬ (ತಿಮಿಧ್ವಜ) ರಾಕ್ಷಸನು ಇಂದ್ರನನ್ನು ತುಂಬಾ ಪೀಡಿಸಲು ಇಂದ್ರನು ದಶರಥನ ಸಹಾಯದಿಂದ ತಿಮಿಧ್ವಜನೊಡನೆ ಹೋರಾಡಿ ಆತನನ್ನು ಕೊಂದನು. ಈ ಯುದ್ಧಕ್ಕೆ ದಶರಥನು ಕೈಕೆಯನ್ನು ಕರೆದುಕೊಂಡು ಹೋಗಿದ್ದನು. ಅಲ್ಲಿ ತಿಮಿಧ್ವಜನ ಬಾಣದ ಹೊಡೆತದಿಂದ ಎಚ್ಚರತಪ್ಪಿದ ದಶರಥನ ರಥವನ್ನು ಸುರಕ್ಷಿತ ಸ್ಥಳಕ್ಕೆ ಕೊಂಡುಹೋದ ಆಕೆಯ ಸಾಹಸಕ್ಕೆ ಮೆಚ್ಚಿ, ಎರಡು ವರಗಳನ್ನು ಕೇಳುವಂತೆ ರಾಜನು ಹೇಳಿದನು. ಮುಂದೆ ಈ ವರವನ್ನು ಶ್ರೀರಾಮನ ಪಟ್ಟಾಭಿಷೇಕದ ಕಾಲದಲ್ಲಿ ಕೇಳಿ ಆತನ ಅರಣ್ಯವಾಸಕ್ಕೆ ಕಾರಣಳಾದಳು.

ದಶರಥನು ಮಾಡಿದ ಪುತ್ರಕಾಮೇಷ್ಟಿಯಲ್ಲಿ ಯಜ್ಞಪುರುಷನು ಪ್ರತ್ಯಕ್ಷವಾಗಿ ಸುವರ್ಣಪಾತ್ರೆಯಲ್ಲಿ ಪಾಯಸವನ್ನು ದಶರಥನಿಗೆ ಕೊಟ್ಟು 'ಇದನ್ನು ನಿನ್ನ ಪತ್ನಿಯರಿಗೆ ಕೊಡು' ಎಂದು ಹೇಳಿ ಅದೃಶ್ಯನಾದನು. ದಶರಥನು ತನ್ನ ಮೂವರು ಪತ್ನಿಯರಿಗೆ ಆ ಪಾಯಸವನ್ನು ಸಮನಾಗಿ ಹಂಚಿದನು. ಆಗ ಬ್ರಹ್ಮನ ಶಾಪದಿಂದ ಹದ್ದಿನ ರೂಪವನ್ನು ಹೊಂದಿದ್ದ ಒಬ್ಬ ಅಪ್ಸರಾಸ್ತ್ರಿಯು ಕೈಕೇಯ ಕೈಯಲ್ಲಿದ್ದ ಪಾಯಸವನ್ನು ಕಿತ್ತುಕೊಂಡು ಶೇಷಾಚಲದಲ್ಲಿ ತಪಸ್ಸು ಮಾಡುತ್ತಿದ್ದ ಅಂಜನಾದೇವಿಯ ಕೈಯಲ್ಲಿ ಹಾಕಿ, ಶಾಪವಿಮೋಚನೆ ಹೊಂದಿ ಸ್ವರ್ಗಲೋಕವನ್ನು ಸೇರಿದಳು. ಆಗ ಕೌಸಲ್ಯೆ ಮತ್ತು ಸುಮಿತ್ರೆಯರು ತಮ್ಮ ಪಾಲಿನ ಪಾಯಸದಿಂದ ಸ್ವಲ್ಪ ತೆಗೆದು ಕೈಕೇಯಿಗೆ ಕೊಟ್ಟರು.

ವಾಲ್ಮಿಕಿ ರಾಮಾಯಣದಲ್ಲಿ ಕೈಕೇಯಿಯು ಮಲಗಿದ್ದ ಸಂದರ್ಭದಲ್ಲಿ ಬಂದ ಮಂಥರೆಯು ಸಿಟ್ಟಿನಿಂದ ಬಯ್ಯುತ್ತ ಬರುತ್ತಾಳೆ. ಅವಳ ಕಟು ನುಡಿಗಳನ್ನು ಕೇಳಿ ಮನಸ್ಸಿಗೆ ಖೇದವಾಯಿತಾದರೂ

ಮೃದುವಚನದಿಂದ ಕಾರಣವನ್ನು ಕೇಳಿದಳು. ಇದರಿಂದ ಸಹನೆ ತಪ್ಪಿ ಮತ್ತೂ ಒರಟಾಗಿ ಮಾತನಾಡುತ್ತ ರಾಮಪಟ್ಟಾಭಿಷೇಕದ ಸುದ್ದಿಯನ್ನು ಹೇಳಿದಳು[೨]

ಮಂಥರೆಯ ವಚನವನ್ನು ಕೇಳಿದ ಕೈಕೇಯಿಯ ಮುಖವು ಅರಳಿತು. ಅವಳು ಹರ್ಷದಿಂದ ಶರತ್ಕಾಲದ ಚಂದ್ರಲೇಖೆಯಂತೆ ಬೆಳಗುತ್ತ ಹಾಸಿಗೆಯಿಂದ ಎದ್ದು ಕುಳಿತಳು. ಅವಳು ಅತ್ಯಂತ ಸಂತುಷ್ಟಳಾಗಿ, ಮಂಥರೆಯು ಹೀಗೇಕೆ ಮಾತಾಡುವಳೆಂದು ಅಚ್ಚರಿಗೊಳ್ಳುತ್ತ ಒಂದು ಉತ್ತಮವಾದ ಆಭರಣವನ್ನು ತೆಗೆದು ಕುಬ್ಜೆಗೆ ಬಹುಮಾನವಾಗಿ ಕೊಟ್ಟಳು.[೩]

ಮಂಥರೇ, ರಾಮನ ಪಟ್ಟಾಭಿಷೇಕದ ವಿಷಯವು ನನಗೆ ಪರಮಾನಂದಕರವಾದ ಸುದ್ದಿ. ಈ ಸುದ್ದಿಯನ್ನು ತಿಳಿಸಿದ ನಿನಗೆ ಇನ್ನೂ ಪ್ರಿಯವಾದ ಯಾವ ಕಾರ್ಯವನ್ನು ಮಾಡಿಕೊಡಲಿ? ರಾಮನನ್ನಾಗಲಿ ಭರತನನ್ನಾಗಲಿ ನನಗೆ ಯಾವ ವಿಶೇಷವೂ ಕಾಣಲಿಲ್ಲ. ಮಹಾರಾಜನು ರಾಮನಿಗೆ ರಾಜ್ಯಾಭಿಷೇಕ ಮಾಡುವೆನೆಂಬುದನ್ನು ಕೇಳಿ ನನಗೆ ಆನಂದವಾಗಿದೆ. ಮಂಥರೆ, ನನಗೆ ಇದಕ್ಕಿಂತಲೂ ಹೆಚ್ಚು ಆನಂದಕರವಾದ ವಾರ್ತೆಯನ್ನು ಹೇಳಲು ನಿನಗೆ ಶಕ್ಯವಿಲ್ಲ! ರಾಮನ ಪಟ್ಟಾಭಿಷೇಕವು ನನಗೆ ಸರ್ವೋತ್ತಮವಾದ ಶುಭವಾರ್ತೆ! ನಿನಗೆ ಇನ್ನೂ ಬೇಕಾದ್ದನ್ನು ಕೇಳಿಕೋ; ಕೊಡುತ್ತೇನೆ ಎಂದಳು. ಸಿಟ್ಟಿಗೆದ್ದ ಮಂಥರೆಯು ಮತ್ತಷ್ಟು ಕಠೋರನುಡಿಗಳನ್ನಾಡಿ ನೀನೊಬ್ಬಳು ಪರಿಚಾರಕಳಾಗಬೇಕಾಗುತ್ತದೆ ಎಂದಾಗಲೂ ಕೈಕೇಯಿ ಕೋಪಿಸಿಕೊಳ್ಳುವುದಿಲ್ಲ. ಬದಲಾಗಿ ಪರಮ ಸಂತೋಷದಿಂದ ರಾಮನ ಸದ್ಗುಣಗಳನ್ನು ಕೊಂಡಾಡುತ್ತಾಳೆ. ನನಗೆ ಭರತನು ಎಷ್ಟು ಬೇಕಾದವನೋ ರಾಮನೂ ಅಷ್ಟೇ ಬೇಕಾದವನು. ರಾಮನು ಇನ್ನೂ ಒಂದು ತೂಕ ಹೆಚ್ಚು ಎನ್ನುತ್ತಾಳೆ.

ಕೊನೆಗೂ ಮಂಥರೆಯ ಮಾತಿನ ಪ್ರಭಾವಕ್ಕೆ ಕೈಕೇಯಿಯು ಸಿಕ್ಕಿಬೀಳುತ್ತಾಳೆ. ಸಿಟ್ಟಿನಿಂದ ಮುಖವು ಕೆಂಪಾಗಿ ನಿಟ್ಟುಸಿರು ಬಿಡುತ್ತಾಳೆ.

**ಅದ್ಯ ರಾಮಮಿತಃ ಕ್ಷಿಪ್ರಂ ವನಂ ಪ್ರಸ್ಥಾಪಯಾಮ್ಯಹಮ್ ।**
**ಯೌವರಾಜ್ಯೇನ ಭರತಂ ಕ್ಷಿಪ್ರಮೇವಾಭಿಷೇಚಯೇ**[೪] **॥**

ಕೈಕೇಯಿಯು "ಈ ದಿನವೇ ರಾಮನು ಇಲ್ಲಿಂದ ವನಕ್ಕೆ ಹೊರಟು ಹೋಗುವಂತೆ ಮಾಡುತ್ತೇನೆ. ಶೀಘ್ರದಲ್ಲೇ ಭರತನಿಗೆ ಯುವರಾಜಪದವಿಯಲ್ಲಿ ಪಟ್ಟಾಭಿಷೇಕ ಮಾಡಿಸುತ್ತೇನೆ. ಭರತನಿಗೆ ರಾಜ್ಯವಾಗಬೇಕು. ರಾಮನಿಗೆ ಯಾವ ರೀತಿಯಲ್ಲಿಯೂ ರಾಜ್ಯವು ದೊರಕಬಾರದು. ಇದಕ್ಕೆ ಉಪಾಯವೇನು? ಮಂಥರೆ, ಆಲೋಚಿಸು" ಎಂದಳು. ಮಂಥರೆಯು ಆಗ ಕೈಕೇಯಿಯು ಹಿಂದೆ ದಶರಥನೊಂದಿಗೆ ಯುದ್ಧಕ್ಕೆ ತೆರಳಿ ಸಹಾಯ ಮಾಡಿದಾಗ ದಶರಥನು ನೀಡಿದ ಎರಡು ವರಗಳನ್ನು ನೆನಪಿಸಿ, ಅದನ್ನು ಆಗ ಕೇಳದೆ ಉಳಿಸಿಕೊಂಡಿದ್ದೆ ಅಲ್ಲವೇ? ಈಗ ಭರತನಿಗೆ ಪಟ್ಟಾಭಿಷೇಕ, ರಾಮನಿಗೆ ಹದಿನಾಲ್ಕು ವರ್ಷ ವನವಾಸ ಎಂಬುದಾಗಿ ಎರಡು ವರಗಳನ್ನು ಕೇಳಿ ಪಡೆದುಕೋ ಎನ್ನುತ್ತಾಳೆ. ಮತ್ತೆ ಮುಂದುವರೆದು ಪುಣ್ಯಾತ್ಮಳೇ

ನೀನು ಶೋಕಮಗ್ನಳಾಗಿದ್ದು ದಶರಥನು ನಿನ್ನನ್ನು ಓಲೈಸಿ ವರಕೊಡಲೊಪ್ಪಿದಾಗ ಮಾತ್ರ ಮಾತು ತೆಗೆದುಕೊಂಡು ನಂತರ ವರವನ್ನು ಕೇಳು ಎಂದು ಹೇಳಿಕೊಡುತ್ತಾಳೆ. ಆಗ ಕೈಕೇಯಿಯು ಮಂಥರೆಯನ್ನು ಹೊಗಳುತ್ತಾಳೆ. ನಿನ್ನ ಗೂನು ಬೆನ್ನಿಗೆ ಒಂದು ಚಿನ್ನದಸರ ಮಾಡಿಸಿ ಹಾಕಿಸುತ್ತೇನೆ. ಅಪರಂಜಿಯ ತಗಡಿನಿಂದ ಇದನ್ನು ಹೊದಿಸುತ್ತೇನೆ ಎಂದೆಲ್ಲ ಹೇಳುತ್ತಾಳೆ. ಚಿನ್ನದಂತಹ ಕೈಕೇಯಿಯು ಕುಬ್ಜೆಯ ಮಾತುಗಳನ್ನು ಕೇಳಿ ಚಿನ್ನದಂತೆ ಆಕಾರವನ್ನು ಬದಲಾಯಿಸಿದಳು. ಗೂನಿಯು ತನ್ನ ವಾಗ್ಬಾಣಗಳಿಂದ ಮತ್ತೆ ಮತ್ತೆ ಚುಚ್ಚಿ ರೇಗಿಸುತ್ತಿರಲು ಕೈಕೇಯಿಯು ತನ್ನ ಎದೆಯ ಮೇಲೆ ಕೈಗಳನ್ನಿಟ್ಟುಕೊಂಡು 'ರಾಜನು ನನಗೆ ಹೀಗೆ ದ್ರೋಹ ಮಾಡಬಹುದೇ? ಎಂದು ವಿಸ್ಮಿತಳಾಗಿ ಎಚ್ಚರಿಕೆಯನ್ನು ನೀಡಿದ ಮಂಥರೆಯನ್ನು ಹೊಗಳಿದಳು. ಕುಬ್ಜೆಯ ಕೆಟ್ಟ ಬೋಧನೆಗೆ ಒಳಪಡಿಸಿ ಕೈಕೇಯಿಗೆ ತಪ್ಪುದಾರಿಯನ್ನು ತೋರಿಸಿದಳು.

ದಶರಥನು ತನ್ನ ಪ್ರಿಯಳಿಗೆ ಈ ಸಂತೋಷದ ಸುದ್ದಿಯನ್ನು ತಿಳಿಸಬೇಕೆಂದು ಅವಳ ಅಂತಃಪುರಕ್ಕೆ ಹೋದನು. ಆತನ ಪ್ರವೇಶವು ಹೇಗಿತ್ತೆಂದರೆ ಬಿಳಿಯ ಮೋಡಗಳಿಂದ ಭವ್ಯವಾದ–ಆದರೆ ರಾಹುವು ಕಾದು ಕುಳಿತಿದ್ದ ಅಂತರಿಕ್ಷಕ್ಕೆ ಚಂದ್ರನು ಹೋದಂತಾಯಿತು. ಕೈಕೇಯಿಯು ಅಂತಃಪುರದಲ್ಲಿ ಕಾಣದಿದ್ದುದರಿಂದ ಪ್ರತೀಹಾರಿಯನ್ನು ವಿಚಾರಿಸಿದನು. ವಿಷಯ ತಿಳಿದು ಅಲ್ಲಿಗೆ ಹೋದಾಗ ಕೆಟ್ಟ ಉದ್ದೇಶದಿಂದ ಮಲಗಿದ್ದ ಕೈಕೇಯಿಯನ್ನು ಕಂಡನು. ಅವಳು ಕಿತ್ತೆಸೆದ ಬಳ್ಳಿಯಂತೆ, ಭೂಮಿಗೆ ಬಿದ್ದ ದೇವತೆಯಂತೆ, ತಳ್ಳಿ ಬೀಳಿಸಿದ ಕಿನ್ನರಿಯಂತೆ, ಜಾರಿಬಿದ್ದ ಅಪ್ಸರೆಯಂತೆ, ಹರಿದು ಹಾಕಿದ ಮಾಲೆಯಂತೆ, ಸೆರೆಹಿಡಿದು ಕಟ್ಟಿದ ಹೆಣ್ಣು ಜಿಂಕೆಯಂತೆ ಇದ್ದಳು. ಕಾಡಿನಲ್ಲಿ ಬೇಟೆಗಾರನ ವಿಷಯುಕ್ತಬಾಣದ ಹೊಡೆತದಿಂದ ನರಳುವ ಹೆಣ್ಣಾನೆಯನ್ನು ಮಹಾಗಜವು ಸೊಂಡಿಲಿನಿಂದ ನೇವರಿಸುವಂತೆ ಮಹಾರಾಜನು ಪ್ರೀತಿಯಿಂದ ಆಕೆಯನ್ನು ಕೈಯಿಂದ ಸವರಿದನು.[೫]

ನಿನ್ನ ಸಂತೋಷಕ್ಕಾಗಿ ಕೊಲೆಗೆ ಅರ್ಹನಲ್ಲದವನನ್ನಾದರೂ ಕೊಲ್ಲಿಸುತೇನೆ. ಮರದಂಡನೆಗೆ ಒಳಗಾದವನನ್ನು ಬಿಡಿಸುತ್ತೇನೆ. ಯಾವ ದರಿದ್ರನನ್ನು ಶ್ರೀಮಂತನನ್ನಾಗಿ ಮಾಡಬೇಕು? ಯಾವ ಶ್ರೀಮಂತನನ್ನು ದರಿದ್ರನನ್ನಾಗಿ ಮಾಡಬೇಕು? ನಾನು, ನನ್ನವರು ಎಲ್ಲರೂ ನಿನ್ನ ಅಧೀನರಾಗಿದ್ದೇವೆ. ನಿನ್ನ ಅಭಿಲಾಷೆಗೆ ನಾನೆಂದಿಗೂ ಅಡ್ಡಬರುವುದಿಲ್ಲ. ನನ್ನ ಪ್ರಾಣವನ್ನಾದರೂ ಒತ್ತೆಯಿಡುತ್ತೇನೆ. ನಿನ್ನ ಮನಸ್ಸಿನಲ್ಲಿ ಏನಿದೆ? ಹೇಳು. ನಿನ್ನಲ್ಲಿ ನನ್ನ ಪ್ರೇಮದ ಬಲವೆಷ್ಟೆಂಬುದು ಗೊತ್ತಿರುವಾಗ ನೀನು ಸಂದೇಹಪಡುವುದು ಯುಕ್ತವಲ್ಲ. ನಿನ್ನ ಇಷ್ಟವನ್ನು ನಡೆಸಿಕೊಡುತ್ತೇನೆಂದು ನನ್ನ ಪುಣ್ಯದ ಮೇಲೆ ಆಣೆಯಿಟ್ಟು ಶಪಥ ಮಾಡುತ್ತೇನೆ, ಎನ್ನುತ್ತಾನೆ. ಇದನ್ನು ಕೇಳಿದ ಕೈಕೇಯಿಯು ಅಪ್ರಿಯವಾದ ಆ ವಿಷಯ ಹೇಳಬೇಕೆಂದು ಸಂಕಲ್ಪಿಸಿದಳು. ನನ್ನ ಇಷ್ಟ ಒಂದನ್ನು ನೀನು ನೆರವೇರಿಸಿಕೊಡಬೇಕೆಂಬುದೇ ನನ್ನ ಬಯಕೆ. ಆ ರೀತಿಯಲ್ಲಿ ನೀನು ಪ್ರತಿಜ್ಞೆ ಮಾಡಬೇಕು. ಆಗಲೇ ನನ್ನ ಅಭಿಲಾಷೆಯೇನೆಂದು ಹೇಳುತ್ತೇನೆ ಎಂದಳು.

ಆಗ ದಶರಥನು: ಕೈಕೇಯಿ, ಯಾರನ್ನು ಒಂದು ಮುಹೂರ್ತಕಾಲ ನೋಡದಿದ್ದರೆ ನಾನು ನಿಶ್ಚಯವಾಗಿಯೂ ಬದುಕಲಾರೆನೊ, ಆ ಶ್ರೀರಾಮನ ಹೆಸರಿನಲ್ಲಿ ನಿನ್ನ ಮಾತನ್ನು ನಡೆಸಿಕೊಡುತ್ತೇನೆಂದು ಶಪಥ ಮಾಡುತ್ತೇನೆ ಎನ್ನುತ್ತಾನೆ.[೬] ರಾಜನ ಶಪಥ ವಾಕ್ಯದಿಂದ ಸಂತುಷ್ಟಳಾಗಿ, ಎದುರಿಗೆ ಪ್ರತ್ಯಕ್ಷವಾಗಿ ಬಂದು ನಿಂತ ಮೃತ್ಯುವಿನಂತೆ ಮಹಾಘೋರವಾದ ತನ್ನ ಅಭಿಪ್ರಾಯವನ್ನು ಹೇಳಿದಳು. ಮುಕ್ಕೋಟಿ ದೇವತೆಗಳನ್ನು ಇಡೀ ವಿಶ್ವದ ಎಲ್ಲ ವಿಶೇಷಗಳನ್ನೂ ಸಾಕ್ಷಿಯಾಗಿಟ್ಟುಕೊಂಡು ಮಹಾವೀರನಾದ ದಶರಥನನ್ನು ತನ್ನ ಹಿಡಿತಕ್ಕೆ ತಂದುಕೊಂಡಳು. ಹಿಂದೆ ನಡೆದ ಯುದ್ಧ ಸನ್ನಿವೇಶವನ್ನು ನೆನಪಿಸಿದಳು. ನ್ಯಾಯವಾಗಿ ವರವನ್ನು ನನಗೆ ಸಲ್ಲಿಸದಿದ್ದರೆ, ನಿನ್ನಿಂದ ಅವಮಾನಿತಳಾಗಿ ನಾನು ಈ ದಿನವೇ ಪ್ರಾಣವನ್ನು ಬಿಡುವೆನು ಎಂದಳು. ಮೃಗವು ತನ್ನ ವಿನಾಶಕ್ಕಾಗಿ ಬಲೆಯಲ್ಲಿ ಹೋಗಿ ಸಿಕ್ಕಿಕೊಳ್ಳುವಂತೆ ದಶರಥನು ಕೈಕೇಯಿಯ ಬಲೆಗೆ ಜಾರಿಬಿದ್ದನು. ಆಗ ಕೈಕೇಯಿಯು ವರವನ್ನು ಕೇಳುತ್ತಾಳೆ. 'ಈಗ ರಾಮನ ಪಟ್ಟಾಭಿಷೇಕಕ್ಕಾಗಿ ಯಾವ ಏರ್ಪಾಡನ್ನೂ ಮಾಡಿರುವೆಯೋ ಅದೇ ಏರ್ಪಾಡಿನೊಂದಿಗೆ ನನ್ನ ಭರತನಿಗೆ ಪಟ್ಟಾಭಿಷೇಕ ಮಾಡು. ರಾಮನು ನಾರುಬಟ್ಟೆಗಳನ್ನು ಧರಿಸಿ ಚರ್ಮವನ್ನು ಹೊದೆದು ಜಟಾಧಾರಿಯಾಗಿ ತಾಪಸನಂತೆ ಹದಿನಾಲ್ಕು ವರ್ಷಗಳವರೆಗೆ ದಂಡಕಾರಣ್ಯಕ್ಕೆ ಹೋಗಿರಬೇಕು' ಎಂದು ಹೇಳಿದಳು.

ಮಂತ್ರವಾದಿಯ ಮಂತ್ರಗಳಿಗೆ ಕಟ್ಟುಬಿದ್ದು ನೆಲದಲ್ಲಿ ಗೆರೆಹಾಕಿದ ಮಂಡಲದಲ್ಲಿ ಬಿದ್ದ ವಿಷ ಸರ್ಪದಂತಾದನು.[೭] ಕುಪಿತನಾದ ನರಪತಿಯ ಬಾಯಿಂದ 'ಹಾ! ಧಿಕ್' ಎಂಬ ಉದ್ಗಾರ ಹೊರಟಿತು. ಆತ ಪ್ರಜ್ಞಾಶೂನ್ಯನಾದನು. ಎಚ್ಚರಗೊಂಡನಂತರ ನಾನಾ ರೀತಿಯಿಂದ ಕೈಕೇಯಿಯನ್ನು ಬೇಡಿಕೊಂಡನು. ಮತಿಭ್ರಾಂತನಂತೆ ವಿಲಪಿಸಿದನು, ಗೋಳಾಡಿದನು. ಆಗ ಕೈಕೇಯಿಯು ರೌದ್ರಾವೇಶ ತಾಳಿದಳು. ಮತ್ತಷ್ಟು ಕ್ರೂರವಾಗಿ ಮಾತನಾಡಿದಳು. ವರಗಳನ್ನು ಕೊಡುವೆನೆಂದು ಮಾತು ಕೊಟ್ಟು ಈಗ ಸಂಕಟಪಡುತ್ತಿರುವೆ. ಕೈಕೇಯಿಗೆ ಕೊಟ್ಟ ವರವನ್ನು ಸಲ್ಲಿಸಿದೆಯಾ? ಎಂದು ಬೇರೆ ಅರಸರು ಕೇಳಿದರೆ ಏನು ಹೇಳುವೆ? ಕೈಕೇಯಿಯ ಅನುಗ್ರಹದಿಂದ ನಾನು ಬದುಕಿದ್ದೇನೆ. ಆದರೆ ಅವಳಿಗೆ ಮಾತ್ರ ಮೋಸ ಮಾಡಿದೆ ಎಂದು ಹೇಳುವೆಯಾ? ಮಾತು ಕೊಟ್ಟು ಆಗಲೇ ಮುರಿಯುತ್ತಿರುವೆ ಎನ್ನುತ್ತಾಳೆ. ಭರತನ ಹೆಸರಿನಲ್ಲಿ ನನ್ನ ಹೆಸರಿನಲ್ಲಿ ಆಣೆ ಮಾಡಿ ಹೇಳುತ್ತೇನೆ. ರಾಮನು ದೇಶಭ್ರಷ್ಟನಾಗಿ ಹೊರಡುವುದನ್ನು ಬಿಟ್ಟರೆ ಇನ್ನು ಯಾವುದರಿಂದಲೂ ನನಗೆ ತೃಪ್ತಿ ಇಲ್ಲ' ಎಂದು ಹೇಳಿದಳು. ದಶರಥನು ನಾನಾ ಬಗೆಯಿಂದ ಹೇಳಿ ಶೋಕದಿಂದ ಹಲುಬಿದನು. 'ನೋಡಲು ಚೆನ್ನಾಗಿದೆಯೆಂದು ವಿಷಯುಕ್ತವಾದ ಹೆಂಡವನ್ನು ಕುಡಿದವನಂತೆ ನನ್ನ ಸ್ಥಿತಿಯಾಯಿತು. ಬೇಡನು ಇಂಪಾದ ಸಂಗೀತದಿಂದ ಜಿಂಕೆಯನ್ನು ನಿಲ್ಲಿಸಿ ಹೊಡೆಯುವಂತೆ, ನೀನು ಕಪಟ ಪ್ರೇಮದ ನುಡಿಗಳಿಂದ ನನ್ನನ್ನು ಮರಳು ಮಾಡಿ ಕೊಂದೆ. ದಶರಥನು ಎಂಥ ಮೂರ್ಖ! ಕಾಮಿ ಒಬ್ಬ ಹೆಂಗಸಿಗಾಗಿ ಅಷ್ಟು ಒಳ್ಳೆಯ ಮಗನನ್ನು ಕಾಡಿಗೆ ಅಟ್ಟಿದ್ದಾನೆ ಎಂದು ನನ್ನನ್ನು ಬಯ್ಯುತ್ತಾರೆ. 'ರಾಮನು ಅರಣ್ಯಕ್ಕೆ ಹೋಗಬೇಕು ಭರತನಿಗೆ ಪಟ್ಟಾಭಿಷೇಕವಾಗಬೇಕು' ಎನ್ನುವ ಊಹಾತೀತವಾದ ಈ

ನಿಷ್ಠುರವಾಕ್ಯವನ್ನು ಹೇಳಲು ಯಾರಿಗೆ ಸಾಧ್ಯವಾದೀತು? ನೀನು ಕ್ಷೌರದ ಕತ್ತಿಯಂತಹವಳು ಎಂದು ಗೋಳಾಡುತ್ತ ವ್ಯಾಧಿಗ್ರಸ್ಥನಂತೆ ಬಳಲಿ ಬಿದ್ದು ಹೋದನು.

ತನ್ನ ಇಷ್ಟಾರ್ಥವು ಇನ್ನೂ ಪೂರ್ಣವಾಗದಿರುವುದರಿಂದ ರಾಮನಿಂದ ಭರತನಿಗೆ ಭಯವುಂಟೆಂಬ ಭಾವನೆಯು ಅವಳಲ್ಲಿ ಬೇರೂರಿತ್ತು. ಆದ್ದರಿಂದ ಲೋಕಾಪವಾದಕ್ಕೆ ಅಂಜದಂತೆ ಮತ್ತೂ ಕ್ರೂರವಾಗಿ ಮಾತನಾಡಿದಳು. ಪುತ್ರಶೋಕದಿಂದ ಪೀಡಿತನಾದ ದಶರಥನು ಪ್ರಜ್ಞೆಯಿಲ್ಲದೆ ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದನು. ಅದನ್ನು ಕಂಡ ಕೈಕೇಯಿಯು 'ವರವನ್ನು ಸಲ್ಲಿಸುತ್ತೇನೆಂದು ಮಾತುಕೊಟ್ಟು ಏನೋ ಪಾಪಕೃತ್ಯವನ್ನು ಮಾಡಿದವನಂತೆ ನೆಲದ ಮೇಲೆ ಹೊರಳಾಡಲು ನಿನಗೇನಾಗಿದೆ? ಧರ್ಮವನ್ನು ಪರಿಪಾಲಿಸಲು, ನನ್ನ ಪ್ರಾರ್ಥನೆಯನ್ನು ಸಲ್ಲಿಸಲು, ನಿನ್ನ ಮಗನಾದ ರಾಮನನ್ನು ಮನೆಯಿಂದ ಹೊರಡಿಸು, ಹೊರಡಿಸು, ಹೊರಡಿಸು. ಮೂರು ಸಲ ಹೇಳಿದ್ದೇನೆ. ನನಗೆ ಕೊಟ್ಟ ಮಾತನ್ನು ನಡೆಸದಿದ್ದರೆ ನೀನು ನನ್ನನ್ನು ಕೈಬಿಟ್ಟೆಯೆಂದು ನಿನ್ನ ಮುಂದೆಯೇ ಪ್ರಾಣಬಿಡುತ್ತೇನೆ' ಎಂದಳು. 'ಯಾವ ತೊಂದರೆಯೂ ಆಗದಂತೆ ನಿನ್ನ ಮಗನಾದ ರಾಮನನ್ನು ಇಲ್ಲಿಗೆ ಕರೆಸು, ನನ್ನ ಪುತ್ರನನ್ನು ರಾಜ್ಯದಲ್ಲಿ ಸ್ಥಾಪಿಸಿ ರಾಮನನ್ನು ಕಾಡಿಗೆ ಅಟ್ಟಿ ನನಗೆ ಶತ್ರುಗಳಿಲ್ಲದಂತೆ ಮಾಡಿದರೆ ನಿನ್ನ ಕರ್ತವ್ಯ ಮುಗಿಯಿತು' ಎಂದು ಹೇಳಿದಳು.

ಮರುದಿನ ಬೆಳಗ್ಗೆ ವಸಿಷ್ಠರ ಆದೇಶದಂತೆ ಸುಮಂತ್ರನು ದಶರಥನ ಬಳಿ ಹೋಗಿ ಭೂಪಾಲನನ್ನು ಸ್ತುತಿಸಿದನು. ಇದರಿಂದ ದಶರಥನ ಶೋಕವು ಉಮ್ಮಳಿಸಿತು. ಏನೂ ಹೇಳಲಾರದೆ ಹೋದನು. ಅದನ್ನು ಕಂಡ ಕೈಕೇಯಿಯು 'ಸುಮಂತ್ರ, ರಾಮನಿಗೆ ಪಟ್ಟಗಟ್ಟುವೆನೆಂಬ ಉತ್ಸಾಹದಿಂದ ಮಹಾರಾಜನಿಗೆ ರಾತ್ರಿಯೆಲ್ಲವೂ ನಿದ್ದೆ ಬರಲಿಲ್ಲ! ನೀನು ರಾಮನನ್ನು ಇಲ್ಲಿಗೆ ಕರೆದುಕೊಂಡು ಬಾ, ಒಳ್ಳೆಯದಾಗಲಿ ಹೋಗು' ಎಂದು ಅವನನ್ನು ಕಳುಹಿಸಿದಳು.

ರಾಮನು ಬಂದಾಗ ದಶರಥನು ದೀನನಾಗಿ ಕುಳಿತಿದ್ದನು. 'ರಾಮ' ಎಂದು ಹೇಳಿದನು. ಅವನಿಗೆ ರಾಮನನನ್ನು ನೋಡಲೂ ಆಗಲಿಲ್ಲ, ಮಾತನಾಡಲೂ ಆಗಲಿಲ್ಲ, ಧೈರ್ಯಗುಂದಿ ರಾಮನು ನಾನಾ ಬಗೆಯಲ್ಲಿ ಯೋಚಿಸಿ ಕೈಕೇಯಿಯನ್ನೇ ಕಾರಣ ವಿಚಾರಿಸುತ್ತಾನೆ. ಅದಕ್ಕೆ ಲಜ್ಜೆಗೆಟ್ಟ ಕೈಕೇಯಿಯು ಹಿಂದೆ ಮುಂದೆ ನೋಡದೆ ಧೈರ್ಯದಿಂದ ತನ್ನ ಸ್ವಾರ್ಥವನ್ನು ಹೇಳಿಬಿಟ್ಟಳು. 'ರಾಮ, ಮಹಾರಾಜನಿಗೆ ಕೋಪವೂ ಬಂದಿಲ್ಲ, ಯಾವ ಕಷ್ಟವೂ ಕೂಡಿಲ್ಲ. ತನ್ನ ಮನಸ್ಸಿನಲ್ಲಿರುವ ಒಂದು ವಿಷಯವನ್ನು ನಿನಗೆ ಅಂಜಿಕೊಂಡು ಹೇಳುತ್ತಿಲ್ಲ. ನೀನು ಪ್ರೀತಿಪಾತ್ರನಾದ್ದರಿಂದ ಅಪ್ರಿಯವಾದುದನ್ನು ಹೇಳಲು ಅವನಿಂದ ಆಗುವುದಿಲ್ಲ. ಹಿಂದೆ ನನಗೆ ವರಗಳನ್ನು ಕೊಟ್ಟು ಮನ್ನಿಸಿದ್ದನು. ಈಗ ಅವುಗಳನ್ನು ಸಲ್ಲಿಸಬೇಕಾಗಿರುವುದರಿಂದ ಸಾಮಾನ್ಯ ಮನುಷ್ಯರಂತೆ ಪಶ್ಚಾತ್ತಾಪ ಪಡುತ್ತಿದ್ದಾನೆ. ನೀನು ಅದನ್ನು ನಡೆಸುವುದಾದರೆ ನಿನಗೆ ಹೇಳುತ್ತೇನೆ. ಈತನು ಆ ವಿಷಯವನ್ನು ತಿಳಿಸುವುದಿಲ್ಲ ಎಂದಳು. ರಾಮನು ದೃಢವಾಗಿ ಆ ಮಾತುಗಳನ್ನು ನಡೆಸಿಕೊಡುವೆಂದು ಹೇಳಿದ ಮೇಲೆ ನಿರ್ಲಜ್ಜ ಕೈಕೇಯಿಯು ತನ್ನ ಬೇಡಿಕೆಯನ್ನು ತಿಳಿಸಿದಳು. ಅದನ್ನು ಕೇಳಿದ ರಾಮನು

ಸಮಾಧಾನದಿಂದಿದ್ದರೂ ದಶರಥನು ಮಾತ್ರ ಮಗನಿಗೆ ಕಷ್ಟವು ಬಂದಿತೆಂದು ಬೆಂದುಹೋದನು. ರಾಮನು ಮೃತ್ಯುವಿನಂತೆ ಕ್ರೂರವಾದ ಮಾತುಗಳನ್ನು ಕೇಳಿ ವಿಷಾದಗೊಳ್ಳದೆ ಹೊರಡಲು ಒಪ್ಪಿದನು. ಆದರೆ ತಂದೆಯೇಕೆ ನನ್ನೊಡನೆ ಮೊದಲಿನಂತೆ ಮಾತನಾಡುತ್ತಿಲ್ಲ. ಸಂಕೋಚಪಡುತ್ತಿರುವ ಆತನಿಗೆ ಸಮಾಧಾನ ಹೇಳು. ನಾನು ತಡಮಾಡದೆ ದಂಡಕಾರಣ್ಯಕ್ಕೆ ಹೊರಡುತ್ತೇನೆ ಎಂದು ಹೇಳಿದನು.

ಕೈಕೇಯಿಯು ರಾಮನನ್ನು ಆತುರಪಡಿಸುತ್ತ ರಾಮ, ದೂತರು ಶೀಘ್ರಗಾಮಿ ಕುದುರೆಗಳನ್ನೇರಿ ಭರತನನ್ನು ಕರೆ ತರಲು ಹೋಗುತ್ತಾರೆ. ನೀನು ಕೂಡಲೇ ಕಾಡಿಗೆ ಹೊರಟುಹೋಗು. ಅಲ್ಲಿಯವರೆಗೆ ನಿನ್ನ ತಂದೆ ಸ್ನಾನವನ್ನೂ ಮಾಡುವುದಿಲ್ಲ, ಊಟವನ್ನೂ ಮಾಡುವುದಿಲ್ಲ ಎಂದಳು. ಅದನ್ನು ಕೇಳಿದ ದಶರಥನು 'ಅಯ್ಯೋ ಕಷ್ಟವೇ!' ಎನ್ನುತ್ತಾ ಎಚ್ಚರತಪ್ಪಿ ಬಿದ್ದನು. ಈ ಸಂದರ್ಭದಲ್ಲಿ ಹೇಳಿದ ಮಾತು ರಾಮನಿಗೆ ಕೈಕೇಯಿಯಲ್ಲಿ ಸಹಜವಾದ ಮಾತೃಭಕ್ತಿಯಿತ್ತೆಂಬುದನ್ನು ಎತ್ತಿ ತೋರಿಸುತ್ತದೆ. ಕೇಕಯರಾಜ ಪುತ್ರಿಯಾದ ನೀನು ನೇರವಾಗಿ ಅಪ್ಪಣೆ ಮಾಡಲು ಅಧಿಕಾರವಿದ್ದರೂ ಮಹಾರಾಜನಿಗೆ ಹೇಳಿದೆಯಲ್ಲ! ಭರತನು ರಾಜ್ಯಭಾರ ಮಾಡುತ್ತ ತಂದೆಯ ಶುಶ್ರೂಷೆಯಲ್ಲಿ ನಿರತನಾಗಿರುವಂತೆ ನೋಡಿಕೊ. ಏಕೆಂದರೆ ಪಿತೃಶುಶ್ರೂಷೆಯು ಶಾಶ್ವತವಾದ ಧರ್ಮ ಎಂದು ಹೇಳಿದನು. ರಾಮನ ಮಾತನ್ನು ಕೇಳಿ ದುಃಖವುಕ್ಕಿದ ದಶರಥನು 'ಹೋ' ಎಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು.

ಸುಮಂತ್ರನು ಕೂಡ ಕೈಕೇಯಿಯ ನಡೆಯಿಂದಾಗಿ ಸಿಟ್ಟಿನಿಂದ ಅವಳನ್ನು ಬಹುವಾಗಿ ನಿಂದಿಸಿದನು, ಪ್ರಾರ್ಥಿಸಿದನು. ಆದರೂ ಅವಳು ಕರಗಲಿಲ್ಲ ದಶರಥನು ರಾಮನೊಂದಿಗೆ ಆತನ ಸೌಕರ್ಯಕ್ಕೆ ಬೇಕಾದ ಸಕಲ ಸೈನ್ಯ, ಪರಿವಾರವೂ, ಸಾಮಗ್ರಿಗಳೂ ಹೊರಡುವುದು ಎಂದು ಆಜ್ಞೆ ಮಾಡಿದನು. ಅದನ್ನು ಕೇಳುತ್ತಿದ್ದಂತೆ ಕೈಕೇಯಿಗೆ ಭಯವಾಗಿ, ವಿಷಾದದಿಂದ ಉದ್ವಿಗ್ನಳಾದಳು. ಬಾಯಿ ಒಣಗಿತು, ಆದರೂ ಮಹಾರಾಜನ ಕಡೆ ತಿರುಗಿ 'ಹೇ ಪುಣ್ಯಾತ್ಮ, ಜನ, ಧನಗಳಿಲ್ಲದ ನಿಸ್ಸಾರವಾದ ರಾಜ್ಯವನು ಭರತನೆಂದಿಗೂ ಸ್ವೀಕರಿಸುವುದಿಲ್ಲ. ಅಂಥ ರಾಜ್ಯವು, ಸಾರವಾದ ಭಾಗವನ್ನು ಕುಡಿದು ಬಿಟ್ಟಿರುವ ರುಚಿಗೆಟ್ಟ ಹೆಂಡವಿದ್ದಂತೆ' ಎಂದು ಹೇಳಿದಳು. ಅವಳ ಲಜ್ಜೆಯಿಲ್ಲದೆ ಕ್ರೂರವಾಗಿ ನುಡಿಯಲು ದಶರಥನು ನನ್ನ ಆಜ್ಞೆಯನ್ನು ಹಿಂದೆಯೇ ನೀನು ಪಡೆಯಲಿಲ್ಲವೇಕೆ ಎಂದಾಗ ಕೈಕೇಯಿಯು ಮತ್ತಷ್ಟು ಕುಪಿತಳಾಗಿ 'ನಿನ್ನ ವಂಶದಲ್ಲಿಯೇ ಸಗರನು ಜ್ಯೇಷ್ಠ ಪುತ್ರನಾದ ಅಸಮಂಜನಿಗೆ ಏನನ್ನೂ ಕೊಡದೆ ಹೊರಡಿಸಿದ್ದು ಪ್ರಖ್ಯಾತವಾಗಿದೆ, ಹಾಗೆಯೇ ಇವನೂ ಹೋಗಲಿ' ಎನ್ನುತ್ತಾಳೆ. ಅಲ್ಲಿದ್ದ ಸಿದ್ಧಾರ್ಥನೆಂಬ ವೃದ್ಧ ಮಂತ್ರಿ ಅಸಮಂಜನ ಕ್ರೌರ್ಯದ ಬಗ್ಗೆ ಹೇಳುತ್ತಾನೆ. ರಾಮನ ಸ್ಥಿತಿಯು ಹಾಗಲ್ಲವೆಂದು ಸ್ಪಷ್ಟಪಡಿಸಿದ್ದು ಕೂಡ ಪ್ರಯೋಜನವಾಗಲಿಲ್ಲ.

ಮುಂದೆ ತನ್ನ ಕೃತ್ಯಕ್ಕೆ ನಾಚಿದ ಕೈಕೇಯಿಯು ವನವಾಸದಲ್ಲಿದ್ದ ರಾಮನನ್ನು ಕಾಣಲು ಭರತ ಮತ್ತು ಪರಿವಾರದೊಡಗೂಡಿ ಹೋಗುತ್ತಾಳೆ. ರಾಮನು ತನ್ನ ಸಹಜ ಸ್ವಭಾವದಿಂದ ಅವಳನ್ನು ತನ್ನ ತಾಯಿಯಂತೆಯೇ ಕಾಣುತ್ತಾನೆ.

### ೫.೨ ರಾಮಚರಿತ ಮಾನಸದ ಪ್ರಮುಖ ಸ್ತ್ರೀ ಪಾತ್ರಗಳ ನಿರ್ವಚನ

ತುಲಸೀ ರಾಮಾಯಣದಲ್ಲಿ ಸರಸ್ವತಿಯಾದ ಮಂಥರೆಯ ಬುದ್ಧಿ ಪಲ್ಲಟವಾಗಿ ಕೈಕೇಯಿಯ ಮನಸ್ಸನ್ನು ರಾಮನ ವಿರುದ್ಧವಾಗಿ ಪರಿವರ್ತಿಸುವಲ್ಲಿ ಸಫಲವಾಗುತ್ತಾಳೆ. ಮಂಥರೆಗೆ ರಾಮಪಟ್ಟಾಭಿಷೇಕದ ಸುದ್ದಿ ತಿಳಿದೊಡನೆಯೇ ಕೈಕೇಯಿಯ ಬಳಿಗೆ ಧಾವಿಸುತ್ತಾಳೆ. ಅವಳ ಸಪ್ಪೆ ಮೋರೆಯನ್ನು ಕೃತಕ ಕಂಬನಿಯನ್ನು ಕಂಡು ಕೈಕೇಯಿ ನಕ್ಕು ಅವಳನ್ನು ಕೇಳಿದಳು – 'ನಿನ್ನ ಬಾಯಿ ದೊಡ್ಡದು, ವಾಚಾಳಿ ಬೇರೆ. ಲಕ್ಷ್ಮಣನೇನಾದರೂ ನಿನ್ನನ್ನು ದಂಡಿಸಿದನೋ ಎನ್ನಿಸುತ್ತದೆ' ಎಂಬುದಾಗಿ.

ಒಕ್ಕಣ್ಣರು, ಕುಂಟರು, ಗೂನರು – ಕುಟಿಲರೂ, ಕುತಂತ್ರಿಗಳೂ ಆಗಿರುತ್ತಾರೆ. ಅದರಲ್ಲೂ ಹೆಣ್ಣು ಆಗಿದ್ದು, ದಾಸಿಯಾಗಿದ್ದರೆ ಕೇಳಬೇಕೆ? ಹೀಗೆ ಹೇಳಿ, ಭರತನ ತಾಯಿಯು ಮುಗುಳ್ನಗೆ ಬೀರಿದಳು.[೮]

ಅನಂತರ ಹೇಳಿದಳು – ಎಲೈ ಪ್ರಿಯಂವದ ಮಂಥರೇ ! ನಿನಗೆ ಬುದ್ಧಿವಾದ ಹೇಳಿದೆ ಅಷ್ಟೇ. ನಿನ್ನ ಮೇಲೆ ನನಗೆ ಕನಸು-ಮನಸ್ಸಿನಲ್ಲಿಯೂ ಸಿಟ್ಟು ಇಲ್ಲ. ನೀನು ಹೇಳಿದ ಮಾತು (ಶ್ರೀರಾಮನ ಪಟ್ಟಾಭಿಷೇಕದ ವಿಷಯ) ನಿಜವಾದ ದಿನವೇ ಶುಭದಿನವು. ಸೋದರರಲ್ಲಿ ಹಿರಿಯವನು ರಾಜ್ಯಕ್ಕೆ ಒಡೆಯನಾಗುವನು, ಕಿರಿಯವರು ಸೇವಕರಾಗುವುದು ಸೂರ್ಯವಂಶದ ಸುಂದರ ರೀತಿಯಾಗಿದೆ. ನಾಳೆಯೇ ನಿಜವಾಗಿ ರಾಮನ ಪಟ್ಟಾಭಿಷೇಕವಾದರೆ, ಸಖಿಯೇ! ನೀನು ಬೇಕಾದ್ದನ್ನು ಕೇಳು, ಅದನ್ನು ಕೊಟ್ಟುಬಿಡುತ್ತೇನೆ. ರಾಮನಿಗೆ ಸಹಜವಾಗಿಯೇ ಎಲ್ಲ ತಾಯಂದಿರೂ ಕೂಡ ಕೌಸಲ್ಯೆಯಂತೆಯೇ ಪ್ರಿಯರಾಗಿದ್ದಾರೆ.[೯] ನನ್ನನ್ನು ಕಂಡರಂತೂ ಅವನಿಗೆ ವಿಶೇಷ ಪ್ರೇಮಾದರಗಳು. ನಾನು ಅವನ ಪ್ರೀತಿಯನ್ನು ಪರೀಕ್ಷಿಸಿ ನೋಡುತ್ತೇನೆ. ವಿಧಿಯು ಏನಾದರೂ ಮತ್ತೆ ನನಗೆ ಜನ್ಮ ನೀಡಿದರೆ ರಾಮನಂತಹ ಮಗನಾಗಲೀ, ಸೀತೆಯಂತಹ ಸೊಸೆ ಬರಲಿ ಎಂದೇ ಆಶೀಸುತ್ತೇನೆ. ರಾಮನು ನನಗೆ ಪ್ರಾಣಕ್ಕಿಂತಲೂ ಪ್ರಿಯನು. ಅವನ ರಾಜ್ಯಾಭಿಷೇಕವು ನನಗೆ ಏಕೆ ಕ್ಷೋಭೆತಂದೀತು.

ಅಸ್ಥಿರಮತಿಯಾದ ಹೆಂಗಸು. ಅದರ ಮೇಲೆ ದೇವತೆಗಳ ಮಾಯೆ! ಆದ್ದರಿಂದ ಗೂಢವೂ ಕಪಟವೂ ಆದ ಪ್ರಿಯವಚನಗಳನ್ನು ಕೇಳಿ, ರಾಣಿ ಕೈಕೇಯಿಯು ತನ್ನ ಹಗೆಯಾದ ಮಂಥರೆಯನ್ನು ಹಿತಚಿಂತಕಳೆಂದು ಬಗೆಯತೊಡಗಿದಳು.[೧೦]

ಮಂಥರೆಯ ಕಟುವಾಣಿಯನ್ನು ಕೇಳಿ, ಕೈಕೇಯಿ ಹೆದರಿ ಹಿಂಜಿಹೋದಳು. ಅವಳ ಬಾಯಿಂದ ಮಾತೇ ಹೊರಡದು. ಶರೀರವು ಬೆವರಿನಿಂದ ಒದ್ದೆಯಾಯಿತು. ಗಾಳಿಗೆ ಸಿಲುಕಿದ ಬಾಳೆಗಿಡದಂತೆ ನಡುಗಿಹೋದಳು. ಕೈಕೇಯಿಯು ಇಂತೆಂದಳು[೧೧] – "ಮಂಥರೇ! ನಿನ್ನ ಮಾತು ನಿಜ. ನನ್ನ ಬಲಗಣ್ಣು ನಿತ್ಯವೂ ಅದುರುತ್ತಾ ಇದೆ. ನಾನು ಪ್ರತಿರಾತ್ರಿಯೂ ಕೆಟ್ಟ ಕನಸುಗಳನ್ನು ನೋಡುತ್ತಿದ್ದೇನೆ. ಆದರೆ ನನ್ನ

ತಿಳಿಗೇಡಿತನದಿಂದ ನಾನು ನಿನಗೆ ಹೇಳಲಿಲ್ಲ. ಸಖೀ! ನಾನೇನು ಮಾಡಲಿ! ನನ್ನ ಸ್ವಭಾವವೇ ನೇರವಾದುದು. ನನಗೆ ಎಡ–ಬಲ, ಮುಚ್ಚು–ಮರೆ ಒಂದೂ ತಿಳಿಯುತ್ತಿಲ್ಲ.[೧೨]

ನಾನು ಬೇಕಾದರೆ ತವರುಮನೆಗಾದರೂ ಹೋಗಿ ಇರಬಲ್ಲೆ; ಆದರೆ ಬದುಕಿರುವಾಗ ಸವತಿಯ ಸೇವೆ ಮಾತ್ರ ಮಾಡಲಾರೆನು. ವಿಧಿಯು ಶತ್ರುವಿನ ದಾಸಿಯಾಗಿಸುವವಳಿಗೆ ಬದುಕುವುದಕ್ಕಿಂತ ಸಾವೇ ಮೇಲು. ರಾಣಿಯು ಈ ವಿಧವಾಗಿ ಅನೇಕ ಮರುಕದ ಮಾತುಗಳನ್ನಾಡಿದಳು.[೧೩]

ಆಗ ಕೈಕೇಯಿಯು ಹೇಳಿದಳು – "ನೀನು ಹೇಳಿದರೆ ನಾನು ಬಾವಿಗೆ ಬೀಳಲೂ ಸಿದ್ಧಳಿದ್ದೇನೆ. ಅಗತ್ಯಬಿದ್ದರೆ ಪತಿಯನ್ನೂ ಪುತ್ರನನ್ನೂ ತೊರೆಯಬಲ್ಲೆ, ನೀನು ನನ್ನ ಒಳಿತಿಗಾಗಿ ಒಂದು ಮಾತು ಹೇಳಿದರೆ ನಾನೇಕೆ ಅದನ್ನು ಮಾಡದಿರಲಿ?[೧೪]

ರಾಜನ ಈ ಮಾತನ್ನು ಕೇಳಿ, ಮನದಲ್ಲೇ ರಾಮನ ಆಣೆಯನ್ನು ಕುರಿತು ವಿಚಾರ ಮಾಡಿ ಮಂದಬುದ್ಧಿಯಾದ ಕೈಕೇಯಿಯು ನಗುತ್ತಾ ಎದ್ದು ಕುಳಿತಳು. ಕಿರಾತ ಹೆಂಗಸು ಜಿಂಕೆಯನ್ನು ಕಂಡು ಬಲೆಯೊಡ್ಡಲು ಸಿದ್ಧಳಾಗುವಂತೆ ಕೈಕೇಯಿಯು ಒಡವೆಗಳನ್ನು ಧರಿಸತೊಡಗಿದಳು.[೧೫]

ಅವಳು ಹೇಳಿದಳು – "ಪ್ರಾಣನಾಥಾ! ಹಾಗಾದರೆ ಕೇಳಿ. ನನ್ನ ಮನ ಮೆಚ್ಚುವ ಮೊದಲನೇ ವರದಿಂದ ಭರತನಿಗೆ ರಾಜ್ಯಾಭಿಷೇಕವಾಗಬೇಕು. ಸ್ವಾಮಿ! ಇನ್ನೊಂದು ವರವನ್ನು ನಾನು ಕೈಜೋಡಿಸಿ ಬೇಡುತ್ತೇನೆ. ನನ್ನ ಮನೋರಥವನ್ನು ಈಡೇರಿಸಿರಿ. 'ವೈಭವವಿಲಾಸವನ್ನು ತೊರೆದು, ತಾಪಸವೇಷದಲ್ಲಿ, ಮುನಿಗಳಂತೆ ಶ್ರೀರಾಮನು ಹದಿನಾಲ್ಕು ವರ್ಷಗಳ ಕಾಲ ವನವಾಸ ಮಾಡಲಿ' ಇದೇ ನನ್ನ ಎರಡನೆಯ ವರವು. ದಯವಿಟ್ಟು ಈ ಎರಡು ವರಗಳನ್ನು ನನಗೆ ಕರುಣಿಸು.[೧೬]

ಈ ವಿಧವಾಗಿ ದಶರಥನು ಮನಸ್ಸಿನಲ್ಲೇ ಹಲುಬುತ್ತಿದ್ದ ಅವನ ದುಃಸ್ಥಿತಿಯನ್ನು ನೋಡಿ ಕುಮತಿಯಾದ ಕೈಕೇಯಿಗೆ ಬೆಟ್ಟದಂತಹ ಸಿಟ್ಟುಬಂತು. ಅವಳು ಹೇಳಿದಳು – ಭರತನು ನಿಮ್ಮ ಮಗನಲ್ಲವೇ? ನನ್ನನ್ನು ನೀವು ಮದುವೆಯಾಗದೆ ಕೊಂಡು ತಂದಿರುವಿರಾ? ನನ್ನ ಮಾತನ್ನು ಕೇಳಿದ ಕೂಡಲೇ ನಿಮಗೆ ಬಾಣ ನಾಟಿದಂತಾಯಿತಲ್ಲ? ನೀವೇಕೆ ಯೋಚನೆ ಮಾಡಿ ಮಾತನಾಡಬಾರದು? ಯಾವುದಕ್ಕೂ ಉತ್ತರಕೊಡಿ. ಹ್ಞೂ, ಎನ್ನಿ; ಇಲ್ಲವೇ ಇಲ್ಲವೆನ್ನಿ, ನೀವು ರಘುಕುಲದಲ್ಲಿ ಸತ್ಯಸಂಧರೆಂದು ಪ್ರಸಿದ್ಧರಲ್ಲವೇ? ನೀವೇ ವರಕೊಡುತ್ತೇನೆ ಎಂದು ಹೇಳಿದ್ದೀರಿ. ಈಗ ಕೊಡದೇ ಇದ್ದರೂ ಚಿಂತೆಯಿಲ್ಲ. ಸತ್ಯಕ್ಕೆ ತಿಲಾಂಜಲಿಯನ್ನಿತ್ತು ಅಪಕೀರ್ತಿಯನ್ನು ಗಳಿಸಿರಿ. ಸತ್ಯವನ್ನು ಕೊಂಡಾಡಿ ನೀವು ವರಕೊಡುತ್ತೇನೆ ಎಂದು ಹೇಳಿದ್ದೀರಿ. ಬಹುಶಃ ನಾನು ಹುರಿಗಾಳು ಕೇಳಬಹುದೆಂದು ಯೋಚಿಸಿದ್ದೀರೋ ಏನೋ! ಶಿಬಿ, ದಧೀಚಿ, ಬಲಿಚಕ್ರವರ್ತಿ ಮುಂತಾದ ಮಹಾಪುರುಷರು ತಮ್ಮ ಸಂಪತ್ತನ್ನೂ, ಪ್ರಾಣಗಳನ್ನೂ ಕೂಡ ಲೆಕ್ಕಿಸದೆ ತಮ್ಮ ಮಾತನ್ನು ಉಳಿಸಿಕೊಂಡಿರುವರು. ಕೈಕೇಯಿಯು ಗಾಯದ ಮೇಲೆ ಖಾರದ ಪುಡಿ ಚೆಲ್ಲಿದಂತೆ ಕಟುವಚನಗಳನ್ನಾಡಿದಳು.[೧೭]

ರಾಜನ ಹಿತವಚನಗಳನ್ನು ಕೇಳಿ ದುರ್ಬುದ್ಧಿಯ ಕೈಕೇಯಿಯು ಬೆಂಕಿಗೆ ತುಪ್ಪ ಸುರಿದಂತೆ ಕ್ರೋಧಾಗ್ನಿಯಿಂದ ಉರಿದುಬಿದ್ದಳು. ಆಕೆಯು ಹೇಳಿದಳು – 'ನೀವು ಕೋಟಿ ಉಪಾಯಮಾಡಿದರೂ ನಿಮ್ಮ ಆಟ ನನ್ನೆದುರಿಗೆ ನಡೆಯದು. ಒಂದೋ ನಾನು ಕೇಳಿದ ವರವನ್ನು ಕೊಡಿ, ಇಲ್ಲವೇ ಕೊಡಲಾರೆ' ಎಂದು ಹೇಳಿ ಅಪಕೀರ್ತಿಯನ್ನು ಕಟ್ಟಿಕೊಳ್ಳಿರಿ. ನನಗೆ ಈ ಬಣ್ಣದ ಮಾತು ಬೇಡ. ರಾಮನು ಸಾಧುವು, ನೀವು ಪರಮಸಾಧುಗಳು, ರಾಮನ ತಾಯಿಯು ಕಡಿಮೆ ಸಾಧು ಅಲ್ಲ. ನಾನು ಎಲ್ಲರ ಬಣ್ಣವನ್ನೂ ನೋಡಿರುವೆ. ಕೌಸಲ್ಯೆಯು ನನಗೆ ಮಾಡಿದ ಒಳಿತಿನ ಫಲವಷ್ಟೇ ಪ್ರತಿಫಲವನ್ನು ಅವಳಿಗೆ ಸದಾಕಾಲ ನೆನಪಿನಲ್ಲಿ ಉಳಿಯುವಂತೆ ಕೊಡುತ್ತೇನೆ.[೧೮]

ನಾಳೆ ಬೆಳಕು ಹರಿಯುತ್ತಲೇ ರಾಮನು ಮುನಿವೇಷವನ್ನು ತೊಟ್ಟು ಕಾಡಿಗೆ ಹೋಗದಿದ್ದರೆ, ಮಹಾರಾಜರೆ! ನಾನು ಪ್ರಾಣತ್ಯಾಗ ಮಾಡುತ್ತೇನೆ. ಇದು ನಿಶ್ಚಿತ. ಅದರಿಂದ ನೀವು ಅಪಕೀರ್ತಿ ಪಡೆಯುವುದೆಂದು ತಿಳಿಯಿರಿ.[೧೯]

ತಾಯಿ ಕೈಕೇಯಿಯನ್ನು ರಾಮ ಕೇಳಿದನು – "ಅಮ್ಮಾ! ತಂದೆಯವರ ದುಃಖದ ಕಾರಣವನ್ನಾದರೂ ನನಗೆ ತಿಳಿಸಿರಿ. ತಿಳಿದರೆ ಅದರ ನಿವಾರಣೆಗಾಗಿ ಪ್ರಯತ್ನಿಸಬಹುದು." ಆಗ ಕೈಕೇಯಿಯು ಹೇಳಿದಳು – "ರಾಮಾ! ಮಹಾರಾಜರ ದುಃಖಕ್ಕೆ ಕಾರಣ ನಿನ್ನ ಮೇಲೆ ಇರುವ ಸ್ನೇಹವೇ ಆಗಿದೆ. ಇವರು ನನಗೆ ಎರಡು ವರಗಳನ್ನು ಕೊಡಲು ವಾಗ್ದಾನ ಮಾಡಿದ್ದರು. ನನಗೆ ಇಷ್ಟವಾದುದನ್ನು ನಾನು ಕೇಳಿಕೊಂಡೆ. ಅದನ್ನು ಕೇಳಿ ರಾಜರ ಹೃದಯವು ದುಃಖಪೂರಿತವಾಯಿತು. ಏಕೆಂದರೆ, ಅವರು ನಿನ್ನ ಮೇಲಿರುವ ಮಮಕಾರವನ್ನು ಬಿಡಲೊಲ್ಲರು.[೨೦]

ಒಂದೆಡೆ ಪುತ್ರಸ್ನೇಹ, ಇನ್ನೊಂದೆಡೆ ಪ್ರತಿಜ್ಞಾಪಾಲನೆ, ಇವೆರಡರ ನಡುವೆ ನಿರ್ಣಯಿಸಲಾರದೆ. ಮಹಾರಾಜರು ಧರ್ಮಸಂಕಟದಲ್ಲಿ ಬಿದ್ದಿರುವರು. ಸಾಧ್ಯವಾದರೆ ರಾಜಾಜ್ಞೆಯನ್ನು ಶಿರಸಾವಹಿಸು. ಅವರ ದುರ್ಭರವಾದ ದುಃಖವನ್ನು ಇಲ್ಲವಾಗಿಸು.[೨೧]

ಶ್ರೀರಾಮನ ಸ್ವೀಕೃತಿಯ ಅಭಾಸದಿಂದ ಕೈಕೇಯಿಯು ಹರ್ಷಿತಳಾದಳು. ಕಪಟ ಪ್ರೇಮವನ್ನು ನಟಿಸುತ್ತಾ– 'ನಿನ್ನ ಮೇಲೆ ಹಾಗೂ ಭರತನ ಮೇಲೆ ಆಣೆಯಿಟ್ಟು ಹೇಳುತ್ತೇನೆ– ಮಹಾರಾಜರ ದುಃಖಕ್ಕೆ ಬೇರಾವ ಕಾರಣವೂ ನನಗೆ ಕಾಣುತ್ತಿಲ್ಲ'. "ಮಗು! ನಿನ್ನಿಂದ ತಾಯಿ–ತಂದೆಯವರ ಕುರಿತು ಅಪರಾಧ ನಡೆಯುವುದು ಅಸಂಭವವು. ನೀನು ತಂದೆ–ತಾಯಿಂದಿರಿಗೆ, ಸೋದರರಿಗೆ ಸುಖವನ್ನು ಕೊಡುವವನು. ನೀನು ಹೇಳುವುದೆಲ್ಲವೂ ಸತ್ಯವು. ನೀನು ತಾಯಿತಂದೆಗಳ ವಚನ ಪಾಲನೆಯಲ್ಲಿ ತತ್ಪರನಾಗಿದ್ದೀಯೆ. ರಾಮಾ! ಪ್ರೇಮದಿಂದ ಹೇಳುತ್ತಿರುವೆನು, ನೀನು ತಂದೆಯವರಿಗೆ ಹೇಳಿ, ಅವರಿಗೆ ಈ ವಯಸ್ಸಿನಲ್ಲಿ ಕೆಟ್ಟ ಹೆಸರು ಬರದಂತೆ ನೋಡಿಕೋ. ಯಾವುದೋ ಪುಣ್ಯಫಲದಿಂದಲೇ ನಿನ್ನಂತಹ ಪುತ್ರನನ್ನು ಪಡೆದಿರುವನು.

ಅದನ್ನು ಅನಾದರಿಸುವುದು ಒಳ್ಳೆಯದಲ್ಲ" ಕೈಕೇಯಿಯ ಕೆಟ್ಟಬಾಯಲ್ಲಿ ಈ ಶುಭವಚನಗಳು ಮಗಧದೇಶದಲ್ಲಿ ಗಯೆಯಂತೆ ಶೋಭಿಸಿತು.[೨೨]

ಈ ಪ್ರಕಾರ ಆಕೆಯ ಸಖಿಯರು ಕೇಳಲು ಮಧುರವೂ, ಪರಿಣಾಮದಲ್ಲಿ ಹಿತಕರವೂ ಆದ ಬುದ್ಧಿವಾದವನ್ನು ಹೇಳಿದರು. ಆದರೆ ಕುಟಿಲ ಕುಬ್ಜ, ಮಂಥರೆಯ ಬುದ್ಧಿವಾದದ ಮುಂದೆ ಕೈಕೇಯಿಯು ಇದಾವುದರ ಕಡೆಗೂ ಕಿವಿಯೇ ಕೊಡಲಿಲ್ಲ.[೨೩]

ದುಸ್ಸಹವಾದ ಕೋಪದಿಂದ ಕ್ರೌರ್ಯವನ್ನು ತಾಳಿದ ಕೈಕೇಯಿಯ ಕಣ್ಣುಗಳು ಕೆಂಪಾದವು. ಅವಳು ಅವರಲ್ಲಿ ಏನನ್ನೂ ಮಾತಾಡದೆ, ಹಸಿದ ಹೆಣ್ಣುಹುಲಿಯು ಹುಲ್ಲೆಯನ್ನು ನೋಡುವಂತೆ, ದಿಟ್ಟಿಸಿ ನೋಡುತ್ತಿದ್ದಳು. ಎಲ್ಲ ಸಖಿಯರೂ ಇದು ಮದ್ದಿಲ್ಲದ ರೋಗವೆಂದು ತಿಳಿದು, ಅವಳನ್ನು ತೊರೆದು ಸದ್ದಿಲ್ಲದೆ ಹೊರಟರು. ಇವಳು ಮಂದಮತಿ, ಅಭಾಗಿನಿ ಎಂದು ನಿಂದಿಸುತ್ತಾ ಅವರೆಲ್ಲರೂ ಹೊರಟುಹೋದರು.[೨೦]

"ಕೈಕೇಯಿಗೆ ರಾಜ್ಯವೈಭವಗಳೆಲ್ಲವೂ ಇದ್ದರೂ ವಿಧಿಯು ಅದನ್ನು ದೂರಮಾಡಿತು. ಇವಳು ಮಾಡಿದಂತಹ ದೃಷ್ಕೃತ್ಯವನ್ನು ಇತರರು ಊಹಿಸಲೂ ಕೂಡ ಸಾಹಸಪಡರು". ಈ ವಿಧವಾಗಿ ನಗರದ ಸ್ತ್ರೀ–ಪುರುಷರೆಲ್ಲರೂ ಪರಿತಪಿಸುತ್ತಿದ್ದರು. ಕುತಂತ್ರಿಯಾದ ಕೈಕೇಯಿಯನ್ನು ಹಲವು ರೀತಿಯಿಂದ ಬೈಯ್ಯುತ್ತಿದ್ದರು. ಅಯೋಧ್ಯಾವಾಸಿಗಳು ವಿಷಮಜ್ವರದಲ್ಲಿ ಬೇಯುತ್ತಿದ್ದರು. ನಿಟ್ಟುಸಿರು ಬಿಡುತ್ತಾ – ಶ್ರೀರಾಮನಿಲ್ಲದೆ ಇಲ್ಲಿ ಬದುಕುವ ಆಶೆ ಯಾರಿಗಿದೆ? ಎಂದು ಅಂದುಕೊಳ್ಳುತ್ತಿದ್ದರು. ಉರಿಬಿಸಿಲಿಗೆ ನೀರು ಇಂಗಿಹೋದಾಗ ಅದರಲ್ಲಿದ್ದ ಜಲಚರಗಳು ಒದ್ದಾಡುವಂತೆ, ರಾಮವಿಯೋಗದ ಅಶಂಕೆಯಿಂದ ಪ್ರಜೆಗಳೆಲ್ಲರೂ ವ್ಯಾಕುಲರಾದರು. ಎಲ್ಲ ಸ್ತ್ರೀಪುರಷರು ವಿಷಾದ ವಿಹ್ವಲರಾಗಿದ್ದರು. ಅಷ್ಟರಲ್ಲಿ ಶ್ರೀರಾಮಚಂದ್ರನು ತಾಯಿ ಕೌಸಲ್ಯೆಯ ಬಳಿಗೆ ಹೋದನು. ಅವನ ವದನ ಪ್ರಸನ್ನವಾಗಿತ್ತು. ಮನಸ್ಸಿನಲ್ಲಿ ಅಮಿತ ಉತ್ಸಾಹ ತುಂಬಿತ್ತು. ಮಹಾರಾಜರು ಎಲ್ಲಾದರೂ ಉಳಿಸಿಕೊಂಡಾರು ಎಂಬ ಚಿಂತೆಯು ಹರಿಯಿತು. ರಾಜ್ಯಾಭಿಷೇಕದ ವಾರ್ತೆಯನ್ನು ಕೇಳಿದಾಗ, ಸೋದರರನ್ನು ಬಿಟ್ಟು ಹಿರಿಯವನಾದ ನನಗೆ ಪಟ್ಟಾಭಿಷೇಕ ಏಕೆ ಮಾಡುವರು ಎಂಬ ವಿಷಾದ ಶ್ರೀರಾಮನಿಗಿತ್ತು. ಈಗ ಮಾತೆ ಕೈಕೇಯಮ್ಮನವರ ಆಜ್ಞೆ, ತಂದೆಯವರ ಮೌನಸಮ್ಮತಿ ಪಡೆದು ಆ ವಿಷಾದ ಹೊರಟುಹೋಯಿತು.

ಸೀತಾಸಮೇತ ರಾಮಲಕ್ಷ್ಮಣರ ಸರಳ ಸ್ವಭಾವವನ್ನು ಕಂಡು, ಕುಟಿಲ ಸ್ವಭಾವದ ರಾಣಿ ಕೈಕೇಯಿಯು ತುಂಬಾ ಪಶ್ಚಾತ್ತಾಪಪಟ್ಟಳು. "ಈ ಭೂದೇವಿಯು ನನ್ನನ್ನು ಏಕೆ ನುಂಗುವುದಿಲ್ಲ? ವಿಧಾತನು ನನಗೆ ಏಕೆ ಸಾವನ್ನು ಕರುಣಿಸುವುದಿಲ್ಲ?" ಎಂದು ಅವಳು ಭೂದೇವಿಯನ್ನು, ಯಮನನ್ನು ಪ್ರಾರ್ಥಿಸುತ್ತಿದ್ದಳು.

## ೫.೩ ಸಾಕೇತದ ಪ್ರಮುಖ ಸ್ತ್ರೀ ಪಾತ್ರಗಳ ನಿರ್ವಚನ

ಸಾಕೇತದಲ್ಲಿ ಮಂಥರೆ ಮತ್ತು ಕೈಕೇಯಿಯರು ರಾಮನನ್ನು ವನವಾಸಕ್ಕೆ ಕಳುಹಿಸಿದ ಸಂದರ್ಭವನ್ನು ಊರ್ಮಿಳೆಯು ನೆನಪಿಸಿಕೊಳ್ಳುತ್ತಾಳೆ.

ಆದರೆ ಈ ಅಮ್ರವನವು ಫಲ ಬಿಡುವಂತಾಗಲಿಲ್ಲ ಮಂಥರೆಯ ನೇತ್ರಗಳು ಕೀಟರೂಪವನ್ನು ಪಡೆದವು. ಮಂಥರೆಯ ಈ ಸ್ಥಿತಿಯನ್ನು ಕಂಡು ಕೈಕೇಯಿಯೇ ಕೇಳಿದಳು– "ಏನೇ? ನೀನೇಕೆ ಉತ್ಸಾಹ ಹೀನಳಾಗಿದ್ದೀಯೇ? ನಾಳೆ ವತ್ಸರಾಮನು ಯುವರಾಜನಾಗುವವನಲ್ಲವೇ? – ಮಂಥರೆ ನಿಸ್ಸಂಕೋಚವಾಗಿ ಹೇಳಿದಳು. "ಈ ವಿಷಯದಲ್ಲಿ ನಿಮಗೆ ಏನಾದರೂ ಚಿಂತೆ ಇದೆಯೇನು?" ಈ ಮಾತನ್ನು ಕೇಳಿ ಕೈಕೇಯಿ ನಕ್ಕಳು. ಆನಂದ ಪ್ರಭಾಯುಕ್ತಳಾಗಿ ಹೇಳಿದಳು – "ನಿಸ್ಸಂದೇಹವಾಗಿ ಒಂದು ಚಿಂತೆ ಇದೆ. ಭರತ ಇಲ್ಲಿ ಇಲ್ಲ. ಮಾವನ ಮನೆಯಲ್ಲಿ ಇದ್ದಾನೆ. ಸುಖಸೃಷ್ಟಿಯ ಈ ಆನಂದವನ್ನು ಕಂಡು ಅವನು ತನ್ನ ಕಣ್ಣುಗಳನ್ನು ಸಫಲಗೊಳಿಸಿಕೊಳ್ಳಲಾರ". ತನ್ನ ಕಠೋರ ಹಣೆಯನ್ನು ಬಡಿದು ಕೊಳ್ಳುತ್ತಾ, ತಮ್ಮ ಭಾಗ್ಯವೆಲ್ಲವೂ ಕೊಚ್ಚಿ ಹೋಯಿತೋ ಎನ್ನುವಂತೆ ಭಾವವನ್ನು ವ್ಯಕ್ತಗೊಳಿಸುತ್ತಾ, ದಾಸಿಯಾದ ಮಂಥರೆ ಹೇಳಿದಳು – "ನಿನ್ನ ಭೋಳೀತನದ ಅಂತ್ಯವಾಯಿತಲ್ಲಾ?" ದಾಸಿಯ ಈ ಮಾತನ್ನು ಕೇಳಿ ಕೈಕೇಯಿಗೆ ಅರ್ಥವಾಗಲಿಲ್ಲ. ಆಗ ಹೇಳಿದಳು – "ಇದೇನು ನಿನ್ನ ವಿಪರೀತ? ಈ ಅಮಂಗಳ ಮಾತುಗಳನ್ನೇಕೆ ಆಡುತ್ತಿದ್ದೀಯೇ? ರಾಮ, ನನಗೂ ಮಗನಲ್ಲವೇ"? "(ರಾಮನು ನಿನ್ನ ಮಗನಾದ ಮೇಲೆ) ನಿನ್ನ ಮಗನೇ ಆದ (ಔರಸ) ಭರತನಿಗೆ ಸ್ಥಾನವೆಲ್ಲಿದೆ?"[೨೫] – ದುಷ್ಟ ದಾಸಿಯು, ಕೈ ಬಡಿದು ಹೇಳಿದಳು.

ಉಕ್ಕಿ ಬಂದ ಕೋಪವನ್ನು ತಡೆಯುತ್ತಾ ಕೈಕೇಯಿಯು ಹೇಳಿದಳು "ಯಾರ ಮೇಲೆ ಈ ದೋಷಾರೋಪಣೆ ಮಾಡುತ್ತಿದ್ದಿಯೇ? ಈ ಸಮಸ್ತ ಸಮಾಜವೂ (ಪ್ರಜೆಗಳು) ಇಂದೆ ಆಗಲೀ ನಾಳೆಯೂ ಆಗಲಿ ನನ್ನನ್ನು ರಾಜಮಾತೆ ಎಂದು ಕರೆಯುವುದಿಲ್ಲವೆ? (ಕರದೇ ಕರೆಯುತ್ತದೆ – ಎಂದು ಭಾವ)".[೨೬]

"ಕೈಕೇಯಿಯು ಕುಪಿತಳಾಗಿ ನುಡಿದಳು– "ದೂರ ಸರಿ... ಈಗಲೇ ದೂರ ಹೊರಟು ಹೋಗು! ಮಾತನಾಡಬೇಡ! ಸರ್ಪಿಣೀ, ರಸದಲ್ಲಿ ವಿಷವನ್ನು ಬೆರೆಸಬೇಡ. ಈ ಮನೆಯಲ್ಲಿ (ದ್ವೇಷದ) ಕೆಸರನ್ನು ಎರಚುತ್ತಿದ್ದೀಯೇ. ನೀಚರು ಎಂತಿದ್ದರೂ ನೀಚರೆ.[೨೭]

ದಾಸಿಯೇನೋ ಹೋದಳು. ಆದರೆ ಅವಳ ಮಾತು (ಕೈಕೇಯಿಗೆ) ಆಘಾತವನ್ನುಂಟು ಮಾಡಿತೋ ಎನ್ನುವಂತೆ ಆಯಿತು. "ಭರತನಂತಹ ಮಗನ ಮೇಲೂ ಸಂದೇಹ. ಅವನನ್ನು ಮನೆಗೆ ಕರೆಯಿಸಿಕೊಂಡೂ ಇಲ್ಲ". ರಾಣಿಯ ಕಿವಿಯಲ್ಲಿ ಇದು ಪ್ರತಿಧ್ವನಿತವಾಗುತ್ತಿತ್ತು. ಬಾಣದಂತೆ ಇದು (ಅವಳನ್ನು) ಚುಚ್ಚುತ್ತಿತ್ತು'.

ಭರತನ ತಾಯಿಯು ಧೃತಿ ಹೀನಳಾದಳು. ಕೋಪದಿಂದ ಅವಳ ಶರೀರವೆಲ್ಲವೂ ಉರಿಯಲಾರಂಭಿಸಿತು. ಸವತಿ–ಮತ್ಸರದ ದಾಹವು ಅವಳನ್ನು ಆವರಿಸಿತು. ಅದು ವಿಷಪ್ರವಾಹವನ್ನೇ ಹರಿಯಿಸಿತು. (ದೂರಾಲೋಚನೆಗಳನ್ನೇ ಮಾಡುವಂತೆ ಪ್ರೇರೇಪಿಸಿತು) ಕೋಪವು ಹೆಚ್ಚಾದದ್ದರಿಂದ ಅವಳ

ವಿವೇಕವು ಶೂನ್ಯವಾಯಿತು. ಇನ್ನು ಅವಳಿಗೆ ಶಾಂತಿಯಿಂದ ಇರಲಾಗಲಿಲ್ಲ. ಭ್ರಾಂತಳಾಗಿ ಬಿರುಗಾಳಿಯಂತೆ ಮೇಲೆದ್ದಳು.

ತಲೆಗೂದಲು ಕೆದರಿ ಹಿಮ್ಮಡಿಯವರೆಗೂ ಇಳಿಬಿದ್ದುವು. ದೇವಿಯಂತಿದ್ದ ಕೈಕೇಯಿಯಲ್ಲಿ ಈಗ ದುರ್ಗಿಯ ಆವೇಶವಾದಂತಾಯಿತು. ಕೈಗೆ ಸಿಕ್ಕಿದ ವಸ್ತುಗಳನ್ನೆಲ್ಲಾ ಚಿಲ್ಲಾಪಿಲ್ಲಿಗೊಳಿಸಿದಳು. ತನ್ನ ಶರೀರದ ಮೇಲಿದ್ದ ಆಭರಣಾದಿ ಅಲಂಕಾರಗಳನ್ನೆಲ್ಲಾ ಕಿತ್ತು ಎಸೆದಳು. ಅಶ್ರುಬಿಂದುಗಳು ಎಲ್ಲೆಡೆಯಲ್ಲಿಯೂ ಬಿದ್ದಿವೆಯೋ ಎನ್ನುವಂತೆ ಹಾರದ ಮುತ್ತುಗಳು ಚೆಲ್ಲಾಪಿಲ್ಲಿಯಾಗಿ ಹರಡಿ ಬಿದ್ದುವು. ಮದಿಸಿದ ಹೆಣ್ಣಾನೆಯಂತೆ (ತಾನು ಮುಡಿದಿದ್ದ) ಹೂವನ್ನೆಲ್ಲಾ ಹಿಸುಕಿ ಎಸೆದಳು. ತನ್ನನ್ನು ತಾನೇ ಮರೆತು ಸುತ್ತಾಡಲಾರಂಭಿಸಿದಳು. ಸುಂದರ ಚಿತ್ರಗಳನ್ನೆಲ್ಲಾ ಹರಿದು ಎಸೆದಳು. (ಈವರೆಗೆ ಪ್ರಿಯವಾಗಿದ್ದ) ಆ ಚಿತ್ರಗಳು ಈಗ ಅಪ್ರಿಯವಾದವು. ಹೃದಯದಲ್ಲಡಗಿರುವ ಈರ್ಷ್ಯಾಗ್ನಿಯ ವಿಕಾಸವನ್ನು, ಅವಳ ಶ್ವಾಸವು ತೋರಿಸುತ್ತಿತ್ತು. ಅವಳ ಪ್ರಹಾರದಿಂದ ಚೂರು ಚೂರಾಗುತ್ತಿದ್ದ ವಸ್ತುಗಳೆಲ್ಲವೂ ಹಾಹಾಕಾರ ಮಾಡುತ್ತಾ ಹೀಗೆ ಹೇಳುತ್ತಿವೆಯೋ ಎನ್ನುವಂತೆ ಕಾಣುತ್ತಿತ್ತು – "ದೋಷಿಗಳು ಯಾರೋ? ನಿನ್ನ ರೋಷವು ಯಾರ ಮೇಲೋ! ಇಷ್ಟಾದ ಮೇಲಾದರೂ ನಿನಗೆ ಶಾಂತಿಯುಂಟಾದೀತೇ?" (ಯಾರೋ ತಪ್ಪುಮಾಡಿ, ಇನ್ನಾರ ಮೇಲೆಯೋ ನಿನ್ನ ರೋಷವನ್ನು ತೋರಿಸುತ್ತಿದ್ದೀಯೆ.[೨೮] ಇಷ್ಟರಿಂದ ನಿನ್ನ ಕ್ರೋಧ ಶಾಂತವಾಗದು!)

ಈ ಮಾತು ಕೈಕೇಯಿಗೆ ಪ್ರಿಯವೆನಿಸಿದವು. ಕೈಕೇಯಿಗೆ ಈಗ ಅವು ನೆನಪಾದವು. ಅವಳು ಕಣ್ಣು ಮುಚ್ಚಿಕೊಂಡೇ ತನ್ನ ಮಾತಿನ ಕೋಲಿನೇಟನ್ನು ಕೊಡಲಾರಂಭಿಸಿದಳು – "ನಿಲ್ಲಿಸಿ! ನಿಮ್ಮ ಕೃತ್ರಿಮ (ಸುಳ್ಳಾದ) ಪ್ರೀತಿಯನ್ನು ನಿಲ್ಲಿಸಿ. ರಾಜರ ಈ ಕೃತಕ ರೀತಿಯನ್ನು ಚೆನ್ನಾಗಿ ಬಲ್ಲೆ. ನೀವು ನನಗೆ ಯಾವ ಗೌರವವನ್ನು ಕೊಟ್ಟಿದ್ದೀರಿ? ಕೇವಲ ವಚನಮಯವಾದ ಆ ಎರಡು ವರಗಳನ್ನೇ ಅಲ್ಲವೇ? (ಆ ಎರಡು ವರಗಳೂ ಈಡೇರಿಲ್ಲ ಎನ್ನುವ ಭಾವವಿದೆ).[೨೯]

"ಸ್ವಾಮಿ ಎರಡು ವರಗಳನ್ನು ಕೊಡಿ. ಒಂದು ಭರತನಿಗೆ ರಾಜ್ಯಾಭಿಷೇಕವಾಯಿತು. ಎರಡನೆಯದನ್ನು ಕೇಳು– ಬೇಸರಿಸಬೇಡ. ರಾಮನಿಗೆ ಹದಿನಾಲ್ಕು ವರ್ಷಗಳ ವನವಾಸ.[೩೦]

"ಅಮ್ಮಾ–ಪೂಜ್ಯ ತಂದೆಯವರು (ಮಾವನಾದ ದಶರಥ) ಎಲ್ಲಿ ಹೋದರು?" ಎಂದು ಕೂಗಿಕೊಳ್ಳುತ್ತಾ ಶೋಕತಪ್ತಳಾದ ಊರ್ಮಿಳೆಯು ವಿಕಲಳಾಗಿ ಕೈಕೇಯಿಯ ಮುಂದೆ ಹೋಗಿ ಬಿದ್ದಳು. ಕೈಕೇಯಿಯೂ ಮುಖದೆದುರು ಮಾತನಾಡಲೇ ಇಲ್ಲ. ಪಾಷಾಣ ಹೃದಯಿಯಾದ ಅವಳು ಸ್ವಲ್ಪವೂ ಚಂಚಲಿತಳಾಗಲಿಲ್ಲ. ನಿಜವಾದ ಕಣ್ಣುಗಳು ಹೊಡದು ಹೋಗಿದ್ದು, ಹೊಸ ಕೃತ್ರಿಮ ನೇತ್ರಗಳನ್ನು ಅಲ್ಲಿಗೆ ಜೋಡಿಸಿದ್ದಾರೋ ಎನ್ನುವಂತಿತ್ತು. ಅವಳು ಅಳಲೂ ಇಲ್ಲ, ಅಳುವುದು ಅವಳಿಗೆ ನಾಚಿಕೆಯೆನಿಸಿತು. ಆ ವೈಧವ್ಯವು ತನಗೆ ತಾನೇ ತಂದುಕೊಂಡ ದುರದುಷ್ಟವಾಗಿತ್ತು. ತನ್ನ ಈ ಕಾರ್ಯಕ್ಕಾಗಿ ಒಳಗೇ ಹೆದರಿದಳು. ಯಾವ ಕೆಟ್ಟಸಮಯದಲ್ಲಿ ಮಂಥರೆಯು ಬಂದು ತನ್ನ ಬುದ್ಧಿಯನ್ನು ಹಾಳುಮಾಡಿದಳೋ

ಎಂದುಕೊಂಡಳು. 'ಭೂಪತಿ' ಪದವು ಬೇರೆಯಾಯಿತು.[೩೧] ('ಭೂ' ಇಲ್ಲಿಯೇ ಉಳಿದಿದೆ–ಪತಿ–ಮಾತ್ರ ಬೇರೆಯಾಯಿತು).

ಕೇಳು, ಈ ಪರಣಾಮವೇಕೆ ಆಯಿತು ಎಂಬುದನ್ನು ಪ್ರಭು ದಶರಥನು ಮರಣ ಹೊಂದುವುದಕ್ಕೂ, ರಾಮನು ಕಾಡಿಗೆ ಹೋಗುವುದಕ್ಕೂ, ಕುಲಪುತ್ರನೇ, ನಾನು ನಿನಗಾಗಿ ರಾಜ ಸಿಂಹಾಸನವನ್ನು ಕೇಳುದುದೇ ಕಾರಣವಾಯಿತು.

ಆಗ ಇಬ್ಬರ ಸ್ಥಿತಿಯನ್ನು ನೋಡಿ, ಕೈಕೇಯಿಯು ಹುಚ್ಚಿಯಂತೆ ಕಿರುಚಿದಳು – "ಎಲ್ಲರೂ ನನ್ನ ಮೇಲೆ ಅಪವಾದವನ್ನು ಹೊರಿಸಲಿ. ಆದರೆ ಭರತಾ, ನನ್ನ ಪ್ರೀತಿಯು ನಿನ್ನ ಪ್ರೀತಿಯನ್ನು ಬಯಸುತ್ತಿದೆ. ವತ್ಸಾ, ಏಳು ನನ್ನ ಮಗೂ, ರಾಜ್ಯವಾಳು. ಚಿರಕಾಲ ನಾನು ನರಕದಲ್ಲಿರಲೂ ಸಿದ್ಧಳಿದ್ದೇನೆ. ಒಂದು ವೇಳೆ ನಾನು ಪಾಪ ಮಾಡಿದ್ದರೆ, ನನ್ನನ್ನು ಶಿಕ್ಷಿಸು. ನಾನು ರಾಜನ ಸ್ಥಾನದಲ್ಲಿ ನಿಂತು ನಿನಗೆ ರಾಜ್ಯಾಧಿಕಾರದ ಶಕ್ತಿಯನ್ನು ಕೊಡುತ್ತಿದ್ದೇನೆ.[೩೨]

ಮಂಜು ಮುಸುಕಿದ ಚಂದ್ರಬಿಂಬದಂತೆ ವೈಧವ್ಯದಿಂದ ಕಲಾಹೀನಳಾದ ಕೈಕೇಯಿಯು ಅಂತರಂಗದಲ್ಲಿ ಅಸಂಖ್ಯ ಭಾವತರಂಗಗಳಿದ್ದರೂ, ಅಚಲ ಚಿತ್ತಳಾಗಿ ಕುಳಿತಿದ್ದಳು. ಸಿಂಹಿಣಿಯಂತಿದ್ದ ಅವಳು ಈಗ, ಗೋಮುಖಿಗಂಗೆಯಂತೆ ಶಾಂತಳೂ ಗಂಭೀರಳೂ ಆಗಿದ್ದಳು. "ಹೌದು, ಜನ್ಮವಿತ್ತರೂ ಅವನ ಭಾವನೆಯನ್ನು ತಿಳಿಯದಾದೆ. ಎಲ್ಲರೂ ಕೇಳಿರಿ. ನೀನೇ ಈ ಮಾತನ್ನು ಒಪ್ಪಿರುವಿಯಲ್ಲವೇ? ಇದು ನಿಜವಾದಲ್ಲಿ ಮನೆಗೆ ಹಿಂತಿರುಗು. ಈ ನಿನ್ನ ತಾಯಿಯಾದ ನಾನು ಅಪರಾಧಿನಿ. ಆಜ್ಞೆ ಮಾಡುವುದು ದುರ್ಬಲತೆಯ ಚಿಹ್ನೆಯಾದರೂ ಅಬಲೆಯರಿಗೆ ಇದು ಬಿಟ್ಟರೇ ಬೇರೆ ಮಾರ್ಗ ತಾನೇ ಯಾವುದಿದೆ?[೩೩]

ಪರ್ವತದಷ್ಟು ಪಾಪವನ್ನು ಮಾಡಿದ ನಾನು ಸುಮ್ಮನಿರಲು ಸಾಧ್ಯವೇ! ಸಾಸುವೆಯಷ್ಟಾದರೂ ನಾನು ಪಶ್ಚಾತ್ತಾಪ ಪಡಬಾರದೇ?

ಪುತ್ರಮೋಹವೆಂಬ ನದಿಯಲ್ಲಿ ಬಿದ್ದು (ಈಜಲು ಬಾರದಿರುವುದರಿಂದ) ಕಾಲು ಬಡಿಯುತ್ತಲಿದ್ದೇನೆ. ಮದದಿಂದ ಕೂಡಿದ ಮತ್ತು ಸ್ವಲ್ಪದಲ್ಲಿರುವ ಮನುಷ್ಯನು ಏನನ್ನು ತಾನೇ ಮಾಡಲಾರ? ಅಯ್ಯೋ ಯಾವ ಶಿಕ್ಷೆಯೇ ಆಗಲಿ ನಾನು ಹೆದರುವೆನೇ? ನನ್ನ ವಿಚಾರಗಳು ಆಗಲಾದರೂ ದಯೆಯಿಂದ ಕೂಡಿರುತ್ತವೆಯೋ ಏನೋ ಅಯ್ಯೋ! ದಯೇ! ಘೃಣಾ! ಕರುಣೆ! ಗಂಗೆ ಯಮುನೆಯಂತೆ ಪವಿತ್ರ ಈ ಭಾವನೆಗಳು ಈಗ ವೈತರಣೀ ನದಿಯಂತೆ ನರಕಯಾತನೆಯನ್ನು ನೀಡುತ್ತಿವೆ. ಸುವಿಚಾರಿಗಳಾದ ಜನರೇ ಕೇಳಿರಿ–ಚಿರಕಾಲ ನರಕವನ್ನು ಬೇಕಾದರೂ ಸಹಿಸುತ್ತೇನೆ. ಆದರೆ ಸ್ವರ್ಗ ಸುಖವು ನನಗೆ ಉಗ್ರ ಶಿಕ್ಷೆಯಾಗುತ್ತಿದೆ. ವಜ್ರಾಯುಧದಂತೆ ಕಠಿಣವಾದ ಹೃಯದದಿಂದ ನಾನು ಇವನಿಗಾಗಿ ನಿನ್ನನ್ನು ಕಾಡಿಗೆ ಕಳುಸಿದೆನು.[೩೪]

ಮಗೂ ನಿನಗಾಗಿ ಈ ನನ್ನ ಒಂದೇ ಒಂದು ನೊಂದ ಹೃದಯವಿದೆ ಈ ದಿನ ಅದರಿಂದಲೇ ನಿನ್ನನ್ನು ಆಲಿಂಗಿಸಿಕೊಳ್ಳಬೇಕೆಂದಿದ್ದೇನೆ. ಮಗೂ ಯಾವಾಗಲೂ ದೈವೀ ಭಾವವೇ ಇರುವುದಿಲ್ಲ. ಒಂದೊಂದು ಸಲ ದೃಷ್ಟವೃತ್ತಿಗೂ ಸಹ ಜಯ ದೊರೆಯುತ್ತದೆ."[೩೫]

ನನ್ನ ಜೀವನ ನಾಟಕದ ಅಂತ್ಯವು ದುಃಖಮಯವಾದದ್ದು. ಇದನ್ನ ನೆನೆದರೆ ಸಾಕು. ಅಧೈರ್ಯವು ಬಂದು ಕತ್ತಲು ಕವಿದಂತೆ ಆಗುತ್ತದೆ. ಈವರೆಗೆ ನನಗೆ ಬೇರೆಯವರಿಗೆ ಆಜ್ಞೆಮಾಡುವುದು ಮಾತ್ರ ತಿಳಿದಿತ್ತು. ಆದರೆ ಈದಿನ ನಿನ್ನ ತಾಯಿಯು ವಿನಯದಿಂದ ಪ್ರಾರ್ಥನೆ ಮಾಡುತ್ತಿದ್ದಾಳೆ.[೩೬]

## ೫.೪ ರಾಮಚರಿತ ಪುರಾಣದ ಪ್ರಮುಖ ಸ್ತ್ರೀ ಪಾತ್ರಗಳ ನಿರ್ವಚನ

ದಶರಥನು ರಾಮನನ್ನು ಒಡಂಬಡಿಸಿ, ರಾಜ್ಯಭಾರವನ್ನು ವಹಿಸುವಂತೆ ಮಾಡಲು, ಅನಂತರ ಭರತನು ಕೈಮುಗಿದು ಹೀಗೆಂದನು– ದೇಹದ ಶುಚಿತ್ವವನ್ನು, ನಾಲ್ಕುಗತಿಯಿಂದ ದೊರಕುವ ಅನಿಷ್ಟವನ್ನು, ರಾಜ್ಯದ ಈ ಕೆಡುವ ಸುಖಗಳಿಂದ ಒದಗುವ ಬಹು ದುಃಖವನ್ನು ನಾನು ತಿಳಿದವನಾಗಿಯೂ ನಿಮಗೆ ಅಂಜಿ ವಿಜ್ಞಾಪಿಸಲು ಹಿಂಜರಿದಿದ್ದೆನು. ಈಗ ಬಲ ಬಂದಿತು. ನಾನೂ ನಿಮ್ಮ ಜೊತೆಯಲ್ಲಿಯೇ ತಪಸ್ಸನ್ನಾಚರಿಸಿ, ಪರಮಾರ್ಥಿಕ ಸೌಖ್ಯವನ್ನು ಸಾಧಿಸುತ್ತೇನೆ.[೩೭]

ಎಂದು ನಿಶ್ಚಯಿಸಿ. ಆ ಸಭೆಯಲ್ಲಿದ್ದ ಭರತನು ವಿಜ್ಞಾಪಿಸಲು, ಆ ಸಭೆಯಲ್ಲಿದ್ದ ಒಬ್ಬನು ಅತಿತ್ವರಿತಗತಿಯಿಂದ ಕೈಕೇಯಿಯಲ್ಲಿಗೆ ಬಂದು ದಶರಥನು ರಾಮನಿಗೆ ರಾಜ್ಯವನ್ನು ಕೊಟ್ಟು, ಭರತನೊಂದಿಗೆ ತಪಸ್ಸಿಗೆ ತೆರಳಲಿರುವ ಸಂಗತಿಯನ್ನು ತಿಳಿಸುತ್ತಾನೆ. ಆಗ ಕೈಕೇಯಿಯು ದುಃಖಿತೆಯಾಗಿ ದಶರಥನು ರಾಮನಿಗೆ ರಾಜ್ಯಭಾರವನ್ನು ಕೊಟ್ಟನು. ನಾನು ಕೀಳಾಗಿ ಇದ್ದರೆ ಏನು ಪ್ರಯೋಜನ? ಆಳಿನಂತಿರಬೇಕಲ್ಲ? ಎಂಬ ಭಾವನೆ ಭರತನಲ್ಲಿ ಮೂಡಿದುದೇ ಈ ವೈರಾಗ್ಯಕ್ಕೆ ಕಾರಣವೆಂದು (ಕೈಕೇಯಿಯು) ವಿಚಾರಿಸಿದಳು. ಅರಸನೊಂದಿಗೆ ತಪಸ್ಸಿಗೆ ಮಗನು ಹೋದರೆ ತನಗಾರು ಆಸೆ ಎಂದು ಕೈಕೇಯಿ ಭಯಚಕಿತೆಯಾಗಿ ಚಿಂತೆಯೆಂಬ ಸಮುದ್ರದ ತಗ್ಗಿನಲ್ಲಿ ಮುಳುಗಿ ಎವೆಯಿಕ್ಕುವದನ್ನು ಮರೆತಳು. ಮಗನು ತಪಸ್ಸಿಗೆ ಈಡಾದರೆ ನನಗೆ ಮರ್ಯಾದೆ ಇಲ್ಲ. ಸವತಿಯರು ಹಾಕುವ ಕೂಳಿಗೆ ಬಾಯ್ದೆರೆದು ಕುಳಿತುಕೊಳ್ಳುವ ದುಃಖಕ್ಕೆ ಗುರಿಯಾಗುವ ದುಷ್ಕೀರ್ತಿ ತನಗೆ ಒದಗುವುದು ಎಂದು ಕೈಕೇಯಿ ಕಳವಳದಿಂದ ಹಲಬುತ್ತಿರುವಾಗ – ಮುಚ್ಚಿಟ್ಟು ಮರೆತ ಹಣವನ್ನು ಬಡವನು ಜ್ಞಾಪಿಸಿಕೊಳ್ಳುವಂತೆ, ತನಗೆ ಪ್ರಿಯನಾದ ದಶರಥನು ಕೊಟ್ಟ ವರವನ್ನು ಕೈಕೇಯಿ ಚಿಂತೆಯೆಂಬ ಅಂಧಕಾರಕ್ಕೆ ಪ್ರಜ್ವಲಿಸುವ ದೀಪಕವೋ ಎಂಬಂತೆ ನೆನಸಿಕೊಂಡಳು. ಹಾಗೆ ನೆನದು ಮನಸ್ಸಿನಲ್ಲಿ ಹಿಗ್ಗಿ ಭರತನನ್ನು ರಾಜ್ಯಮೋಹವೆಂಬ ಲೋಹಸಂಕೋಲೆಯಲ್ಲಿ ತೊಡಕಿಸುವೆನೆಂದು ಬಗೆದು–ಕೈಕೇಯಿಯು ತೊಟ್ಟಿದ ಬಂಗಾರದ ಹೊಳೆಯುವ ಆಭರಣಗಳು ಆಕೆಯ ಮೈಯ ಕಾಂತಿಯನ್ನು ಹೆಚ್ಚಿಸಲು, ರಾಜನನ್ನು ಮೋಹಪಾಶದಲ್ಲಿ ಬಿಗಿಯಲೆಂದು, ಗುಣಹಾನಿಗೆ ಹೆದರದೆ,

ಧರ್ಮಹಾನಿಯನ್ನು ನೆನಯದೆ, ಯೋಗ್ಯವಾದ ಸೇವೆ ವ್ಯರ್ಥವಾದಂತೆ, ಮಲಿನಾಂತರಂಗದ ಮೋಸದ ದೀಪದಂತೆ ಅರಸನ ಮನೆಗೆ ಬಂದಳು. ಸಭೆಗೆ ಉದ್ವೇಗವೂ, ದಶರಥನ ತೀರ್ಮಾನಕ್ಕೆ ವಿಘ್ನವೂ, ವಿದ್ವಜ್ಜನರಿಗೆ ಅಪಾಯವೂ, ಹಸುಗೆಗೆ ವಿದ್ವೇಷಣ ವಿದ್ಯೆಯೂ ಬರುವ ಹಾಗೆ ಕೈಕೇಯಿ ಬಂದಳು. ಉಚಿತವಾದುದಲ್ಲವೆಂಬುದನ್ನು ವಿಚಾರಿಸದೆ, ದುರ್ಯಶವಾಗುವುದೆಂಬುದನ್ನು ನೆನಯದೆ ಕೈಕೇಯಿ ನನ್ನ ಅಪೇಕ್ಷಿತ ವರವನ್ನು ದೇವರು ಕೊಡಬೇಕು ಎನ್ನಲು, ದಶರಥನು ಮನುಕುಲದಲ್ಲಿ ಸುಳ್ಳುನುಡಿ ಉಂಟಾದೀತೆ? ತಪೋವನಕ್ಕೆ ವಿಘ್ನಕಾರಿಯಲ್ಲದುದನ್ನು ಹೆದರದೇ ಬೇಡಿಕೋ ಎಂದನು. ಮನದಲ್ಲಿ ವಿಚಾರಿಸಿ– ಮುಖವೆಂಬ ಚಂದ್ರಬಿಂಬದ ಕಲಂಕದ ಬೀಜಗಳಂತೆ, ಮುಖಕಮಲದ ಮಧುವನ್ನು ಕುಡಿದು ಸೊಕ್ಕಿದ ದುಂಬಿಗಳಂತೆ, ಹಿರಿಯ ಅಣ್ಣ ಶ್ರೀರಾಮನಿರಲು ನಿಂದೆಗೆ ಅಂಜದೆ, 'ಭರತನಿಗೆ ರಾಜ್ಯವನ್ನು ಕೊಡಬೇಕು' ಎಂದು ಬೇಡುವ ಕೈಕೇಯ ಮಲಿನ ಉಕ್ತಿಗಳು ಹೊರಟವು. ಕೈಕೇಯಿಯು (ಭರತನಿಗೆ) ಹದಿನಾಲ್ಕು ವರ್ಷ ಭೂಮಿಯನ್ನೂ (ರಾಮನಿಗೆ) ಹದಿನಾಲ್ಕು ವರ್ಷ ವನವಾಸವನ್ನೂ ಬೇಡಲು, ದುರ್ಯಶದ ಭೇರೀನಾದವೆ ಉಂಟಾದಂತಾಯಿತು.[೩೮]

ಹೀಗೆ ದಶರಥನು ಮೂರ್ಛಿತನಾಗಲು ಮಗನು ಹೊರಟುಹೋಗಲು, ಪತಿ ಮೂರ್ಛಿತನಾಗಿರುವುದನ್ನು ಕಂಡು ಕೈಕೇಯಿ ನಾಚಿಕೆಯಿಂದ ತಲೆಬಾಗಿ, ವಡ್ಯಾಣದ ರತ್ನ ಘಂಟಾರವದೊಡನೆ ಅಪವಾದದ ಮಹಾಧ್ವನಿ ದಶದಿಕ್ಕುಗಳನ್ನು ಮುಟ್ಟಲು, ದಟ್ಟ ಕಣ್ಣೆವೆಗಳನ್ನು ಬದಿಗೊತ್ತಿ ಸುರಿದ ಕಣ್ಣೀರಿನ ಧಾರೆಯು ಎದೆಯ ಮೇಲೆ ಮುತ್ತಿನ ಹಾರದಂತೆ ಶೋಭಿಸಲು, ಆಸ್ಥಾನದಿಂದ ಎದ್ದುಹೋದಳು.[೩೯]

ಈ ದುಷ್ಕೃತ್ಯವನ್ನು ಸ್ತ್ರೀ ಜನ್ಮದ ಜಡತನದಿಂದ ಮಾಡಿದೆನು ಎಂದು ಕೈಕೇಯಿ ತನ್ನನ್ನು ತಾನು ನಿಂದಿಸಿಕೊಂಡು, ಭರತನನನ್ನು ಕರೆಯಿಸಿ, ಮಗನೇ, ನಿನ್ನ ರಾಜ್ಯವು ರಾಮಲಕ್ಷ್ಮಣರಿಲ್ಲದೆ ಒಪ್ಪಲಾರದು, ಅವರ ತಾಯಂದಿರು ಅವರ ವಿಯೋಗದ ದುಃಖದಿಂದ ಪ್ರಾಣ ಕಳೆದುಕೊಳ್ಳುವರು; ಅದು ಕಾರಣ ಬೇಗನೆ ಹೋಗಿ ರಾಮ ಲಕ್ಷ್ಮಣರನ್ನು ನಿಲ್ಲಿಸು; ನಿನ್ನ ಹಿಂದೆಯೇ ನಾನೂ ಬರುತ್ತೇನೆ, ಎಂದಳು. ಕೂಡಲೇ ಭರತನು ಹಾಗೆಯೇ ಮಾಡುವೆನೆಂದು ರಾಮನನ್ನು ಕಳಿಸಿ ಬಂದ ಸಾಮಂತರನ್ನೊಡಗೂಡಿಕೊಂಡು ನದಿಯನ್ನು ದಾಟಿಹೋಗಿ ಮುಂದೆ ಕಗ್ಗತ್ತಲೆಯಾದ ಕಾಡಿನ ದಾರಿಯಲ್ಲಿ ಜಾನಕಿಯ ದಾರೀ ನಡೆದ ಶ್ರಮವನ್ನು ಅರಿಸುತ್ತಿದ್ದ ಶ್ರೀರಾಮನನ್ನು ಮುಟ್ಟಿ ವಾಹನದಿಂದಿಳಿದು ಕಾಲಮೇಲೆ ಕವಿದು ಬಿದ್ದು–ಮೋಹವೆಂಬ ಕಾಳ್ಗಿಚ್ಚಿನ ಹೊಗೆಯ ಹಾಗೆ ಮನಸ್ಸಿಗೆ ಕತ್ತಲೆಯು ಮುಸುಕಲು, ಇಂದ್ರಿಯ ಬಲವೂ ಪ್ರಾಣದ ವ್ಯಾಪಾರಗಳೂ ಕೆಟ್ಟು ಕಾಲ್ಗೆರಗಿದ ಭರತನು ವಿಕಳನಾಗಿ ಮೂರ್ಛೆಯನ್ನು ಹೊಂದಿದನು.

ಹೀಗೆಂದು ಬಿನ್ನವಿಸುತ್ತಿರುವಷ್ಟರಲ್ಲಿ ನೂರು ಜನ ಸಾಮಂತರೊಡನೆ ಬರುವ ಕೈಕೇಯನ್ನು ಕಂಡು– ಇದಿರಾಗಿ ಎದ್ದು ಓಡಿ ಹೋಗಿ ರಾಮನು ಕೈಕೇಯಿಯ ಪಾದಕ್ಕೆ ಎರಗಲು, ಆಕೆಗೆ ತಾನು ಹಿಂದೆ ಮಾಡಿದ

ಅನ್ಯಾಯವು ಮನಸ್ಸಿನಲ್ಲಿ ಬಂದು, ಹರ್ಷದ ಭಾರದಿಂದ ಸಂಕಟವಾಯಿತು. ಕೈಕೇಯಿ ತನ್ನನ್ನು ಸ್ಥಾನದಿಂದ ಚ್ಯುತ ಮಾಡಿದಳೆಂದು ಮನಸ್ಸಿನಲ್ಲಿ ನೋವಿಲ್ಲ. ಸುಗುಣನಾದ ರಾಮನು ಆಕೆಯ ಪಾದಕ್ಕೆ ಪ್ರೀತಿಯಿಂದ ನಮಸ್ಕರಿಸಿದನು. ಯೋಗ್ಯನಾದವನು ಮಾನಭಂಗಕ್ಕೆ ಎಡೆಗೊಡುವನೇ? ಹಾಗೆ ವಿನಯದಿಂದ ಸೈರಿಸಿ, ಮಗನೇ, ರಾಜ್ಯವನ್ನು ಸ್ವೀಕರಿಸು. ನಿನ್ನ ತಮ್ಮಂದಿರು ನಿನ್ನ ಅಪ್ಪಣೆಯನ್ನು ಪಾಲಿಸಿ ಜೀವಿಸುವರು. ಇದನ್ನು ಉದಾಸೀನ ಮಾಡದೆ ತಿರುಗಿ ಬಾ, ಎಂದು ಎನ್ನಲು, ಕೈಮುಗಿದು ರಾಮನು ತಾಯಿಗೆ ಈ ಪ್ರಕಾರ ನುಡಿದನು– ನಿಷ್ಕಳಂಕ ಚರಿತ್ರನೂ ಕ್ಷತ್ರಿಯ ಕುಲದಲ್ಲಿ ಹುಟ್ಟಿದವನೂ ಒಮ್ಮೆ ನುಡಿದುದಕ್ಕೆ ಪ್ರತಿಯಾಗಿ ನುಡಿದರೆ ಇಹಲೋಕದ ಸುಖವೂ ಪರಲೋಕದ ಸುಖವೂ ನಾಶವಾಗುವುದು ನಿಶ್ಚಯ. ತಾಯೀ, ಅಸತ್ಯಕ್ಕಿಂತ ಹೆಚ್ಚಿನ ಪಾಪವುಂಟೇ?[೪೦]

**೫.೫ ತೊರವೆ ರಾಮಾಯಣದಲ್ಲಿ ಚಿತ್ರಣಗೊಂಡ ಪ್ರಮುಖ ಸ್ತ್ರೀ ಪಾತ್ರಗಳು**

ಮಂಥರೆಯ ಮಾತುಗಳನ್ನು ಕೇಳಿ ಕೈಕೇಯಿ ಕಡುಗೋಪಗೊಂಡು, "ಇವಳು ಏನನ್ನು ಹರಟುತ್ತಿದ್ದಾಳೆ? ಇವಳ ಮಾತುಗಳನ್ನು ಕೇಳಿ!" ಎಂದು ತನ್ನ ಒಡನಾಟದ ಹೆಂಗಸರೊಡನೆ ಜರೆದು ನುಡಿದಳು. "ಇವಳು ನಮಗೆ ಇದನ್ನು ಹೇಳಲು ಕಾರಣವೇನು? ಚಾಡಿಕೋರರ ಮೋಸಗಾರರ ಅತಿಬುದ್ಧಿಯ ಮಾತುಗಳು ನಮಗೇಕೆ" ಎಂದಳು ಕೈಕೇಯಿ ಅವರೊಡನೆ. 'ಭರತ ಮತ್ತು ರಾಮ ಇವರುಗಳು ನಡುವೆ ದಾಯಾದಿತನದ ತಿಕ್ಕಾಟವುಂಟೆ? ನಾನು ಮತ್ತು ಕೌಸಲ್ಯೆ ಇಬ್ಬರಲ್ಲಿ ಹಿಂದೆ ಸವತಿಯರೆಂಬ ಹೊಟ್ಟೆಯುರಿ ಇದ್ದಿತೆ? ಸೂರ್ಯವಂಶದಲ್ಲಿ ತಲೆಮಾರಿಯಿಂದ ಬಂದ ಸಿಂಹಾಸನಕ್ಕೆ ಹಕ್ಕುದಾರನಾದ ರಾಮನು ಅರಸನಾದರೆ ನಮಗೆ ಭಾಗ್ಯ" ಎಂದಳು, ಆ ಕೈಕೇಯಿ.[೪೧]

ಈಗ ಕೈಕೇಯಿಗೆ ಘನತೆಯ ನಚ್ಚು ಹುಟ್ಟಿತು! ಅಸೂಯೆ ಗರಿ ಗೆದರಿತು; ರಾಜ್ಯಲಕ್ಷ್ಮಿಯನ್ನು ಪಡೆಯುವ ಅಭಿಲಾಷೆ ಮನಸ್ಸಿನಲ್ಲಿ ಕವಲೊಡೆಯಿತು. ಪ್ರೀತಿಹುಟ್ಟಿ ಮಂಥರೆಯ ಮಾತಿಗೆ ಒಪ್ಪಿಗೆಕೊಟ್ಟಳು. ಕುಶನೇ ಕೇಳು, ಶಿವನೂ ಸೇರಿದಂತೆ ಸಕಲ ದೇವತೆಗಳಲ್ಲಿ ಮಾಯೆಯ ಬಂಧನಕ್ಕೆ ಒಳಗಾಗದವರಾರು!. ಅನಂತರ ಮಂಥರೆಯು ದಶರಥನು ಹಿಂದೆ ಕೊಟ್ಟ ಎರಡು ವರಗಳಿವೆಯಲ್ಲ, ಅವುಗಳನ್ನು ರಾಜನಿಂದ ಬೇಡಿ ಪಡೆದುಕೋ, ಸಕಲಸಂಪತ್ತನ್ನೂ ದೊರಕಿಸಿಕೊಳ್ಳಲು ನಿನಗಿದೇ ದಾರಿ,[೪೨] ಎಂದು ಕೈಕೇಯಿಗೆ ತಿಳಿಸಿದಳು.

"ನಾನು ಬೇಡಿದುದನ್ನು ಕೊಡಲು ನೀವು ಸಮರ್ಥರೇ ನೀವು ಆಡಿದ ಮಾತಿಗೆ ತಪ್ಪುವುದಿಲ್ಲ ಅಲ್ಲವೇ? ನನ್ನನ್ನು 'ಇವಳು ಬಾಯ್ಬಡುಕಿ' ಎನ್ನುವುದಿಲ್ಲವಲ್ಲ! ನಿಮ್ಮ ಮನಸ್ಸಿಗೆ ನೋವಾಗುವುದಿಲ್ಲ ತಾನೇ? ಮಾತುಕೊಟ್ಟ ಮೇಲೆ ಎಡಬಲಕ್ಕೆ ಮನಸ್ಸು ಕೊಡುವುದಿಲ್ಲವಲ್ಲ? ನೀವು ಕೊಟ್ಟ ಮಾತನ್ನು ನಡೆಸಿಕೊಡುವುದು

ನಿಶ್ಚಯವೇ?" ಎಂದು ಕೈಕೇಯಿ ಕೇಳಲು, ಅವಳ ಮನಸ್ಸಿನಲ್ಲಿರುವುದನ್ನರಿಯದೆ ದಶರಥನು 'ನಿಶ್ಚಯ' ಎಂದು ನಂಬಿಕೆ ಕೊಟ್ಟನು.

"ಮೋಸದ ವಿದ್ಯೆ ಇವರಲ್ಲಿ ತುಂಬಿದೆ. ಮಂತ್ರಿಯೆ ಕೇಳು, ಬೇರೆ ಯೋಚಿಸದೆ ಧರ್ಮಮಾರ್ಗದಿಂದ ಮನಬಿಚ್ಚಿ ಮಾತಾಡಲಿ. ಇವರು ಹಿಂದೆ ನನಗೆ ಕೊಟ್ಟ ಎರಡು ವರಗಳಿವೆ. ಅವುಗಳನ್ನು ಬೇಡಿಕೊಳ್ಳಲು ನನಗೆ ಈಗ ಆ ವರಗಳನ್ನು ಕೊಟ್ಟರು, ವರ ಕೊಟ್ಟಾದ ಬಳಿಕ ಸಂಕಟಪಡುತ್ತಿದ್ದಾರೆ. ಇದನ್ನು ನೀನು ತಿಳಿಯೆ, ಕೇಳು" ಎಂದು ಕೈಕೇಯಿ ಹೇಳಿದಳು. "ಒಂದು ವರದಿಂದ ನನ್ನ ಮಗನಿಗೆ ರಾಜ್ಯವನ್ನೂ, ಇನ್ನೊಂದು ವರದಿಂದ ರಾಮನಿಗೆ ಅರಣ್ಯದ ಒಡೆತನವನ್ನೂ ಕೇಳಿಕೊಂಡೆ. ಇದರಿಂದ ನಮಗೆ ಅಪಕೀರ್ತಿಯೊದಗಿತು. ಇಲ್ಲಿಯ ಸ್ತ್ರೀಯರ ಸಾಕ್ಷಿಯಾಗಿ ಮೊದಲು ನನಗೆ ವರಗಳನ್ನು ಕೊಟ್ಟರು. ಈಗ ನೀವು ಬಂದ ಮೇಲೆ ನಿಮ್ಮ ರಾಜನಿಗೆ ಅದರಲ್ಲಿ ಸಂದೇಹವುಂಟಾಗಿದೆ. ಮನುವಂಶದ ರಾಜರಲ್ಲಿ ಸುಳ್ಳುಹುಟ್ಟದೆಂದು ನಂಬಿ ಮನಸ್ಸಿನೊಳಗನ್ನರಿಯದೆ ನನ್ನ ಮಗನಿಗೆ ಅಧಿರಾಜಪಟ್ಟವನ್ನು ನಿಮ್ಮವರಲ್ಲಿ ಬೇಡಿಕೊಂಡೆ, ಇಷ್ಟರಮಟ್ಟಿಗೆ ಸತ್ಯದಿಂದ ಹಿಂದೆಗೆಯುವಿಕೆಯಿರಲು ಈಗ ನನಗಿರುವ ಹಿರಿತನವೇ ಸಾಕು. ನೀವುಗಳೆಲ್ಲ ಸೇರಿಕೊಂಡು ರಘುರಾಮನಿಗೆ ಪಟ್ಟವನ್ನು ಕಟ್ಟಿ" ಎಂದಳು ಕೈಕೇಯಿ. "ಜಗತ್ತಿನಲ್ಲಿ ಬೇಡಿದ್ದನ್ನು ಕೊಡುವುದಕ್ಕೆ ಈತನೇನು ದಧೀಚಿ, ಶಿಬಿ, ಜೀಮೂತವಾಹನ, ಬಲಿಚಕ್ರವರ್ತಿ, ಕಪೋತರಂಥ ಮಹಾನುಭಾವರಿಗಿಂತ ಶ್ರೇಷ್ಠನೇ? ಸುಮ್ಮನೆ ಮಾತೇಕೆ ಮಂತ್ರಿ, ಸಾಕು, ನಮಗೇತಕ್ಕೆ ರಾಜ್ಯದ ಬಯಕೆ. ಶ್ರೀರಾಮನಿಗೆ ಅಭಿಷೇಕವನ್ನು ನೆರವೇರಿಸಲು ರಾಜನನ್ನು ಎಬ್ಬಿಸು".[೪೩]

"ಸುಮಂತ್ರ, ನಿನ್ನ ದುರ್ಬೋಧನೆ ನನಗೆ ಬೇಡ, ರಘುವಂಶದ ರಾಣಿಯರು ನನ್ನನ್ನು ನೋಡಿ ನಕ್ಕರೆ ನಗಲಿ. ಅಪಕೀರ್ತಿ ಬಂದರೆ ಬರಲಿ, ನಾನು ಒಂದು ಸಲ ನುಡಿದುದನ್ನು ಪುನಃ ಬದಲಾಯಿಸುವುದಿಲ್ಲ. ನಿಮ್ಮ ಈ ಬೊಬ್ಬಾಟವನ್ನು ಬಲ್ಲೆ, ಆಚೆ ಹೋಗು" ಎಂದು ಕೈಕೇಯಿ ಸುಮಂತ್ರನಿಗೆ ಹೇಳಿದಳು. "ಸುಮಂತ್ರ, ನೀನು ನುಡಿದ ಬುದ್ಧಿವಾದವು ಸತ್ಯವಾದುದು ನಮ್ಮನ್ನು ನಂಬು, ಇದಕ್ಕೆ ಭಂಗ ಬರದಂತೆ ನಡೆಸುವೆವು" ಮಾತಿನಲ್ಲಿ ಚೌಕಾಸಿ ಮಾಡಬೇಡಿ, ನಿಮ್ಮ ರಾಜನು ತನ್ನ ಬಾಯಿಂದ ಸ್ಪಷ್ಟವಾಗಿ ನುಡಿಯಲಿ" ಎಂದು ಕೈಕೇಯಿ ಮಹರ್ಷಿಗೆ ಹೇಳಿದಳು.[೪೪]

ಆನಂತರ ಮನಸ್ಸಿನಲ್ಲಿಯೇ ಪಶ್ಚಾತ್ತಾಪದ ಬೆಂಕಿಯಲ್ಲಿ ಬೆಂದ ಕೈಕಾದೇವಿಯು ಕಣ್ಣೀರು ಸುರಿಸುತ್ತ ಬಂದು ನಿಷ್ಕಲ್ಮಷ ಚಿತ್ತದಿಂದ "ಹಿಂದೆ ನಾನು ಮಾಡಿದ ಅಕಾರ್ಯವನ್ನು ಮರೆತು ರಾಜ್ಯವನ್ನು ರಕ್ಷಿಸು ಕಂದ" ಎಂದು ನುಡಿದು ರಾಮನ ಶಿರವನ್ನು ಅಪ್ಪಿಕೊಂಡಳು.[೪೫]

ಆರನೆಯ ಸಂಧಿಯಲ್ಲಿ ಭರತನಿಗೆ ರಾಮಲಕ್ಷ್ಮಣರ ಹೆಚ್ಚಳವನ್ನು ಕಂಡು ಅಸಮಾಧಾನವಾಗಿ ಕಾಡಿಗೆ ಹೊರಡಲು ಉದ್ಯುಕ್ತನಾಗುತ್ತಾನೆ. ಆಗ ಕೈಕೇಯಿಯು ಭರತನನ್ನು ಸಮಾಧಾನಪಡಿಸಿ ದಶರಥನ ಬಳಿ ಭರತನ ದುಗುಡದ ಬಗ್ಗೆ ಹೇಳುತ್ತಾಳೆ. ಅದರ ಪ್ರಕಾರ ಭರತನ ಲಗ್ನವಾಗುತ್ತದೆ. ಮುಂದೆ ದಶರಥನು

ರಾಮನಿಗೆ ರಾಜ್ಯವನ್ನು ಒಪ್ಪಿಸಿ ತಪಸ್ಸಿಗೆ ಹೊರಟಾಗ ಭರತನು ಜೊತೆಯಲ್ಲಿ ಹೊರಡುತ್ತಾನೆ. ಒಬ್ಬ ದೂತನ ಮುಖಾಂತರ ಈ ವಿವರವು ಕೈಕೇಯಿಗೆ ತಿಳಿಯುತ್ತದೆ. ಆಗ ಅವಳು ದಶರಥನ ಬಳಿಗೆ ಧಾವಿಸಿ ಅವನ ನಿರ್ಣಯವನ್ನು ಪ್ರಶ್ನಿಸುತ್ತಾಳೆ ಮತ್ತು ತನ್ನ ಗತಿಯೇನೆಂದು ಕೇಳುತ್ತಾಳೆ. ಆಗ ಅವಳಿಗೆ ವರಗಳ ನೆನಪಾಗಿ ಭರತನಿಗೆ ಹದಿನಾಲ್ಕು ವರ್ಷ ರಾಜ್ಯ ಕೊಡಬೇಕು. ಈ ಅವಧಿಯಲ್ಲಿ ರಾಮನು ವನವಾಸದಲ್ಲಿರಬೇಕೆಂದು ಕೇಳುತ್ತಾಳೆ. ದಶರಥನು ಧರ್ಮ ಸಂಕಟಕ್ಕೀಡಾದರೆ ಭರತನು ತಾಯಿಯು ತಪ್ಪು ಮಾಡುತ್ತಿರುವಳಲ್ಲ ಎಂದು ತಳಮಳಿಸಿದ. ಸಭೆಯಲ್ಲಿದ್ದವರು ಕೈಕೇಯಿಯನ್ನು ನಿಂದಿಸಿದರು. ರಾಮನು ವನವಾಸಕ್ಕೆ ಹೊರಡಲು ಸಿದ್ಧನಾದ್ದರಿಂದ ಕೈಕೇಯಿಯು ಇಷ್ಟಾರ್ಥ ಸಿದ್ಧಿಸಿತು.

ಏಳನೆಯ ಆಶ್ವಾಸದಲ್ಲಿ ದಶರಥನು ಕೈಕೇಯಿಯಿಂದ ಬೇಸತ್ತು ದೀಕ್ಷೆ ಪಡೆಯುತ್ತಾನೆ. ಕೈಕೇಯಿಯು ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಾಳೆ. ಭರತನನ್ನು ಕರೆದು ಮಗು, ರಾಮಲಕ್ಷ್ಮಣರಿಲ್ಲದ ನಿನ್ನ ರಾಜ್ಯಕ್ಕೆ ಶೋಭೆಯಿರದು. ಅವರನ್ನು ತಡೆ ನಾನು ಬರುತ್ತೇನೆ ಎನ್ನುತ್ತಾಳೆ.

ಕೈಕೇಯಿಯು ನೂರು ಮಂದಿ ಸಾಮಂತರನ್ನು ಕರೆದುಕೊಂಡು ರಾಮನ ಬಳಿಗೆ ಬಂದಾಗ ರಾಮನು ಹರ್ಷದಿಂದ ಅವಳ ಬಳಿ ಸಾರಿ ಪಾದಕ್ಕೆರಗಿದ. ಇದನ್ನು ಕಂಡ ಕೈಕೇಯಿಗೆ ಮನವುಮ್ಮಳಿಸಿತು. ಈತನ ಮನಸ್ಸಿನಲ್ಲಿ ಪ್ರೀತಿಯಲ್ಲದೆ ಮನಃಕಷಾಯವಿಲ್ಲ. ತನ್ನ ತಪ್ಪನ್ನು ಮನ್ನಿಸಿ ಹಿಂದಿರುಗಿ ರಾಜ್ಯಭಾರವನ್ನು ಕೈಗೊಳ್ಳಬೇಕೆಂದು ಕೇಳಿಕೊಳ್ಳುತ್ತಾಳೆ. ಕೈಕೇಯಿಯು ಪಶ್ಚಾತ್ತಾಪದಿಂದ ಬೆಂದು ಹೋಗಿದ್ದಳು. ಮುಂದೆ ಕೈಕೇಯಿಗೂ ಸದ್ಗತಿ ಪ್ರಾಪ್ತವಾಗುತ್ತದೆ.[೪೬]

ತೊರವೆ ರಾಮಾಯಣದಲ್ಲಿ ಮಾಯೆಯು ನಾರಾಯಣನ ಲೀಲಾ ನಾಟಕಕ್ಕಾಗಿ ಮಂಥರೆ ಪ್ರವೇಶಿಸುತ್ತಾಳೆ. ಕೈಕೇಯಿಗೆ ಹೇಳುತ್ತಾಳೆ;

"ಅರಸಿ ಕೇಳು, ದಶರಥರಾಜನು ಮನಸ್ಸಿನಲ್ಲಿ ಯೋಚಿಸಿದ ಆಲೋಚನೆಯನ್ನು ಏನು ಹೇಳಲಿ! ಶಿವಶಿವ, ಅದು ನಿನಗೆ ತಿಳಿಯಲಿಲ್ಲವಲ್ಲ! ಸಾಮ್ರಾಜ್ಯವು ರಾಮನಿಗೆ, ಭರತನೂ ಅವನ ಸಹೋದರರೂ ರಾಮನ ಸೇವಕರು! ಹೀಗೆ ಕುತೂಹಲಕರವಾದ ಸಂಗತಿಯು ಇಂದು ನಡೆದಿದೆ" ಎನ್ನುತ್ತಾಳೆ. ಇದಕ್ಕೆ ಕೈಕೇಯಿಯ ಮನದಲ್ಲಿ, ಮಾತಿನಲ್ಲಿ ಯಾವುದೇ ಬದಲಾವಣೆಯಾಗದಿದ್ದಾಗ,

ನಮ್ಮದು ತಿಳಿಗೇಡಿಯ ಮಾತುಗಳು, ನೀವಾದರೋ ನೀತಿವಿಶಾರದರು, ಧರ್ಮಶಾಸ್ತ್ರನಿರತರು. ನಾವು ಮೋಸಗಾರರು, ವಂಚನೆಯಲ್ಲಿ ನಿಪುಣರು. ನಿಮಗೆ ದೊರೆಯುವುದು ಹಿರಿತನವೋ ಕಿರಿತನವೋ ಕಾಲಾಂತರದಲ್ಲಿ ತೋರಿಸುತ್ತೇನೆ. ಕೊನೆಯಲ್ಲಿ ನಿಮಗೆ ಸಿಕ್ಕುವ ಕೆಟ್ಟ ಬೀದಿಜಗಳವನ್ನೂ ಕಾಣಿಸಿಕೊಡುತ್ತೇನೆ" ಎಂದಳು ಮಂಥರೆ. "ನನ್ನನ್ನು ಅಧಿಕವಾಗಿ ಕಾಪಾಡಿದ ಒಡತಿ ಎಂಬುದಾಗಿ ನಿಮ್ಮನ್ನು ತಿಳಿದುಕೊಳ್ಳದೆ ನುಡಿದಂತಾಯಿತು. ನಿಮಗೆ ಇಷ್ಟು ನಿಷ್ಠುರವಾಗಿ ಕಂಡ ಮೇಲೆ ನಮಗೆ ಬಾಯಿಬಡಿಕತನವೇಕೆ? ಕೌಸಲ್ಯಾರಾಣಿಯಿಂದ ನಿಮಗಾಗುವ ಅಪಮಾನವನ್ನು ನೀವೇ ಕಾಣುವಿರಿ" ಎಂದು ಹೇಳಿ ಎರಡೂ

ಕೈಗಳನ್ನು ಮುಗಿದು ಕೈಕೇಯಿಯ ಅರಮನೆಯಿಂದ ಹೊರಟಳು. ಕೈಕೇಯು 'ಆ ವಕ್ರಬುದ್ಧಿಯವಳನ್ನು ಕರೆ, ಅವಳ ಕನಿಕರ ಹೆಚ್ಚಾಯಿತು" ಎಂದು ಅವಳನ್ನು ಕರೆಸಿಕೊಳ್ಳುತ್ತಾಳೆ. ಆಗ ಅವಳು ತನ್ನ ಮನದ ಮಾತುಗಳನ್ನು ಹೇಳಿ ಮುಂದುವರೆಸುತ್ತಾಳೆ.

"ನೀವು ನಂಟರೋ, ಸಾಮ್ರಾಜ್ಯಲಕ್ಷ್ಮಿಯು ದಾಸರೋ? ನಾನು ಸುಮ್ಮನೆ ಹೇಳುವ ಮಾತಿನಿಂದೇನು ಫಲ? ನಿಮಗೆ ನಾವೇಕೆ ಕಂಟಕರಾಗಬೇಕು. ಇದಕ್ಕಿಂತಲೂ ಎಂಟುಪಾಲು ಅಧಿಕ ವಿನಯದಿಂದ ಆತನ ಹಣೆಗೆ ಪಟ್ಟವನ್ನು ಅಂಟಿಸಿ" ಎಂದಳು ಮಂಥರೆ. ಯಾರು ಏನು ಮಾಡಿಯಾರು? ಭಾಗ್ಯಲಕ್ಷ್ಮಿಯ ದೃಷ್ಟಿ ಅವರ ಮೇಲೆ ಬಿದ್ದಿದೆ; ಅಮಂಗಳನಾರಿಯ ಕಣ್ಣು ನಿಮ್ಮ ಮೇಲೆ ಬಿದ್ದಿತು. ಇದು ಜಗತ್ಪ್ರಸಿದ್ಧ. ಪೂರ್ವಜನ್ಮದ ಕರ್ಮಫಲವನ್ನು ಅನುಭವಿಸುವುದನ್ನು ತಪ್ಪಿಸಲು ನಿಮ್ಮಿಂದ ಶಕ್ಯವೇ? ನಮ್ಮ ಹಿಂದಿನ ಕರ್ಮವನ್ನು ಮೀರಲು ಸಾಧ್ಯವಿಲ್ಲ" ಎಂದು ಕೈಕೇಯಿಗೆ ಹೇಳಿದಳು. ಇದರಿಂದ ಕೈಕೇಯಿಯಲ್ಲಿ ಸ್ವಾರ್ಥ ಮೂಡಿತು.

ಕೈಕೇಯಿಯು ಮಂಥರೆಯನ್ನು ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋಗಿ, ಆದರ ತೋರಿಸಿ ಭರತನಿಗೆ ರಾಜ್ಯವು ಸೇರುವ ಉಪಾಯವೇನೆಂದು ಮೃದು ಮಾತಿನಿಂದ ಕೇಳಿದಳು. "ಇದೇನು ಮಹಾ ಅಸಾಧ್ಯ! ದೇವಿ, ನಿನಗೆ ದಶರಥನು ಹಿಂದೆ ಕೊಟ್ಟ ಎರಡು ವರಗಳಿವೆಯಲ್ಲ, ಅವುಗಳನ್ನು ರಾಜನಿಂದ ಬೇಡಿ ಪಡೆದುಕೋ, ಸಕಲ ಸಂಪತ್ತನ್ನೂ ದೊರಕಿಸಿಕೊಳ್ಳಲು ನಿನಗಿದೇ ದಾರಿ" ಎನ್ನುತ್ತಾಳೆ.

**೫.೬ ಶ್ರೀ ರಾಮಾಯಣ ದರ್ಶನಂದಲ್ಲಿ ಪ್ರಮುಖ ಸ್ತ್ರೀ ಪಾತ್ರಗಳ ನಿರ್ವಚನ**

ಒಂದು ದಿನ ಬೆಳಗಿನ ಸಮಯ ಕೈಕೇಯ ತಾತನು ಬೇಟೆಯ ಬಳಲಿಕೆಯಿಂದ ಅಡವಿಯಲ್ಲಿ ತನ್ನ ಪರಿವಾರದೊಂದಿಗೆ ಬರುತ್ತಿರುವಾಗ ಶಿಶುರೋಧನವು ಕೇಳಿಸಿತು. ಮುಂದಿನ ಮಹಾಕಾವ್ಯಕ್ಕೆ ಗುದ್ದಲಿ ಪೂಜೆಯೆನ್ನುವಂತೆ ಆ ರೋಧನವನ್ನು ಕೇಳಿದ ಅರಸನ ಹೃದಯದಲ್ಲಿ ಕರುಣೆಯುಕ್ಕಿತು. ವಿಕಾರ, ವಕ್ರತೆಗಳೇ, ಮೈದಳೆದಂತಿದ್ದ ಹೆಣ್ಣು ಮಗುವೊಂದು ಮಣ್ಣು ತರಗೆಲೆಯ ರಾಶಿಯೊಳಗೆ ಇರುವೆ ಮುತ್ತಿದ್ದ ಸ್ಥಿತಿಯಲ್ಲಿ ಕಂಡಿತು. ಆ ಸಂದರ್ಭದಲ್ಲಿ ಕೇಳಿಸಿದ ಗೂಬೆಯುಲಿಯನ್ನು ಗಣನೆಗೆ ತಾರೆದೆ ಬೀದಿಯ ಮಾರಿಯನ್ನು ಮನೆಗೆ ತರುವಂತೆ ಊರಿಗೆ ಆ ಮಗುವನ್ನು ತಂದನು. ಮಗುವು ಕುಳ್ಳಗೆ ಗೂನುಬೆನ್ನಿನೊಂದಿಗೆ ಬೆಳ್ಳಗೆ, ಪರರ ಅನಾದರ, ಬಯ್ಗುಳ, ಶಾಪಗಳ ಜೊತೆಗೆ ನಾಯಿಮರಿಗೂ ಕಡೆಯಾಗಿ ಬಾಲ್ಯವನ್ನು ಕಳೆದಳು. ಮಾನವ ಪ್ರೇಮದ ಸವಿ ಕಾಣದ ಮೃಗದಂತೆ, ಮಿದುಳೇ ಇಲ್ಲದೆ ಬೆಳೆದ ಆ ಸೋಂಬೆಗೆ ಮುಖದ ಮೇಲೆ ಕೆಸರಚಿದಂತೆ ಮಂಥರೆಯೆಂದು ಹೆಸರಿಟ್ಟರು. ರಾಜನನ್ನು ಬಿಟ್ಟು ಬೇರೆ ಯಾರೂ ಅವಳ ಮೇಲೆ ಕನಿಕರಿಸಿದವರಿಲ್ಲ.

ಮಂಥರೆಗೆ ಕೌಮಾರ್ಯಾವಸ್ಥೆ ಬರುವಷ್ಟರಲ್ಲಿ ಕೈಕೇಯ ರಾಜನ ಮಗಳಾಗಿ ಕೈಕೇಯಿ ಜನಿಸಿದಳು. ಮಂಥರೆಯ ಮೇಲೆ ಕನಿಕರವಿದ್ದ ಅರಸ ಕೈಕೇಯಿಯನ್ನು ಆಡಿಸಿಕೊಳ್ಳುವ ಕೆಲಸಕ್ಕೆ ಅವಳನ್ನು ನೇಮಿಸಿದನು. ಇದು ಮಂಥರೆಯ ಬದುಕಿನ ಮರುಭೂಮಿಯಲ್ಲಿ ಮರಳು ಸುರಿದಂತಾಯಿತು. ಶಿಶುಸೌಂದರ್ಯದ ಮಹಿಮೆಯಿಂದ ಅವಳ ಬದುಕು ಸಾರ್ಥಕವಾಯಿತು, ಮಧುರವಾಯಿತು, ಹಾಲಿನಲ್ಲಿ ಇದ್ದಲು ತೇಲುವಂತೆ, ಆ ಮಗುವಿನ ಚೆಲುವಿನಲ್ಲಿ ಅವಳು ತೇಲಾಡಿದಳು. ಕಾಳಸರ್ಪದ ಹೆಡೆಯ ಮಣಿಯಂತೆ ಕೈಕೇಯಿ ಮಂಥರೆಯ ತೊಡೆಯಲ್ಲಿ ಹೊಳೆದಳು. ತನಗಾದ ಅಪಮಾನ ಅನ್ಯಾಯವನ್ನು ಮರೆತು ಕೈಕೇಯಿಯಲ್ಲಿ ಬೆರತಳು.

ಮಂಥರೆಯ ಯೌವ್ವನ ಕಳೆದು ವೃದ್ಧಾಪ್ಯ ಇಣುಕಿತು. ಜೊತೆ ಜೊತೆಗೆ ಹೊರಮೈಯ್ಯ ವಿಕೃತಿ ಹೆಚ್ಚಿತು. ಜೊತೆಗೆ ಕೈಕೇಯಿಯ ಮೇಲಣ ಮಮತೆಯೂ ಹೆಚ್ಚಿತು. ಜನ್ಮದಾರಭ್ಯ ಲೋಕವೆಲ್ಲ ಮಂಥರೆಯನ್ನು ತಿರಸ್ಕರಿಸಿದರೂ ಕೈಕೇಯಿ ತಿರಸ್ಕರಿಸಲಿಲ್ಲ. ಕೈಕೇಯಿಯ ವಿವಾಹವಾಗಿ ಅಯೋಧ್ಯೆಗೆ ಬಂದಾಗ ಮಂಥರೆಯೂ ನೆರಳಿನಂತೆ ಹಿಂಬಾಲಿಸಿದಳು? ರವಿವಂಶದ ಊರಾದರೇನು, ಮಾನವಸಹಜ ಸ್ವಭಾವ ಬದಲಾದೀತೆ? ಕಂಡ ಕಂಡ ಜನ ಮಂಥರೆಯನ್ನು ಶನಿಯೆಂದು ಶಪಿಸಿದರು. ದೇವರ ಆರಾಧನೆಗೆ, ಊಟದ ಸಮಯದಲ್ಲಿ ಯಾವ ಸಂದರ್ಭದಲ್ಲಿಯೂ ಅವಳನ್ನು ಹತ್ತಿರ ಸೇರಿಸುತ್ತಿರಲಿಲ್ಲ. ಆದರೂ ತನ್ನೊಡತಿಯ ಸುಖಕ್ಕಾಗಿ ತನ್ನ ಬದುಕನ್ನೇ ಸಮರ್ಪಿಸಿದಳು. ಎಲ್ಲ ಅವಮಾನಗಳನ್ನು ಸಹಿಸಿದಳು. ಭರತ ಹುಟ್ಟಿದ ಮೇಲಂತೂ ಹೆತ್ತ ತಾಯಿಯೇ ನಾಚುವಂತೆ ಭರತನನ್ನು ಸಾಕಿದಳು.

ಕೈಕೇಯಿ ಭರತರ ಅಭ್ಯುದಯದಲ್ಲಿ ಮಂಥರೆ ತನ್ನನ್ನೇ ಮರೆತಳು. ಇವರಿಬ್ಬರ ಹೊರತು ಪ್ರಪಂಚದಲ್ಲಿ ಅವಳ ಪಾಲಿಗೆ ಯಾರೂ ಇರಲಿಲ್ಲ. ಎಲ್ಲವೂ ಇವರಿಗಾಗಿಯೇ ಇರುವುದು. ಈ ಭೂಮಿಯೂ ಭರತನದೇ ಎಂದು ಅವಳು ಗಾಢವಾಗಿ ನಂಬಿದ್ದಳು. ಅವಳ ಮಮತೆಯ ಸುಳಿಯಲ್ಲಿ ಅವಳೇ ಮುಳುಗುವಳೆಂಬ ಕಲ್ಪನೆಯೂ ಆಕೆಗಿರಲಿಲ್ಲ.

ವಿಧಿಯ ಕೈಯಲ್ಲಿ ಎಲ್ಲರೂ ಸೂತ್ರದ ಬೊಂಬೆಗಳು. ಸೀತಾ, ರಾಮ, ಮಂಥರೆ, ರಾವಣ ಇವರಾರೂ ಹೊರತಲ್ಲ. ರಾವಣನ ವಿಧಿ ಮಂಥರೆಯ ಮನಸ್ಸಿನಲ್ಲಿತ್ತು. ರಾಮನ ಪಟ್ಟಾಭಿಷೇಕದ ಹಿಂದಿನ ರಾತ್ರಿ ಮಂಥರೆಗೊಂದು ಕನಸು ಬೀಳುತ್ತದೆ. ಮುಪ್ಪಿಡಿದ ಕೈಕೇಯಿ ವಿಧವೆಯಂತೆ ಭರತನ ಕೈ ಹಿಡಿದು ಮರುಭೂಮಿಯಲ್ಲಿ ಅಲೆಯುತ್ತಿದ್ದಳು. ಮಂಥರೆ ಕರೆದರೂ ಓಗೊಡಲಿಲ್ಲ. ಭರತನೊಡನೆ ಮುಂದುವರಿದಳು, ಕತ್ತಲೆ ಅವರಿಬ್ಬರನ್ನೂ ನುಂಗಿತು. ಮಂಥರೆ ತಾನು ಸುತ್ತಿ ಸುತ್ತಿ ಕೂಗಿ ಕೂಗಿ ನೀರಡಿಕೆಯಿಂದ ಸೊರಗಿ ಕೊರಗಿ ರಾಮನನ್ನು ಕರೆದಳೂ. ಅತ್ತು ನೆಲದ ಮೇಲೆ ಕೆಡೆದಳು. ಭೀತಿಯಿಂದ ಎಚ್ಚೆತ್ತ ಮಂಥರೆ ಸ್ವಪ್ನದ ಕೇಡನ್ನು ನೆನೆದು ಭಯಪೀಡಿತಳಾದಳು. ಆ ಬಗ್ಗೆ ಚಿಂತಿಸುತ್ತಿರುವಾಗಲೇ ಮಂಗಳವಾದ್ಯಗಳು ಮೊರೆದವು.

ಮಂಗಳವಾದ್ಯಗಳ ಕಾರಣವನ್ನರಿಯುವ ಕುತೂಹಲದಿಂದ ಹೊರಟ ಮಂಥರೆಗೆ ನಗರದ ಶೃಂಗಾರ ಸಂಭ್ರಮಗಳು ಎದುರಾದವು. ಸುತ್ತಣ ಜನ ಇವಳ ಪ್ರಶ್ನೆಗೆ ಉತ್ತರಿಸದೆ ಹಳಿದು ಮುಂದುವರೆದರು. ಖಿನ್ನಳಾಗಿ ಕಲ್ಯಾಣ ಮಂಟಪ ತಲುಪಿ ನಗುತ್ತ ನಿಂತಿದ್ದ ರಾಮನ ದಾಸಿಯನ್ನು ಮಾತನಾಡಿಸಿದಾಗ ಸತ್ಯ, ಕಹಿಸತ್ಯ ತಿಳಿಯಿತು. ವಿಷಯ ತಿಳಿದ ಮಂಥರೆ ಎದೆಬಿರಿದವಳಾಗಿ ಏದುತ್ತ ಕೈಕೇಯ ಬಳಿಗೆ ಓಡಿಬಂದು ಕೈಕೇಯನ್ನು ಮತಿಗೇಡಿ, ನಿರ್ಭಾಗ್ಯೆ ಎನ್ನುತ್ತ ಹಾ ಭರತ, ಹಾ ಭರತ ಎಲ್ಲಿದ್ದೀಯೆ, ಬೇಗ ಬಾ ಎಂದು ಚೀರುತ್ತ ಹೊಸ್ತಿಲ ಮೇಲೆ ಕುಸಿದಳು. ಕೈಕೇಯಿ ಬಂದು ಶೈತ್ಯೋಪಚಾರ ಮಾಡಿದಾಗ ಎಚ್ಚರಗೊಂಡ ಮಂಥರೆ ಬಿಕ್ಕಳಿಸಿ ಅತ್ತಳು.

ಕೈಕೇಯಿಯು ಮಂಥರೆಯಿಂದ ರಾಮಪಟ್ಟಾಭಿಷೇಕದ ವಿಷಯ ತಿಳಿದು ಸಂತಸದಿಂದ ಕೊರಳ ಸರವನ್ನು ತೆಗೆದುಕೊಡುತ್ತ ಶುಭವಾರ್ತೆಯನ್ನು ಹೇಳಿದೆ. ರಾಮ ಭರತರಿಬ್ಬರರೂ ನನಗೆ ಒಂದೇ ಎನ್ನುತ್ತಾಳೆ. ಮಂಥರೆ ಕೈಕೇಯಿಯನ್ನು ಬೈಯ್ದು ಕೌಸಲ್ಯೆಗಿಂತ ನೀನು ಕೀಳೆ, ರಾಮನಿಗಿಂತ ಭರತ ಕೀಳೆ. ಜನ್ಮ ಕ್ರಮದಿಂದ ನೋಡಿದರೂ ಭರತನೇ ಹಿರಿಯವರು. ನಿನಗೇನು ಹೊತ್ತು? ನೀನು ಹೆರಿಗೆ ಬೇನೆಯಲ್ಲಿದ್ದೆ. ನನಗೆಲ್ಲ ಗೊತ್ತು. ದೊರೆ, ಮಂತ್ರಿ, ಕುಲಪುರೋಹಿತರ ಪಕ್ಷಪಾತದಿಂದ ಕೌಸಲ್ಯೆಯ ಮಗ ಹಿರಿಯನಾದನು. ರಾಮನ ಒಡೆತನದಲ್ಲಿ ಕೌಸಲ್ಯೆಯ ಕಾಲಿನ ಧೂಳಿನಂತೆ ನೀನು ತೊತ್ತಾಗುತ್ತೀಯೇ ಎನ್ನುತ್ತಾಳೆ. ಹುಡಿಸೇರಿ ಹಾಳಾಗಿ ಗತಿಗೆಡದಿರು. ಕಾಲ ಮಿಂಚಿ ಹೋದ ಮೇಲೆ ಕೊರಗಿ ಫಲವೇನು? ಎಂದು ಉರಿಯುವ ಬೆಂಕಿಗೆ ತುಪ್ಪವನ್ನು ಹೊಯ್ಯುವಂತೆ ತನ್ನ ಕನಸನ್ನೂ ಸೇರಿಸುತ್ತಾಳೆ.

ಮಂಥರೆಯ ದುರ್ಬೋಧನೆಯಿಂದ ಕೈಕೇಯಿಯ ಮನಸ್ಸು ಬದಲಾಯಿತು. ನೀರಿನಲ್ಲಿ ಮುಳುಗುತ್ತಿರುವವನು ಪ್ರಾಣರಕ್ಷಣೆಗೆ ಮೊಸಳೆಯನ್ನು ತಬ್ಬುವಂತೆ ಕೈಕೇಯಿ ತನ್ನ ದಾಸಿಯನ್ನು ಅಪ್ಪಿಕೊಂಡಳು. ಕೈಕೇಯಿಯು ಮಂಥರೆಯ ಹಿಡಿತಕ್ಕೆ ಸಿಕ್ಕಿದಾಗ ಮಂಥರೆ 'ದುಡುಕಬೇಡ; ದುಡುಕಿ ತರುವಾಯ ನನ್ನನ್ನು ದೂರಬೇಡ, ನಿರ್ಣಯಕ್ಕೆ ಬರುವ ಮುನ್ನ ನಾಲ್ಕಾರು ಬಾರಿ ಯೋಚಿಸು. ಭರತನ ಮೇಲಿನ ಮಮತೆಯಿಂದ ಇಷ್ಟು ನುಡಿದನಲ್ಲದೆ ರಾಮನ ಮೇಲಣ ದ್ವೇಷದಿಂದಲ್ಲ' ಎನ್ನುತ್ತಾಳೆ. ಈಗಲೇ ಕೋಪಗೃಹವನ್ನು ಪ್ರವೇಶಿಸು, ನಿನ್ನಿಷ್ಟ ನೆರವೇರುವವರೆಗೆ ಹೊರಗೆ ಬರಬೇಡವೆನ್ನುತ್ತಾಳೆ.

ಮುಂದೆ ಭರತನು ಬಂದಿರುವ ಸುದ್ದಿಯನ್ನು ತಿಳಿದು ಅತ್ಯಂತ ಸಂತಸದಿಂದ ಬಂದ ಮಂಥರೆಗೆ ಕೋಪಾವಿಷ್ಟನಾಗಿ ಸಾಗುತ್ತಿದ್ದ ಶತ್ರುಘ್ನನು ರಾಮ ಎಲ್ಲಿ? ದೇವಿ ಸೀತೆಯನ್ನು ಎಲ್ಲಿಗಟ್ಟಿದೆ? ಅಯ್ಯನನ್ನು ಏಕೆ ಕೊಂದೆ? ಎಂದು ಬೆನ್ನಿನ ಮೇಲೆ ಬಡಿದನು. ನೋವನ್ನು ತಡೆಯಲಾರದೆ ಮಂಥರೆಯು ಗೋಳಾಡಿದಳು. ದೊಡ್ಡಮ್ಮನ ಬಳಿ ಸಾಗುತ್ತಿದ್ದ ಭರತನಿಗೆ ಮಂಥರೆಯ ಕರುಣಾಕ್ರಂದನ ಕೊರೆಯಿತು. ಬೇಟೆನಾಯಿಗೆ ಸಿಕ್ಕಿದ ಮರಿಯನ್ನು ರಕ್ಷಿಸಲು ರೌದ್ರಾವೇಶದಿಂದ ಮುನ್ನುಗ್ಗುವ ಹಂದಿಯಂತೆ ಧ್ವನಿ ಕೇಳಿಬಂದ ಕಡೆ ನುಗ್ಗಿದನು. ಆದರೆ ಮಂಥರೆಯನ್ನು ಕಂಡ ಕೂಡಲೇ ನೆನಪು ಮರುಕಳಿಸಿ ಕರುಣೆ ಹಿಂಜರಿಯಿತು. 'ಅಯ್ಯೋ ದಮ್ಮಯ್ಯ,

ಅಣ್ಣಯ್ಯ ರಕ್ಷಿಸೋ' ಎಂದು ಕೈ ನೀಡಿ ತನ್ನ ಮರೆಗೆ ಬರುತ್ತಿದ್ದ ಪ್ರೇಮರಾಹುವನ್ನು ಪಕ್ಕಕ್ಕೆ ಸರಿಸುತ್ತ ಗದ್ಗದಿತನಾಗಿ 'ಎಲೈ ಕುರೂಪಿ, ತೊಲಗಾಚೆ, ಅಯ್ಯೋ, ಈ ಪ್ರೇಮದ ಹುತ್ತದಲ್ಲಿ ಹಗೆಯ ವಿಷ ಸರ್ಪ ಹೆಡೆಯೆತ್ತಿ ಕಚ್ಚಿತೆಂಬುದನ್ನು ಹೇಗೆ ನಂಬಲಿ? ಇಂದಿನ ತನಕ ನಿನ್ನಲ್ಲಿ ವಿಕೃತಿಯನ್ನೇ ಕಾಣಲಿಲ್ಲ. ಈಗ ವಿಕಾರವೇ ಮೈವೆತ್ತು ಕರ್ಕಶವಾಗಿ ಹಲ್ಗಿರಿದು ನಿಂತಂತೆ ಕಾಣುತ್ತಿದ್ದೀಯ. ನಿಜವಾಗಿಯೂ ವಿಕಾರ ಅಂತರಂಗಕ್ಕೆ ಸಂಬಂಧಿಸಿದ್ದೇ ಹೊರತು ಹೊರಮೈಗಲ್ಲ. ಎಲೌ ಮಂಥರೆ, ಇಗೋ, ನಿನ್ನನ್ನು ಬಿಟ್ಟೆ. ನೀರನ್ನು ಬಿಟ್ಟ ತಾವರೆಗೆ ರವಿ ಎಂತು ಹಗೆಯೋ, ರಾಮನನ್ನು ನೂಕಿದ ಎದೆಗೆ ನಾನಂತು ಹಗೆ ಎನ್ನುತ್ತ ಸೋದರನ ಹೆಂಗೊಲೆ ಅಣ್ಣನಿಗೆ ಸಮ್ಮತವಲ್ಲ ಎಂದು ತಿರುಗಿ ನೋಡದೆ ಮುನ್ನಡೆಯುತ್ತಾನೆ ಭರತ.

ಭರತನ ಪ್ರೀತಿಯೆಂದೇ ನೆಮ್ಮಾಗಿದ್ದ ಕುಬ್ಜೆ ಮಂಥರೆಯ ಆತ್ಮ ಬುಡಗೆಟ್ಟುರುಳಿತು. ಪುಡಿಪುಡಿಯಾಯಿತು; ಬೂದಿಯಾಯಿತು. ಕವಿಗೆ ಮಂಥರೆಯ ಬಗ್ಗೆ ಕರುಣೆಯಿದೆ. ಲೋಕರೋಷಕ್ಕೆ ಆಹುತಿಯಾಗಿ ಬಿದ್ದ ನಿನ್ನ ಬೂದಿಯನ್ನು ಕಣ್ಗಂತೆ ತೊಳೆದು, ಕಾವ್ಯ ಮಹಿಮಾ ಸಿಂಧುತೀರ್ಥಕ್ಕೊಯ್ಯುತ್ತದೆ. ಕಾವ್ಯ ಕರುಣಾರಸದಲ್ಲಿ ಮುಳುಗಿದ ನಿನ್ನ ವಿಕಾರ ರೂಪ ತೊಲಗಿ, ಹೃದಯದ ಮನೋರೂಪ ಮತ್ತೆ ಮೆರೆಯದೇನು. ತನ್ನ ಪುರುಷಾರ್ಥ ಸಾಧನೆಗಾಗಿ, ಸಂಪತ್ತಿನ ಸಾಧನೆಗಾಗಿ, ಸ್ವಸುಖಕ್ಕಾಗಿ ಮಂಥರೆ ಉಪದೇಶ ಹೇಳಿದಳೆ? ಹುಟ್ಟಿದಂದಿನಿಂದ ಪರರ ಚೆಲುವಿನಲ್ಲಿ ತನ್ನ ಚೆಲುವನ್ನು ಕಂಡು, ಪರರ ಸುಖದಲ್ಲಿ ತನ್ನ ಸುಖವನ್ನು ಕಂಡು, ತಾನು ಸಾಕಿದ ಒಡತಿಗೆ ಮತ್ತು ಆಕೆಯ ಮಗನಿಗೆ ಒಳ್ಳೆಯದನ್ನು ಮಾಡ ಹೊರಟ ಮಂಥರೆಯ ಶುದ್ಧ ಚೇತನದಲ್ಲಿ ಸ್ವಾರ್ಥದೋಷಕ್ಕೆ ಎಡೆಯುಂಟೇ?

ಕವಿ ಮತ್ತು ಪ್ರಶ್ನಿಸುತ್ತಾನೆ. ಓ ಕುಬ್ಜೆ ಮಂಥರೆ, ಪ್ರೇಮ ಭೈರವಿಯೆ, ಶತ್ರುಘ್ನನ ಕಶಾಘಾತದಿಂದ ಮೈಮರೆತಿದ್ದ ನೀನು ಮುಂದೆ ಏನಾದೆ? ಅಲ್ಲಿಂದ ನೀನೆಲ್ಲಿಗೆ ಹೋದೆ? ನಿನ್ನನ್ನೇನಾದರೂ ಭೂಮಿ ನುಂಗಿತೇ? ನೋವಿನುರಿಗೆ ನೀನು ಆಹುತಿಯಾದೆಯೊ? ನಿರಾಶೆಗೆ ಬಲಿಯಾದೆಯೋ? ಎಂಬುದಾಗಿ.

ಶತ್ರುಘ್ನನ ಹಸ್ತಾಘಾತ ಮತ್ತು ಭರತನ ತಿರಸ್ಕಾರದಿಂದ ಮೂರ್ಛಿತಲಾಗಿದ್ದ ಮಂಥರೆ ಮೈ ತಿಳಿದು ಏಳುವ ಹೊತ್ತಿಗೆ ಆ ಅರಮನೆ ಸ್ಮಶಾನಶೂನ್ಯವಾಗಿ ಮಂಥರೆಯನ್ನು ಅಪಹಾಸ್ಯ ಮಾಡುವಂತಿತ್ತು. ಹಸಿಯ ಗಾಯಗಳಿಂದ ಬಿಸಿರಕ್ತ ಸೋರುತ್ತಿರಲು ಗೂನಿ ಗೋರಿಯಿಂದೇಳುವ ಪ್ರತೀಕಾರ ಪ್ರೇತದಂತೆ ನಿಟ್ಟುಸಿರು ಬಿಡುತ್ತ ಎದ್ದು ಕುಳಿತಳು. ತನ್ನ ವಿಷವನ್ನು ತಾನೇ ಹೀರಲೆಳಸುವ ಸರ್ಪಿಣಿಯಂತೆ ಮೇಲೆದ್ದಳು. 'ಹಾ, ನನ್ನ ಕೈಕೇಯಿಯ ಮಗನಿಗೆ, ನನ್ನ ಜೀವಾನಂದಕರವಾದ ಭರತದೇವನಿಗೆ ನೆಲದ ಸಿರಿ ದೊರಕಲಿ, ಸುಖವಾಗಿ ಬಾಳಲಿ ಎಂದು ಕಾಡಿಗಟ್ಟಿದೆನಲ್ಲದೆ? ಅಹುದು ಮತ್ತೆ ಆ ರಾಮನನ್ನು ಮನೆಗೆ ಕರೆತಂದರೆ ಕಂದ ಭರತನಿಗೆ ಸಂತೋಷವಾಗುತ್ತದೆ. ಕೈಕೇಯಿಗೆ ಉತ್ಸವವಾಗುತ್ತದೆ, ನನಗೆ ಮೊದಲಿನಂತೆ ಅವರೆಲ್ಲರ ಪ್ರೇಮಭಾಗ್ಯ ಲಭಿಸುತ್ತದೆ. ಎಂದು ನೆನಯುತ್ತ ಪುಣ್ಯವನ್ನು ಹುಡುಕಿಕೊಂಡು ಹೋಗುವ ಪಾಪದಂತೆ ಹೊರಗೆ ನಡೆದಳು.

ಮಂಥರೆಯು ಬೀದಿಯಲ್ಲಿ ಮುಂದುವರೆಯುತ್ತಿದ್ದಾಗ ಪಟ್ಟಣಿಗರು ಅವಳ ಮೇಲೆ ಕಲ್ಲು ಮಣ್ಣುಗಳನ್ನೆಸೆದರು, ಮುಖದ ಮೇಲೆ ಉಗುಳಿದರು, ಹರಿದರಿವೆಯ ನೆತ್ತರು ಸೋರುತ್ತಿದ್ದ ಗಾಯಗಳ ಆ ಮಂಥರೆಯು ಇಷ್ಟೆಲ್ಲ ಹಿಂಸೆ ಅನ್ಯಾಯಗಳನ್ನು ಲೆಕ್ಕಿಸದೆ ಅಯೋಧ್ಯೆಯನ್ನು ತೊರೆದಳು. ಅಮೃತಕ್ಕಾಗಿ ಕಡಲನ್ನು ಕಡೆದ ದೇವ ದೈತ್ಯರಿಂದಲೇ ವಿಷದ ಸೃಷ್ಟಿಯೂ ಆಯಿತಲ್ಲವೆ?

ಒಟ್ಟಿನಲ್ಲಿ ಹೃದಯಪೀಠದಲ್ಲಿ ರಾಮನನ್ನಿರಿಸಿಕೊಂಡು ಮಂಥರೆ ಕತ್ತಲಿಳಿಯುವ ತನಕ ನಡೆದಳು. ಬೆಳಗಿನಿಂದ ಪೆಟ್ಟನ್ನಲ್ಲದೆ ಬೇರೇನನ್ನು ತಿಂದಿಲ್ಲ; ಕಣ್ಣೀರಲ್ಲದೆ ಬೇರೇನನ್ನೂ ಕುಡಿದಿಲ್ಲ. ಹೊಟ್ಟೆ ಬೆನ್ನಿಗಂಟಿದೆ, ಗಂಟಲು ತಾರಿದೆ, ರಕ್ತ ಬಿಗಿದು ತನು ಸೊರಗಿದೆ, ಪ್ರಜ್ಞೆ ತೂಕಡಿಸುತ್ತಿದೆ. ಆದರೂ ತನ್ನ ವ್ರತವನ್ನೇ ಊರುಗೋಲಾಗಿಸಿಕೊಂಡು ರಾಮ ರಾಮ ಎಂದು ಕರೆಯುತ್ತ ನಡೆದಳು, ತೆವಳಿದಳು, ಓ ನನ್ನ ಭರತನಣ್ಣಯ್ಯಾ ಓ ರಾಮಯ್ಯ! ಎಲ್ಲಿರುವೆ ಹೇಳು? ದಮ್ಮಯ್ಯ, ಎಲ್ಲಿರುವೆ ಹೇಳಯ್ಯಾ? ಎಂದು ಕೂಗುತ್ತ ಕಾಡಿನಲ್ಲಿ ಮುಂದುವರೆದಳು. ಅವಳ ಹೃದಯ ಪರಿವರ್ತನೆಯ ಸಂಕ್ರಾಂತಿ ಭೂಮಿಯ ಜನರಿಗೆ ತಿಳಿಯದಿದ್ದರೂ, ಸಹಸ್ರ ಸಹಸ್ರ ನಕ್ಷತ್ರಗಳಿಂದ ತುಂಬಿರುವ ಬಾನಿಗೆ ತಿಳಿಯದೆ? ಮಂಥರೆಯ ಬಾಹ್ಯಪ್ರಜ್ಞೆ ಶೂನ್ಯವಾಗಿದ್ದರೂ ಅಂತರಾತ್ಮ ಪ್ರಬುದ್ಧವಾಗಿತ್ತು. ದೂರದಲ್ಲಿ ಕಂಡ ಜ್ಯೋತಿಯೊಂದನ್ನು ರಾಮನೆಂದೇ ಬಗೆದು ಓ ಭರತನಣ್ಣಯ್ಯ, ಓ ನನ್ನ ರಾಮಯ್ಯ, ಬಾರಯ್ಯ ದಮ್ಮಯ್ಯ ಎಂದು ಉನ್ಮತ್ತಳಂತೆ ಕುಣಿಯುತ್ತ ಅಪ್ಪಿಕೊಳ್ಳಲು ಹಾತೊರೆದು ಮುನ್ನುಗ್ಗಿದಳು. ಆ ದಾವಾಗ್ನಿ ಪ್ರಳಯ ಕಾಲದ ಅಗ್ನಿಯಂತೆ ಕೋಟಿ ಕೋಟಿ ಮಿಂಚುಗಳನ್ನು ಹೋಲುತ್ತಿದ್ದ ಜಿಹ್ವೆಯನ್ನು ಚಾಚಿ ಮಂಥರೆಯನ್ನು ಕಬಳಿಸಿತು. ಮಂಥರೆಯು ಆ ಅಗ್ನಿಯಲ್ಲಿ ಚಿಟ್ಟೆ ಸೀದಂತೆ ಸುಟ್ಟು ಹೋದಳೂ! ಆದರೇನು? ಅಗ್ನಿ ಸಂಸರ್ಗದಿಂದ ಶ್ರೀಗಂಧದ ವಕ್ರರೂಪವಳಿದು ಪರಿಮಳವಿಕ್ಕಿ ನಾಡು ನಡೆಲ್ಲವನ್ನು ತುಂಬುವಂತೆ, ಮಂಥರೆಯ ಗುಜ್ಜು ಮೈಯ್ಯಳಿದು, ಅವಳ ಅಂತರಾತ್ಮದ ದಯಾಲಕ್ಷ್ಮಿಯ ಅಮೃತಮಯ ಪುಣ್ಯ ಸೌಂದರ್ಯ ಲೋಕಲೋಕಾಂತರಗಳಲ್ಲಿ ವ್ಯಾಪಿಸದಿರುವುದೇ?

**ಅಹಲ್ಯಾ**

**'ನರ ವಿನೋದ ವಿಚಿತ್ರ ಲೀಲಾ ಚರಿತ ವಿಷ್ಣು ತ್ರಾಹಿ ವಿಶ್ವಂಭರ ಭವಾರಿ,**

**ತ್ರಾಹಿ ಸರ್ವೇಶ್ವರ ಸದಾನಂದ ಕ್ಷರ ರಹಿತ ಅಕ್ಷಯನನಾಹತ,**

**ಹರವಿರಿಂಚಾತ್ಮಕ ಪರಾವರ ಪರಮಗುಣನಿಧಿ ಜಯ ಜಯವೆಂದೆರಗಿದಳು'.**

ಶ್ರೀರಾಮನ ಚರಣಗಳಿಗೆರಗಿದ ಅಹಲ್ಯೆ ಹೃದಯದುಂಬಿ ಕೃತಜ್ಞತೆಯಿಂದ ರಾಮನಿಗೆ ಹೇಳಿದ ಮಾತು. 'ಶಾಪದಿಂದ ಕಲ್ಲಾಗಿದ್ದ ಅಹಲ್ಯೆ ಎನ್ನುವುದಕ್ಕಿಂತ ಅಪವಾದವೆಂಬ ಬಂಡೆಯಿಂದ ಚೈತನ್ಯರಹಿತಳಾಗಿದ್ದವಳಲ್ಲಿ ಶಕ್ತಿತುಂಬಿ ಶಾಪ ವಿಮೋಚನೆ ಮಾಡಿದವನು ರಾಮ. ತಪ್ಪು ಮಾಡುವುದು

ಮಾನವ ಸಹಜ ಗುಣ. ತಾನು ಮಾಡಿದ ತಪ್ಪಿಗೆ ಪಶ್ಚಾತ್ತಾಪ ಪಟ್ಟು ಶಿಕ್ಷೆಯನ್ನು ಅನುಭವಿಸಿದ ಅಹಲ್ಯೆ ಕೇವಲ ತನ್ನಿಚ್ಛೆಯಿಂದ ತಪ್ಪು ಮಾಡಿಲ್ಲವೆಂಬುದು ಚಿಂತನಾರ್ಹ. ಇಂದ್ರನ ಕುತಂತ್ರದಿಂದಾಗಿ ಅಹಲ್ಯೆ ಬಲಿಪಶುವಾದಳು ಎನ್ನುವುದು ಸತ್ಯ. ಆದರೂ ರಾಮ ಪಾದಸ್ಪರ್ಶದಿಂದ ಪುನೀತಳಾದ ಅಹಲ್ಯೆಯ ಬಾಯಿಂದ ಕುಮಾರ ವಾಲ್ಮೀಕಿ ಹೇಳಿಸಿರುವ ಮಾತು ಕರ್ಣಾನಂದಕರ.

**ವಾಲ್ಮೀಕಿ ರಾಮಾಯಣ**

ವಿಶ್ವಾಮಿತ್ರ ಋಷಿಗಳು ರಾಮಲಕ್ಷ್ಮಣರನ್ನು ಗೌತಮವನದ ಬಳಿ ಕರೆತರುತ್ತಿದ್ದಾಗ ಅಹಲ್ಯೆಯ ವೃತ್ತಾಂತವನ್ನು ಹೇಳುತ್ತಾರೆ. ನಂತರ ಅವಳ ಶಾಪೋದ್ಧಾರದ ಬಗ್ಗೆಯೂ ತಿಳಿಸಿರುತ್ತಾರೆ.

ರಾಜಕುಮಾರ, ಗೌತಮಋಷಿಯು ಪತ್ನಿಯಾದ ಅಹಲ್ಯೆಯೊಡನೆ ಈ ಆಶ್ರಮದಲ್ಲಿ ಬಹಳ ವರ್ಷಗಳವರೆಗೆ ತಪಸ್ಸನ್ನಾಚರಿಸುತ್ತಿದ್ದನು. ಒಂದು ಸಲ ಗೌತಮನು ಇಲ್ಲದ ಸಮಯದಲ್ಲಿ ಇಂದ್ರನು ಗೌತಮಮುನಿಯ ವೇಷದಲ್ಲಿ ಬಂದು ಅಹಲ್ಯೆಯನ್ನು ಕುರಿತು 'ಸುಂದರೀ, ನಾನು ನಿನ್ನ ಸಂಗವನ್ನು ಬಯಸುತ್ತೇನೆ. ಕಾಮಾರ್ಥಿಗಳು ಋತುಕಾಲವನ್ನೇ ನಿರೀಕ್ಷಿಸಬೇಕಾಗಿಲ್ಲ' ಎಂದನು. ಇಂದ್ರನು ಮುನಿಯ ವೇಷದಲ್ಲಿ ಬಂದಿದ್ದಾನೆಂದು ಅಹಲ್ಯೆಗೆ ತಿಳಿಯಿತು. ದೇವೇಂದ್ರನೊಡನೆ ಸಮಾಗಮವಾಗುವುದೆಂಬ ಆಸೆಯಿಂದ ಅವಳು ಬುದ್ಧಿಗೆಟ್ಟು ಒಪ್ಪಿದಳು. ಕಡೆಯಲ್ಲಿ ಸಂತುಷ್ಟಳಾಗಿ "ದೇವರಾಜ, ನಾನು ಕೃತಾರ್ಥಳಾದೆ. ಬೇಗನೆ ಇಲ್ಲಿಂದ ಹೊರಡು. ನಿನ್ನನ್ನೂ ನನ್ನನ್ನೂ ಗೌತಮನಿಂದ ರಕ್ಷಿಸಿಕೊಳ್ಳುವ ಭಾರ ನಿನಗೆ ಸೇರಿದ್ದು' ಎಂದಳು.[೪೭]

**ತುಲಸೀ ರಾಮಾಯಣ**

ಪಾವನವೂ, ಶೋಕವಿಮೋಚಕವೂ ಆದ ಶ್ರೀರಾಮನ ಪಾದವು ಸೋಂಕಿದಾಕ್ಷಣ, ಮಹಾತಪಸ್ವಿನೀಯಾದ ಅಹಲ್ಯೆಯು ಆ ಬಂಡೆಯಿಂದ ಒಡಮೂಡಿದಳು. ಭಕ್ತಜನ ಸುಖದಾಯಕನಾದ ಶ್ರೀರಾಮನನ್ನು ಕಂಡು ಆಕೆಯು ಕೈ ಜೋಡಿಸಿಕೊಂಡು ಅವನೆದುರಿಗೆ ನಿಂತುಕೊಂಡಳು. ಅತ್ಯಂತ ಭಾಗ್ಯಶಾಲಿನಿಯಾದ ಅಹಲ್ಯೆಯು ಪ್ರಭುಚರಣಗಳಲ್ಲಿ ಕೆಡೆದು ಬಿದ್ದಳು. ಅವಳ ಕಣ್ಣುಗಳಿಂದ ಪ್ರೇಮಾಶ್ರುಗಳ ಕೋಡಿಯೇ ಹರಿಯಿತು. ಮತ್ತೆ ಅವಳು ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು ಪ್ರಭುವನ್ನು ಗುರುತಿಸಿದಳು. ಶ್ರೀರಘುಪತಿಯ ಕೃಪೆಯಿಂದ ಆಕೆಯು ಭಕ್ತಿಯನ್ನು ಪಡೆದುಕೊಂಡಳು. ಆಗ ಆಕೆಯು ಅತ್ಯಂತ ನಿರ್ಮಲವಾದ ವಾಣಿಯಿಂದ ಈ ಪ್ರಕಾರ ಸ್ತುತಿಸತೊಡಗಿದಳು – "ಓ ಜ್ಞಾನಗಮ್ಯನಾದ ರಘುನಾಥನೇ! ನಿನಗೆ ಜಯವಾಗಲೀ, ನಾನು ಸಹಜ ಅಪವಿತ್ರವಾದ ಹೆಣ್ಣು, ನೀನು ಜಗತ್ಪಾವನಮೂರ್ತಿಯೂ, ಭಕ್ತಜನ ಸುಖದಾಯಕನೂ, ರಾವಣಾರಿಯೂ ಆಗಿರುವೆ. ಓ

ರಾಜೀವಲೋಚನಾ! ಜನನ-ಮರಣ ಮೃತ್ಯುವಿನಿಂದ ಬಿಡಿಸುವವನೇ! ನಾನು ನಿನಗೆ ಶರಣು ಬಂದಿದ್ದೇನೆ; ಕಾಪಾಡು, ಕಾಪಾಡು, ಮುನಿವರರು ಕೊಟ್ಟ ಶಾಪವು ನನಗೆ ವರವಾಗಿಯೇ ಪರಿಣಮಿಸಿತು. ಅದನ್ನು ಋಷಿಯ ಅನುಗ್ರಹವೆಂದೇ ತಿಳಿಯುತ್ತೇನೆ. ಏಕೆಂದರೆ, ಅದರಿಂದ ನಾನು ಭವಲೋಚನನಾದ ಶ್ರೀಹರಿಯನ್ನು ಕಣ್ತುಂಬ ಕಾಣುವಂತಾಯಿತು. ನಿನ್ನ ದರ್ಶನಭಾಗ್ಯವು ಎಲ್ಲಕ್ಕೂ ಮಿಗಿಲಾದ ಲಾಭವೆಂಬುದನ್ನು ಶಂಕರನು ತಿಳಿದಿರುವನು. ಪ್ರಭುವೇ! ನಾನು ಅತ್ಯಂತ ಅಮಾಯಕಳು. ನನಗೆ ಒಂದು ವರವನ್ನು ಕರುಣಿಸು. ನನ್ನ ಮನಸ್ಸೆಂಬ ಮಧುಕರವು ಯಾವಾಗಲೂ ನಿನ್ನ ಪಾದಕಮಲಗಳ ರಸಾಸ್ವಾದನೆ ಮಾಡುತ್ತಿರುವಂತೆ ಅನುಗ್ರಹಿಸು. ಇದಲ್ಲದೆ ಬೇರಾವ ವರವೂ ನನಗೆ ಬೇಡ. ನಿನ್ನ ಚರಣಗಳಿಂದಲೇ ಪರಮಪವಿತ್ರವಾದ ಗಂಗೆಯು ಉದ್ಭವಿಸಿರುವಳು. ಪರಶಿವನು ಅದನ್ನು ತನ್ನ ಜಟಾಜೂಟದಲ್ಲಿ ಧರಿಸಿಕೊಂಡಿರುವರು. ನಿನ್ನ ಪಾದಪದ್ಮವನ್ನು ಬ್ರಹ್ಮನೂ ಕೂಡ ಭಕ್ತಿಯಿಂದ ಸೇವಿಸುವನು. ಅಂತಹ ನಿನ್ನ ಪಾದವನ್ನು ನನ್ನ ತಲೆಮೇಲೆ ಇರಿಸಿದೆಯಲ್ಲ! ಇದಕ್ಕಿಂತ ಮಿಗಿಲಾದ ಭಾಗ್ಯವಾದರೂ ಏನಿದೇ?" ಈ ಪ್ರಕಾರ ಸ್ತುತಿಸುತ್ತಾ ಪದೇ-ಪದೇ ಭಗವಂತನ ಚರಣಗಳಿಗೆ ನಮಸ್ಕರಿಸುತ್ತಾ ಮನೋವಾಂಛಿತ ವರವನ್ನು ಪಡೆದು ಅಹಲ್ಯೆಯು ಮಹದಾನಂದದಿಂದ ಪತಿಯ ಬಳಿಗೆ ಹೋದಳು.[೪೮]

**ಮಂಡೋದರಿ**

ಮಂಡೋದರಿಯು[೪೯] ರಾಕ್ಷಸ ಶಿಲ್ಪಿಯಾದ ಮಯಾಸುರನ ಮಗಳು. ಈಕೆಯ ತಾಯಿ ಹೇಮೆಯೆಂಬ ಅಪ್ಸರೆಯಾಗಿದ್ದಳು. ರಾವಣನು ಮಂಡೋದರಿಯನ್ನು ವಿವಾಹವಾದನು. ಮುನಿಯೊಬ್ಬನು ಲಕ್ಷ್ಮಿಯನ್ನು ಪುತ್ರಿಯಾಗಿ ಪಡೆಯುವ ಆಶಯದಿಂದ ಮುನಿಗಳು ಮಂತ್ರಿಸಿದ ರಕ್ತವನ್ನು ಒಂದು ಕಲಶದಲ್ಲಿಟ್ಟಿದ್ದರು. ದಿಗ್ವಿಜಯಕ್ಕೆ ಹೋಗಿದ್ದ ರಾವಣನು ಅದನ್ನು ತಂದು ಮಂಡೋದರಿಯ ಕೈಗೆ ನೀಡಿ ಅದನ್ನು ಕುಡಿಯಬಾರದೆಂದು ತಿಳಿಸಿ ಹೋದನು. ಮಂಡೋದರಿಯು ರಾವಣನು ಪರಸ್ತ್ರೀಯರನ್ನು ಹಿಂಸಿಸುವುದನ್ನು ಸಹಿಸಲಾಗದೆ ಆ ಕಲಶದಲ್ಲಿದ್ದ ರಕ್ತವನ್ನು ವಿಷವೆಂದು ಭಾವಿಸಿ ಕುಡಿದುಬಿಟ್ಟಳು. ಪರಿಣಾಮವಾಗಿ ಮಂಡೋದರಿಯು ಗರ್ಭಿಣಿಯಾದಳು. ಕುರುಕ್ಷೇತ್ರದ ಬಳಿ ವಿಮಾನದಲ್ಲಿ ಬರುತ್ತಿರುವಾಗ ನಾಚಿಕೆಯಿಂದ ಪ್ರಸವವಾಗಿ ಒಂದು ಹೆಣ್ಣು ಶಿಶುವನ್ನು ಹಡೆದಳು. ಅದನ್ನು ಪೆಟ್ಟಿಗೆಯಲ್ಲಿ ಹಾಕಿ ಮುಚ್ಚಿಟ್ಟು ಕುರುಕ್ಷೇತ್ರದಲ್ಲಿಯೇ ಹುದುಗಿಟ್ಟಳು. ಆ ಶಿಶುವೇ ಭೂಮಿಯಲ್ಲಿ ಜನಕರಾಜನಿಗೆ ಸಿಕ್ಕಿದ ಸೀತೆಯಾಗಿದ್ದಾಳೆ. ಈ ವಿವರಣೆಯು ಆನಂದ ರಾಮಾಯಣದ ಅನುಸಾರವಾಗಿದೆ.

ಮಂಡೋದರಿಯು ವಾಲ್ಮೀಕಿ ರಾಮಾಯಣದಲ್ಲಿ ರಾವಣನು ಹತನಾದ ಸಂದರ್ಭದಲ್ಲಿ ಬರುತ್ತಾಳೆ. ರಾಮನು ಮಾನವನಲ್ಲವೆಂದು ಬಾರಿ ಬಾರಿಗೂ ಹೇಳಿಕೊಳ್ಳುತ್ತಾಳೆ. ರಾವಣನ ಪರಾಕ್ರಮವನ್ನು ಹೊಗಳುತ್ತಾಳೆ.

'ರಾಘವನೊಡನೆ ಹಗೆತನ ಬೇಡ' ಎಂದು ನಾನು ಹೇಳಿದರೂ ನನ್ನ ಮಾತನ್ನು ಕೇಳದೆ ಹೋದೆ. ಅದರ ಫಲ ಹೀಗಾಯಿತು. ಓ ರಾಕ್ಷಸೇಶ್ವರ, ನಿಷ್ಕಾರಣವಾಗಿ ಸೀತೆಯನ್ನು ಕಾಮಿಸಿದೆಯಲ್ಲ! ನಿಖಿಲೈಶ್ವರ್ಯ, ನೆಂಟರಿಷ್ಟರು, ಕಡೆಗೆ ನಿನ್ನ ದೇಹ, ಎಲ್ಲವುಗಳ ವಿನಾಶಕ್ಕಾಗಿ ನಿನಗೆ ಅವಳಲ್ಲಿ ಅಭಿಲಾಷೆ ಹುಟ್ಟಿತು.[೫೦]

ಕಾಂತ, ಸೀತೆ ನನಗಿಂತ ಮೇಲಾದವಳೇ? ಕುಲದಲ್ಲಾಗಲಿ ರೂಪಿನಲ್ಲಾಗಲಿ ವಿದ್ಯಾ ನೈಪುಣ್ಯದಲ್ಲಾಗಲಿ, ಅವಳು ನನ್ನನ್ನು ಮೀರಿಸಿದವಳೂ ಅಲ್ಲ, ನನಗೆ ಸಾಟಿಯೂ ಅಲ್ಲ! ಮೋಹಾಂಧನಾದ ನಿನಗೆ ಇದು ತಿಳಿಯಲಿಲ್ಲ. ಒಟ್ಟಿನಲ್ಲಿ ಸಕಲ ಜೀವಿಗಳಿಗೂ ಏನಾದರೊಂದು ನಿಮಿತ್ತವಿಲ್ಲದೆ ಸಾವು ಬರುವುದಿಲ್ಲ.[೫೧]

ಅಯ್ಯೋ- ನನ್ನ ಸ್ವಾಮಿಯೆ, ನಿನ್ನೊಡನೆ ಯಥೇಚ್ಛವಾಗಿ ವಿಹರಿಸುತ್ತಿದ್ದೆನು. ಕೈಲಾಸಗಿರಿಯಲ್ಲಿಯೂ ಮೇರುಮಂದರಶೈಲಗಳಲ್ಲಿಯೂ ಚೈತ್ರರಥವೇ ಮೊದಲಾದ ಸಕಲ ದೇವೋದ್ಯಾನಗಳಲ್ಲಿಯೂ ವಿಹರಿಸಿದೆನು. ನಾನಾ ಬಗೆಯ ಉಡಿಗೆ ತೊಡಿಗೆಗಳನ್ನು ಧರಿಸಿದೆನು. ಅನುರೂಪವಾದ ಪುಷ್ಪಕ ವಿಮಾನವನ್ನೇರಿ ವಿವಿಧ ದೇಶಗಳನ್ನು ನೋಡುತ್ತ, ಎಣೆಯಿಲ್ಲದ ವೈಭವದಿಂದ ನಿನ್ನೊಡನೆ ಮೆರೆದೆನು. ಅಂತಹ ನಾನು, ಓ ವೀರಾಗ್ರಣಿ, ಸರ್ವ ಭೋಗಗಳಿಂದಲೂ ವಂಚಿತಳಾದೆನು. ನೀನು ಮೃತನಾದ್ದರಿಂದ, ಏನನ್ನೂ ಕಾಣದ ಒಬ್ಬ ಬಡಹೆಂಗಸೋ ಎಂಬಂತಾದೆನು. ಛೀ! ಅತಿ ಚಂಚಲವಾದ ವೈಭೋಗಗಳಿಗೆ ಧಿಕ್ಕಾರ![೫೨]

ಅಯ್ಯೋ - ಅಕಟ, ನನಗೆ ವೈಧವ್ಯ ಬಂದಿತು. ನಿನಗೆ ಈ ದುರವಸ್ಥೆ ಬಂದಿತು. ಮೂಢಾತ್ಮಳಾದ ನಾನು ಈ ದುರ್ದಶೆ ಬರುವುದೆಂದು ಎಂದೂ ಎಣಿಸಲಿಲ್ಲ. 'ನನ್ನ ತಂದೆ ದಾನವೇಶ್ವರ, ನನ್ನ ಪತಿ ರಾಕ್ಷಸೇಶ್ವರ. ನನ್ನ ಮಗ ದೇವೇಂದ್ರನನ್ನು ಜಯಿಸಿದ ವೀರಾಗ್ರಗಣ್ಯ' ಎಂದು ಗರ್ವಿಷ್ಠಳಾಗಿದ್ದೆನು.[೫೩]

ಹಾ ಮಹಾರಾಜ, ರಕ್ತದಲ್ಲಿ ನೆನೆದು ರಕ್ತವರ್ಣವಾಗಿ ಮಲಿನವಾಗಿದೆಯಲ್ಲ ನಿನ್ನ ದೇಹ. ವಜ್ರಾಯುಧದಿಂದ ಸೀಳಲ್ಪಟ್ಟ ಪರ್ವತದಂತೆ ಆಗಿರುವೆಯಲ್ಲ! ಅಯ್ಯೋ, ಇದೆಲ್ಲವೂ ಕನಸಾಗಿರಬೇಕು. ಹೌದು, ಇದು ಕನಸೇ ಸರಿ! ರಾಮನು ನಿನ್ನನ್ನು ಬಂಧಿಸಬಲ್ಲನೇ? ಮೃತ್ಯುವಿಗೂ ಕಾಲಮೃತ್ಯುವಾಗಿದ್ದ ನೀನು ಮೃತ್ಯುವಿಗೆ ವಶವಾಗುವುದುಂಟೇ?[೫೪]

ಓ ರಾಕ್ಷಸೇಂದ್ರ, ಪತಿವ್ರತೆಯರೂ ಧರ್ಮನಿಷ್ಠರೂ ಗುರುಹಿರಿಯರ ಸೇವೆಯಲ್ಲಿ ನಿರತರೂ ಆದ ಬಹುಮಂದಿ ಕುಲಸ್ತ್ರೀಯರನ್ನು ನೀನು ವಿಧವೆಯರನ್ನಾಗಿ ಮಾಡಿದೆಯಲ್ಲವೆ? ಶೋಕಾರ್ತರಾದ ಆ

ಸಾಧ್ವಿಯರ ಶಾಪವು ನಿನಗೆ ತಟ್ಟಿತು. ಆದ್ದರಿಂದಲೇ ಈಗ ಪರಾಜಿತನಾದೆ. ನಿನ್ನಿಂದ ಅಪಕೃತರಾದ ಕುಲಾಂಗನೆಯರ ಶಾಪ ಈಗ ಫಲಿಸಿತು.[೫೫]

ಮಾಯಾಮೃಗದ ಕಪಟೋಪಾಯದಿಂದ ರಾಮನನ್ನು ಆಶ್ರಮದಿಂದ ಹೊರಗೆ ಹೋಗುವಂತೆ ಮಾಡಿ, ಅವನ ಮಡದಿಯನ್ನು ಅಪಹರಿಸಿದೆಯಲ್ಲ, ಅದೇ ನಿನ್ನ ಹೇಡಿತನಕ್ಕೆ ಗುರುತು! ಯುದ್ಧದಲ್ಲಿ ನೀನು ಹೇಡಿತನವನ್ನು ಯಾವಾಗಲಾದರೂ ತೋರಿಸಿದ್ದು ನನಗೆ ನೆನಪಿಲ್ಲ. ದುರ್ಭಾಗ್ಯದಿಂದಲೇ ಈಗ ಈ ಬುದ್ಧಿ ಉಂಟಾಯಿತು. ಕರ್ಮವು ಪಕ್ವವಾಯಿತೆಂಬುದರ ಚಿಹ್ನೆ ಇದು. ಮಾರೀಚ ಕುಂಭಕರ್ಣರರೂ ನನ್ನ ತಂದೆಯೂ ಹೇಳಿದರೂ ಅವರ ಹಿತವಾದವನ್ನು ನೀನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲವೆಂದು ಮಂಡೋದರಿಯು ರೋಧಿಸಿದಳು.[೫೬]

**ತುಳಸೀ ರಾಮಾಯಣ**

ರಾಮನು ಸೇತುವೆ ಕಟ್ಟಿ ಲಂಕೆಗೆ ಬಂದಿದ್ದಾನೆಂಬ ಸುದ್ಧಿಯನ್ನು ಕೇಳಿ ಮಂಡೋದರಿಯು ಗಂಡನ ಕೈ ಹಿಡಿದುಕೊಂಡು ತನ್ನ ಭವನಕ್ಕೆ ಕರೆದುಕೊಂಡು ಹೋದಳು. ಅವಳು ಪತಿಯ ಚರಣಗಳಿಗೆರಗಿ, ಅವನ ಮನಸ್ಸು ಕರಗುವಂತೆ ತನ್ನ ಸೆರಗೊಡ್ಡಿ ದೀನಳಾಗಿ ಇಂತೆಂದಳು. 'ಪ್ರಾಣೇಶ್ವರಾ! ಕ್ರೋಧವನ್ನು ತೊರೆದು ನನ್ನ ಮಾತನ್ನು ಆಲಿಸಿರಿ. ನಾಥಾ! ಬುದ್ಧಿ ಹಾಗೂ ಬಲದಿಂದ ಗೆಲ್ಲಬಹುದಾದಂತಹವರೊಂದಿಗೆ ವೈರವನ್ನು ಕಟ್ಟಿಕೊಳ್ಳಬೇಕು. ನಿಮಗೂ ಶ್ರೀರಾಮನಿಗೂ ಮಿಣುಕುಹುಳುವಿಗೂ ಸೂರ್ಯನಿಗೂ ಇರುವಷ್ಟು ಅಂತರವಿದೆ. ಅತ್ಯಂತ ಬಲಶಾಲಿಯಾದ ಮಧುಕೈಟಭರೆಂಬ ರಾಕ್ಷಸರನ್ನು ಸಂಹರಿಸಿದ ಶ್ರೀವಿಷ್ಣುರೂಪೀ ಅವನೇ. ವರಾಹ, ನೃಸಿಂಹರೂಪದಿಂದ ದಿತಿಸುತರಾದ ಹಿರಣ್ಯಾಕ್ಷ-ಹಿರಣ್ಯಕಶಿಪು ಇವರನ್ನು ಕೊಂದವನು ಅವನೇ. ವಾಮನನಾಗಿ ಬಲಿಚಕ್ರವರ್ತಿಯನ್ನು ಬಂಧಿಸಿದವನೂ, ಪರಶುರಾಮನಾಗಿ ಸಹಸ್ರ ಬಾಹುವನ್ನು ಸದೆಬಡಿದವನೂ ಆದ ಶ್ರೀ ಮಹಾವಿಷ್ಣುವೇ ಭೂಭಾರವನ್ನಿಳಿಸಲು ಶ್ರೀರಾಮನಾಗಿ ಅವತರಿಸಿದ್ದಾನೆ. ನಾಥಾ! ಕಾಲ, ಕರ್ಮ, ಜೀವಿಗಳು ಅವನ ಅಧೀನವೇ ಇವೆ. ನೀವೂ ಜೀವಿಗಳಾದ್ದರಿಂದ ನಿಮಗೂ ಪ್ರಭುವು, ಆದ್ದರಿಂದ ಅವನೊಡನೆ ವಿರೋಧವನ್ನು ಬಿಡಿರಿ. ಶ್ರೀರಾಮನ ಚರಣಕ್ಕೆರಗಿ ಅವನಿಗೆ ಶರಣಾಗಿ ಜಾನಕೀದೇವಿಯನ್ನು ಒಪ್ಪಿಸಿಬಿಡಿರಿ' ಎನ್ನುತ್ತಾಳೆ.

ನಾಥಾ! ಶ್ರೀರಘುರಾಮನು ದೀನದಯಾಳುವು. ಅವನು ತಪ್ಪದೆ ನಿಮ್ಮನ್ನು ಕ್ಷಮಿಸುವನು. ಕ್ರೂರವಾದ ಹುಲಿಯೂ ಕೂಡ ಶರಣಾಗತರನ್ನು ತಿನ್ನುವುದಿಲ್ಲ. ನೀವು ಮಾಡಬೇಕಾದುದೆಲ್ಲವನ್ನೂ ಮಾಡಿರುವಿರಿ. ದೇವತೆಗಳನ್ನು, ರಾಕ್ಷಸರನ್ನೇ ಅಲ್ಲ ಚರಾಚರ ಜಗತ್ತನ್ನೇ ಗೆದ್ದಿರುವಿರಿ. ದಶಾನನರೇ! ರಾಜರಾದವರು ವಾರ್ಧಿಕ್ಯದಲ್ಲಿ ರಾಜ್ಯವನ್ನು ತೊರೆದು ವನವಾಸಿಯಾಗಬೇಕೆಂಬ ನೀತಿಯನ್ನು ಸಜ್ಜನರು ಹೇಳುತ್ತಾರೆ. ಸ್ವಾಮೀ! ನೀವೂ ವನಕ್ಕೆ ತೆರಳಿ ಸೃಷ್ಟಿ, ಸ್ಥಿತಿ, ಲಯಕರ್ತನಾದ ಪರಮಾತ್ಮನನ್ನು ಭಜಿಸಿರಿ. ನಾಥಾ! ನೀವು

ಮಮಕಾರವನ್ನು ತ್ಯಜಿಸಿ, ಶರಣಾಗತವತ್ಸಲನಾದ ಶ್ರೀರಘುವೀರನನ್ನು ಭಜಿಸಿರಿ. ಅವನಿಗಾಗಿ ಮುನೀಶ್ವರರು ತಪಸ್ಸನ್ನಾಚರಿಸುತ್ತಾರೆ. ರಾಜರು ರಾಜ್ಯವನ್ನು ತ್ಯಾಗಮಾಡಿ ವಿರಾಗಿಗಳಾಗುತ್ತಾರೆ. ಅಂತಹ ಕೋಸಲಾಧಿಪತಿ ಶ್ರೀರಾಮನು ನಿಮ್ಮ ಮೇಲೆ ದಯೆಗೈಯ್ಯಲು ಬಂದಿರುವನು, ಪ್ರಿಯತಮಾ! ನೀವು ನನ್ನ ಮಾತನ್ನು ಕೇಳುವಿರಾದರೆ ನಿಮ್ಮ ಅತ್ಯಂತ ಪವಿತ್ರ, ಉಜ್ವಲ ಕೀರ್ತಿಯು ಮೂರುಲೋಕಗಳಲ್ಲಿ ಹಬ್ಬುವುದು’ ಎನ್ನುತ್ತಾಳೆ.

ಪತಿವ್ರತೆಯಾದ ಮಂಡೋದರಿಯು ಕಣ್ಣೀರು ತುಂಬಿಕೊಂಡು ಪತಿಯ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, ಕಂಪಿಸುತ್ತ ಪುನಃ ಹೀಗೆ ಹೇಳಿದಳು – ಹೇ ನಾಥಾ! ಶ್ರೀರಘುನಾಥನನ್ನು ಭಜಿಸಿ, ಪೂಜಿಸಿರಿ, ಅದರಿಂದ ನನ್ನ ಮಾಂಗಲ್ಯವು ಭದ್ರವಾಗಿ ಉಳಿದೀತು’[೫೭] ಎಂದಳು, ಆಗ ನಿನ್ನಲ್ಲಿ ಇಂತಹ ಭಯ ಬೇಡವೆಂದು ಸಮಾಧಾನಿಸಿದ ರಾವಣನು ಸಭಾಸ್ಥಾನಕ್ಕೆ ತೆರಳಿದನು.

ಸಂಜೆಯಾದುದನ್ನು ತಿಳಿದು ದಶಕಂಠ ರಾವಣನು ವಿಚಾರಗ್ರಸ್ಥನಾಗಿ ದುಗುಡದಿಂದ ತನ್ನ ಭವನವನ್ನು ಸೇರಿದನು. ಅಲ್ಲಿ ಮಂಡೋದರಿಯು ಅವನಿಗೆ ಪುನಃ ವಿವೇಕ ಹೇಳಿದಳು.[೫೮]

ಹೇ ಪ್ರಾಣಕಾಂತಾ! ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿ ನಿಮ್ಮ ದುರ್ಬುದ್ಧಿಯನ್ನು ಬಿಡಿರಿ. ನಿಮಗೂ ಶ್ರೀರಘುನಾಥನಿಗೂ ಸಮರ ಶೋಭಿಸದು. ಅವನೊಡನೆ ಯುದ್ಧಮಾಡಲು ನೀವು ಯೋಗ್ಯರಲ್ಲ. ಅವನ ತಮ್ಮನಾದ ಲಕ್ಷ್ಮಣನು ಎಳೆದ ಸಣ್ಣ ಗೆರೆಯನ್ನು ನೀವು ದಾಟಲಾರದೆ ಹೋದಿರಿ. ಇದು ನಿಮ್ಮ ಪೌರುಷ! ಆತನ ದೂತನೇ ಎಷ್ಟು ದೊಡ್ಡ ಕಾರ್ಯವೆಸಗಿದನು. ಅಂತಹ ಪ್ರಭುವನ್ನು ನೀವು ಯುದ್ಧದಲ್ಲಿ ಗೆಲ್ಲಬಲ್ಲಿರಾ? ಪ್ರಾಣಾನಾಥಾ! ಆ ಕಪಿಸಿಂಹ ಹನುಮಂತನು ಆಡುತ್ತಾಡುತ್ತಾ ಸಮುದ್ರವನ್ನು ಹಾರಿ ನಿಮ್ಮ ಲಂಕೆಯನ್ನು ನಿರ್ಭಯವಾಗಿ ಪ್ರವೇಶಿಸಿದನು. ಅಶೋಕವನದ ರಾಕ್ಷಸರನ್ನು ಸದೆಬಡಿದು, ಅದನ್ನು ಹಾಳುಗೆಡಹಿದನು. ನೀವು ನೋಡುನೋಡುತ್ತಿರುವಂತೆ ಅಕ್ಷಯಕುಮಾರನನ್ನು ಕೊಂದುಹಾಕಿದನು. ಲಂಕೆಯನ್ನು ಸುಟ್ಟು ಬೂದಿ ಮಾಡಿದನು. ಆಗ ನಿಮ್ಮ ಬಲ ಗರ್ವಗಳು ಎಲ್ಲಿಗೆ ಹೋಗಿತ್ತು? ಸ್ವಾಮಿ! ಈಗ ವ್ಯರ್ಥವಾಗಿ ಬಡಾಯಿ ಕೊಚ್ಚಿಕೊಳ್ಳಬೇಡಿ. ನನ್ನ ಮಾತನ್ನು ಶ್ರದ್ಧೆಯಿಂದ ಆಲಿಸಿರಿ ನಾಥಾ! ಶ್ರೀರಘುಪತಿಯನ್ನು ಬರಿಯ ಒಬ್ಬ ರಾಜನೆಂದು ಭಾವಿಸಬೇಡಿ. ಅವನು ಈ ಚರಾಚರ ಜಗತ್ತಿಗೆ ಒಡೆಯನೆಂದೂ, ಅದ್ವಿತೀಯ ಪರಾಕ್ರಮಶಾಲಿಯೆಂದೂ ತಿಳಿದುಕೊಳ್ಳಿರಿ. ಆತನ ಬಾಣದ ಪ್ರತಾಪವನ್ನು ಮಾರೀಚನು ತಿಳಿಸಿದ್ದನು. ಆದರೆ ನೀವು ಅವನ ಮಾತಿಗೂ ಕಿವಿಗೊಡಲಿಲ್ಲ. ಜನಕನ ಸಭೆಯಲ್ಲಿ ಲೆಕ್ಕವಿಲ್ಲದಷ್ಟು ರಾಜರು ಸೇರಿದ್ದರು. ಅಸಮಾನ ಬಲಶಾಲಿಗಳಾದ ನೀವು ಕೂಡ ಅಲ್ಲೇ ಇದ್ದಿರಿ. ಅಲ್ಲಿ ಶಿವಧನುರ್ಭಂಗಗೈದು ಅವನು ಸೀತೆಯನ್ನು ವಿವಾಹವಾದನು. ಆಗ ನೀವು ಅವನನ್ನು ಯುದ್ಧದಲ್ಲಿ ಏಕೆ ಗೆಲ್ಲಲಿಲ್ಲ? ಇಂದ್ರಪುತ್ರ ಜಯಂತನು ಆತನ ಬಲದ ರುಚಿಯನ್ನು ಕೊಂಚ ಕಂಡಿದ್ದಾನೆ. ಶ್ರೀರಾಮನು ಅವನನ್ನು ಹಿಡಿದು ಅವನ ಒಂದು ಕಣ್ಣು ಮಾತ್ರ ಕಿತ್ತು ಅವನಿಗೆ ಪ್ರಾಣದಾನ ಮಾಡಿದನು. ಶೂರ್ಪನಖಿಯ ದುರ್ದಸೆಯನ್ನು ನೀವು ಕಣ್ಣಾರೆ

ಕಂಡಿರುವಿರಿ. ಇಷ್ಟಾದರೂ ಆತನೊಡನೆ ಹೋರಾಡುವೆನು ಎಂದು ಹೇಳಲು ನಿಮಗೆ ನಾಚಿಕೆಯಾಗುವುದಿಲ್ಲವೆ?'[೫೯] ಎನ್ನುತ್ತಾಳೆ.

'ವಿರಾಧ, ಖರ-ದೂಷಣರನ್ನು ಕೊಂದು, ಲೀಲಾಜಾಲವಾಗಿ ಕಬಂಧನನ್ನು ವಧಿಸಿ, ಒಂದೇ ಬಾಣದಿಂದ ವಾಲಿಯನ್ನು ಯಮಸದನಕ್ಕೆ ಅಟ್ಟಿದನು. ನೀವು ಆ ರಾಮನ ಮಹತ್ವವನ್ನು ಮನದಟ್ಟು ಮಾಡಿಕೊಳ್ಳಿ.

ರಾಮನು ಆಯಾಸವಿಲ್ಲದೆ ಸಮುದ್ರಕ್ಕೆ ಸೇತುವೆ ನಿರ್ಮಿಸಿ, ತನ್ನ ಸೈನ್ಯದೊಂದಿಗೆ ಸುವೇಲಪರ್ವತದ ಮೇಲೆ ಬಂದಿಳಿದಿರುವನು. ಸೂರ್ಯವಂಶ ಶ್ರೇಷ್ಠನೂ, ಕರುಣಾಮಯನೂ ಆದ ಶ್ರೀರಾಮಚಂದ್ರ ಪ್ರಭುವು ನಿಮ್ಮ ಒಳಿತಿಗಾಗಿಯೇ ತನ್ನ ದೂತನನ್ನು ಕಳುಹಿಸಿದನು. ಆ ದೂತನು ತುಂಬಿದ ಸಭೆಯಲ್ಲಿ ಆನೆಗಳ ಸಮೂಹದಲ್ಲಿ ಸಿಂಹದಂತೆ ನಿಮ್ಮ ಬಲವನ್ನು ನಿಸ್ತೇಜಗೊಳಿಸಿದನು. ಹನುಮಂತ, ಅಂಗದರಂತಹ ಮಹಾಯೋಧರು ಅವನ ಬಳಿ ಅನೇಕ ಮಂದಿ ಸೇವಕರಿದ್ದಾರೆ ಅಂತಹ ಮಹಾವೀರನನ್ನು ನೀವು ಮಾತು ಮಾತಿಗೆ 'ಮಾನವನು, ತಾಪಸನು ಎಂದು ಹೇಳುತ್ತಿರುವಿರಲ್ಲ! ಅಭಿಮಾನ, ಗರ್ವ, ಮಮಕಾರ ಇವುಗಳ ಹೊರೆಯನ್ನು ವ್ಯರ್ಥವಾಗಿ ಹೊರುತ್ತಿರುವಿರಲ್ಲ! ಪ್ರಿಯತಮಾ! ನೀವು ಶ್ರೀರಾಮನಲ್ಲಿ ವೈರವನ್ನು ಕಟ್ಟಿಕೊಂಡಿರಿ. ಕಾಲಕ್ಕೆ ವಶನಾದ್ದರಿಂದ ನಿಮಗೆ ಜ್ಞಾನೋದಯವಾಗಲಿಲ್ಲ. ಕಾಲನು ತನ್ನ ದಂಡದಿಂದ ಯಾರನ್ನೂ ಬಡಿಯುವುದಿಲ್ಲ. ಅವನು ಧರ್ಮ, ಬಲ, ಬುದ್ಧಿ, ವಿಚಾರಗಳನ್ನು ಕಸಿದುಕೊಂಡು ಬಿಡುತ್ತಾನೆ. ನಾಥಾ! ಕಾಲಸನ್ನಿಹಿತವಾಗಿರುವವರಿಗೆ ನಿಮ್ಮಂತೆಯೇ ಬುದ್ಧಿಭ್ರಮಣೆಯಾಗುತ್ತದೆ'.[೬೦]

ನಿಮ್ಮ ಇಬ್ಬರು ಪುತ್ರರು ಕಾಲನಿಗೆ ಗ್ರಾಸವಾದರು. ಲಂಕೆಯು ಬೆಂಕಿಯ ಪಾಲಾಯಿತು. ಹೋಗಲಿಬಿಡಿ, ಆದದ್ದಾಯಿತು, ಪ್ರಿಯತಮಾ! ಈಗಲಾದರೂ ನಿಮ್ಮ ತಪ್ಪನ್ನು ತಿದ್ದಿಕೊಳ್ಳಿ. ಕೃಪಾಸಿಂಧುವಾದ ಶ್ರೀರಾಮನನ್ನು ಭಜಿಸಿ ವಿಮಲಕೀರ್ತಿಗೆ ಭಾಜರಾಗಿರಿ'.[೬೧] ರಾವಣನು ಮಂಡೋದರಿಯ ಈ ಯಾವ ಮಾತುಗಳನ್ನೂ ಲೆಕ್ಕಿಸದೇ ಹೋದನು.

ತನ್ನೆದುರಿಗೆ ಬಂದು ಬಿದ್ದ ಪತಿಯ ತಲೆಗಳನ್ನು ನೋಡುತ್ತಲೇ ಮಂಡೋದರಿ ಶೋಕವಿಹ್ವಲಳಾಗಿ ಮೂರ್ಛಿತಳಾಗಿ ನೆಲಕ್ಕುರುಳಿದಳು. ಅಂತಃಪುರದ ಸ್ತ್ರೀಯರು ಅಳುತ್ತಾ ಆಕೆಯ ಬಳಿಗೆ ಓಡಿ ಬಂದು ಪ್ರಜ್ಞಾಶೂನ್ಯಳಾದ ಅವಳನ್ನು ಎತ್ತಿಕೊಂಡು ರಾವಣನ ಕಳೇಬರವಿದ್ದಲ್ಲಿಗೆ ಬಂದರು. ಪ್ರಜ್ಞೆ ಮರಳಿದಾಗ ಪತಿಯ ದುಃಸ್ಥಿತಿಯನ್ನು ನೋಡಿ ಆಕೆಯು ಕೂಗಿ-ಕೂಗಿ ಪ್ರಲಾಪಿಸತೊಡಗಿದಳು. ದೇಹಭಾವವಿಲ್ಲ, ಕೂದಲು ಹರಡಿಕೊಂಡಿದೆ. ಅವರು ಅನೇಕ ಪ್ರಕಾರದಿಂದ ಎದೆ ಬಡಿದುಕೊಂಡು ವಿಲಾಪಮಾಡುತ್ತಾ ರಾವಣನ ಪ್ರತಾಪವನ್ನು ಕೊಂಡಾಡುತ್ತಿದ್ದಾರೆ. 'ಹೇ ಪ್ರಾಣನಾಥಾ! ನಿಮ್ಮ ಬಲದಿಂದ ಪೃಥ್ವಿಯು ಸದಾಕಾಲ ನಡುಗುತ್ತ ಇರುತ್ತಿತ್ತು, ನಿನ್ನೆದುರಿಗೆ ಸೂರ್ಯಚಂದ್ರಾಗ್ನಿಗಳು ಹತಪ್ರಭರಾಗಿದ್ದರು. ಆದಿಶೇಷ! ಕೂರ್ಮ ಇವರೂ ಕೂಡ ನಿನ್ನ ಭಾರವನ್ನು ಸಹಿಸಲಾರದೆ ಹೋದರು. ಅಂತಹ ನಿನ್ನ ಮಹೋನ್ನತ ಶರೀರವು ಧೂಳೀಧೂಸರಿತವಾಗಿ

ಮಣ್ಣಿನಲ್ಲಿ ಬಿದ್ದಿದೆ. ಇಂದ್ರ, ವಾಯು, ವರುಣ, ಕುಬೇರ ಇವರಲ್ಲಿ ಯಾರೂ ರಣರಂಗದಲ್ಲಿ ನಿನಗೆ ಮುಖತೋರುವ ಸಾಹಸಮಾಡಲಿಲ್ಲ. ಸ್ವಾಮಿ! ನೀವು ನಿಮ್ಮ ಭುಜಬಲದಿಂದ ಕಾಲನನ್ನೂ, ಯಮನನ್ನೂ ಗೆದ್ದಿದ್ದೀರಿ. ಅಂತಹ ಲೋಕವೀರರಾದ ನೀವು ಇಂದು ಅನಾಥರಂತೆ ಒರಗಿದ್ದೀರಿ! ನಿಮ್ಮ ಪೌರುಷ, ಪ್ರಭುತ್ವಗಳು ಲೋಕವಿಶ್ರುತವಾದುವು. ಅಯ್ಯೋ! ನಿಮ್ಮ ಮಕ್ಕಳ, ಪರಿಜನರ ಬಲವಂತೂ ವರ್ಣಿಸಲಸದಳ. ಜಗತ್ಪ್ರಭುವಾದ ಶ್ರೀರಾಮಚಂದ್ರನೊಡನೆ ವೈರಕಟ್ಟಿಕೊಂಡಿದ್ದರಿಂದಲೇ ನಿಮಗೆ ಈ ದುಃಸ್ಥಿತಿ ಉಂಟಾಯಿತು. ಇಂದು ನಿಮ್ಮ ವಂಶದಲ್ಲಿ ನಿನಗಾಗಿ ಅಳುವವರೂ ಕೂಡ ಯಾರೂ ಉಳಿಯಲಿಲ್ಲ. ನಾಥಾ! ಬ್ರಹ್ಮನು ಸೃಷ್ಟಿಸಿದ ಇಡೀ ಪ್ರಪಂಚವೇ ನಿಮಗೆ ಅಡಿಯಾಳಾಗಿತ್ತು. ದಿಕ್ಪಾಲಕರು ನಿಮ್ಮ ಭಯದಿಂದ ನಿಮ್ಮ ಮುಂದೆ ಹಣೆ ಮಣಿಯುತ್ತಿದ್ದರು. ಆದರೆ ಅಯ್ಯೋ! ಈಗ ನಿಮ್ಮ ತಲೆಗಳನ್ನು ತೋಳುಗಳನ್ನು ನರಿಗಳು ತಿನ್ನುತ್ತಿವೆಯಲ್ಲ! ಶ್ರೀರಾಮನಿಗೆ ವಿಮುಖನಾದವನಿಗೆ ಇಂತಹ ಗತಿ ಬಂದೊದಗುವುದು ಅನುಚಿತವಲ್ಲ. ಪ್ರಾಣಾನಾಥಾ! ಪೂರ್ಣವಾಗಿ ಕಾಲಕ್ಕೆ ವಶರಾದ ನೀವು ಯಾರ ಮಾತಿಗೂ ಕಿವಿಗೊಡಲಿಲ್ಲ, ಚರಾಚರದೊಡೆಯನಾದ ಪರಮಾತ್ಮನನ್ನು ಹುಲು ಮನುಜನೆಂದು ಭಾವಿಸಿದಿರಿ.

ದನುಜ ಕಾನನಕ್ಕೆ ಕಾಡ್ಗಿಚ್ಚಾದ ಸಾಕ್ಷಾತ್ ಶ್ರೀಹರಿಯನ್ನು ಸಾಮಾನ್ಯ ಮಾನವನೆಂದು ಬಗೆದಿರಿ. ಹೇ ಪ್ರಿಯತಮಾ! ಬ್ರಹ್ಮರುದ್ರಾದಿ ದೇವತೆಗಳಿಂದ ಸೇವಿತನಾದ ಕರುಣಾಮಯನಾದ ಶ್ರೀರಾಮನನ್ನು ನೀವು ಭಜಿಸಲಿಲ್ಲ. ನಿಮ್ಮ ಈ ಶರೀರವು ಹುಟ್ಟಿನಿಂದಲೇ ಪರದ್ರೋಹರತವಾಗಿತ್ತು; ಅನೇಕ ಪಾಪಗಳಿಗೆ ಮನೆಯಾಗಿತ್ತು. ಇಷ್ಟಾದರೂ ನಿರಾಮಯ ಪರಬ್ರಹ್ಮ ಶ್ರೀರಾಮನು ನಿಮಗೆ ತನ್ನ ಪರಂಧಾಮವನ್ನು ಕರುಣಿಸಿದ. ಅಂತಹವನಿಗೆ ನಾನು ನಮಸ್ಕರಿಸುತ್ತೇನೆ.[೬೧]

ಅಹಾ! ನಾಥಾ! ಶ್ರೀರಘುನಾಥನಂತಹ ಕೃಪಾಸಿಂಧು ಬೇರಾರಿದ್ದಾರೆ? ಆ ಭಗವಂತನು ಯೋಗಿ ಜನರಿಗೂ ದುರ್ಲಭವಾದ ಸದ್ಗತಿಯನ್ನು ನಿಮಗೆ ಕರುಣಿಸಿದನಲ್ಲ! ಎಂದು ಮಂಡೋದರಿಯು ಕರುಣಾಮೂರ್ತಿಯಾದ ರಾಮನನ್ನು ಭಕ್ತಿಯಿಂದ ಸ್ಮರಿಸಿ ನಮಸ್ಕರಿಸುತ್ತಾಳೆ. ಮಂಡೋದರಿಯ ಈ ಮಾತುಗಳಿಂದ ಸುರ, ಮುನಿ, ಸಿದ್ಧರು ಮುಂತಾದವರಿಗೆಲ್ಲ ಪರಮಾನಂದವಾಯಿತು.[೬೨]

**ರಾಮಚಂದ್ರ ಚರಿತ ಪುರಾಣ**

ನಾಗಚಂದ್ರನ ಮಂಡೋದರಿ ಪತಿಹಿತವನ್ನು ಬಯಸುವವಳಾಗಿದ್ದಾಳೆ. ಇಲ್ಲಿ ಈಕೆ ರಾವಣನ ಚಿಂತೆಗೆ ಕಾರಣವನ್ನು ಹುಡುಕ ಹೊರಟಿದ್ದಾಳೆ. ಅವಳಂದುಕೊಂಡದ್ದೇನೆಂದರೆ ಖರನು ಸಾವನ್ನಪ್ಪಿದ್ದರಿಂದ ತನ್ನ ಪತಿಯು ಚಿಂತಿತನಾಗಿದ್ದಾನೆಂದು ಎಂಬುದಾಗಿ. ಆದ್ದರಿಂದಲೇ ಬಳಿಸಾರಿ ಗಂಡುಗುಣಕ್ಕೆ ಹಾನಿಯಾಗುವಂತೆ ಹೆಂಗಸಿನಂತೆ ದುಃಖಿಸುತ್ತಿರುವುದಕ್ಕೆ ಕಾರಣವೇನೆಂದು ಕೇಳುತ್ತಾಳೆ. ಅವಳ ಉದ್ದೇಶವನ್ನು ತಿಳಿದ ರಾವಣನು ತನ್ನ ದುಃಖಕ್ಕೆ ಮಂಡೋದರಿಯು ಹೇಳಿದ ಕಾರಣವಲ್ಲವೆಂದು ಅದು ಆಕೆಗೆ

ಅರ್ಥವಾಗದೆಂದೂ' ಹೇಳುತ್ತಾಳೆ. ಮಂಡೋದರಿಯು ಮುಂದುವರಿದು ಶೋಕಕ್ಕೆ ಕಾರಣವೇನೆಂದು ಮತ್ತೆ ಕೇಳಿದಾಗ ರಾವಣನು ಲಜ್ಜೆಗೊಂಡವನಾಗಿ ಉತ್ತರಿಸಲಾರದೆ ಹೋಗುತ್ತಾನೆ. ಆಗ ಮಂಡೋದರಿಯು ಯೋಚಿಸುತ್ತಾಳೆ. ಇಡೀ ವಿಶ್ವದಲ್ಲಿ ರಾವಣನನ್ನು ಎದುರಿಸುವವರು ಯಾರೂ ಇಲ್ಲ. ಆದ್ದರಿಂದ ಇದು ಮನ್ಮಥನ ಕಾರ್ಯವೇ ಇರಬಹುದೆಂದು ಊಹಿಸುತ್ತಾಳೆ. ಅದರಿಂದ ಸುಂದರ ಹೆಣ್ಣಿನ ಕಾರಣವೇ ಎಂದುಕೊಂಡು ನವಿರಾದ ಮಾತುಗಳಿಂದ ಕೇಳುತ್ತಾಳೆ.

ರಾವಣನು ಮಂಡೋದರಿಗೆ ಹೇಳಿದನು, ನನಗೇನಾಗಿದೆಯೆಂದು ನಿನಗೆ ಹೇಳುವಂತಹುದಲ್ಲ ಆದರೆ ನನಗದು ತಿಳಿದುಹೋಗಿರುವುದರಿಂದ ಈಗ ವಂಚನೆ ಸಾಧ್ಯವಿಲ್ಲ. ಮದನ ಪೀಡಿತನಾಗಿ ಏನೂ ಮಾಡಲೂ ತೋರದೆ ಸೀತೆಯನ್ನು ಕದ್ದು ತಂದಿದ್ದಾನೆ. ಅವಳನ್ನು ಪುಷ್ಪಕ ವಿಮಾನದಲ್ಲಿ ಕರೆತರುವಾಗ ಅವಳ ಚೆಲುವನ್ನು ಕಂಡು ತಾಳಲಾರದೆ ಅವಳನ್ನು ಹಿಡಿಯಲು ಹೋದುದಾಗಿಯೂ ಆಗ ಸೀತೆ ತಾನು ನಾಲಿಗೆ ಕಿತ್ತುಕೊಂಡು ಸಾಯುವುದಾಗಿ ಬೆದರಿಕೆ ಒಡ್ಡಿದುದನ್ನು ತಿಳಿಸಿದನು. ಈಗ ಅವಳನ್ನು ಗೀರ್ವಾಣರಮಣೋದ್ಯಾನದಲ್ಲಿ ಇರಿಸಿರುವುದಾಗಿ ತಿಳಿಸಿದ. ಅವಳ ಕುಂದದಳ ಧವಳಲೋಚನೆಯ ಸೌಂದರ್ಯ ಸುಧೆಯನ್ನು ಆಸ್ವಾದಿಸದಿದ್ದರೆ ತನ್ನ ಸಾವು ಖಚಿತ ಎಂದು ತಿಳಿಸಿ ತಲೆ ತಗ್ಗಿಸಿ ಕುಳಿತ. ಅವನ ದುರವಸ್ಥೆಯನ್ನು ಕಂಡು ಮಂಡೋದರಿಗೆ ಭಯವಾಯಿತು. ಮಿಂಚಿನ ಬೆಳಕು ಹೆಣ್ಣಿನ ಶುಚಿತ್ವ ಕ್ಷಣಿಕವಾದದ್ದು, ನಿನ್ನ ರೂಪವನ್ನು ಕಂಡು ಸೋಲದೆ ಇರುವವರೂ ಇದ್ದಾರೆಯೇ? ಎಂದು ಅವನನ್ನು ಕೇಳಿ ಸಂತಸಪಡಿಸಿದಳು, ಮತ್ತು ಅವಳನ್ನು ಒಪ್ಪಿಸಲು ತಾನೇ ಸಾಕು ಎಂದು ಭರವಸೆ ನೀಡಿದಳು. ಅದರಂತೆ ತನ್ನ ಪರಿವಾರದ ಸ್ತ್ರೀಯರೊಡನೆ ಸೀತೆಯಿರುವ ಸ್ಥಳಕ್ಕೆ ಬಂದಳು.

ಅತ್ಯಂತ ಸುಂದರವಾಗಿ ಅಲಂಕರಿಸಿಕೊಂಡು ಬಂದು ಸೀತೆಯ ಮುಂದೆ ವಿಲಾಸದಿಂದ ಕುಳಿತಳು. ಆದರೆ ಸೀತೆಯು ಸೌಂದರ್ಯದ ಮುಂದೆ ಇವರುಗಳ ಸೌಂದರ್ಯ ಸೊಗಯಿಸದೇ ಹೋಯಿತು. ಮಂಡೋದರಿಯು ಸೀತೆಯು ಮುಖವನ್ನು 'ಸೀತೆ ನಿನಗೆ ಸಾಟಿಯಿಲ್ಲದ ರಾಮನೊಂದಿಗೆ ಬ್ರಹ್ಮನ್ನು ನಿನ್ನನ್ನು ಸೇರಿಸಿದ್ದಾನೆ. ಇದನ್ನು ಸಹಿಸಲಾರದ ಚಿತ್ತಭವನು ಈಗ ನಿನ್ನನ್ನು ದಶಕಂಧರನಿಗೆ ಕೊಟ್ಟಿದ್ದಾನೆ. ನಿನಗೆ ಅವನು ಅನುರೂಪನಾಗಿದ್ದಾನೆ. ಅವನನ್ನು ವರಿಸಿ ಲಂಕೆಯ ಅರಸಿಯಾಗು ಎನ್ನುತ್ತಾಳೆ. ನಿನ್ನ ನವಯೌವ್ವನವನ್ನು, ಚೆಲುವನ್ನೂ, ದೇಹಕಾಂತಿಯನ್ನೂ ಎಷ್ಟು ಹೊಗಳಿದರೂ ಕಡಿಮೆಯೇ. ಮೇನಕೆಗೇ ಒಲಿಯದ ರಾವಣನು ನಿನ್ನನ್ನು ಒಲಿದಿದ್ದಾನೆಂದರೆ ನಿನ್ನ ರೂಪವನ್ನು ಹೊಗಳಲು ಸಾಧ್ಯವೇ? ನೀನು ಖಚರೇಂದ್ರನ ವಕ್ಷಸ್ಥಳದ ಲಕ್ಷ್ಮಿಯಂತಿರು ಎಂದು ಹೇಳಿದಳು.

ಮಂಡೋದರಿಯ ಮಾತನ್ನು ಕೇಳಿದ ಸೀತೆ ಕನಲಿ 'ನೀನಾಡುತ್ತಿರುವ ಮಾತುಗಳು ಮದದಿಂದ ಕೂಡಿದವರ ಮಾತಾಗಿದೆಯೇ ಹೊರತು ಕುಲವಧುವು ಆಡುವ ಮಾತಾಗಿಲ್ಲ. ಒಳಿತನ್ನು ಆಲೋಚಿಸದೆ, ಅಪಕೀರ್ತಿ, ಪಾಪಗಳಿಗೆ ಹೆದರದೆ ಇಂತಹ ಅಸಂಬದ್ಧವನ್ನು ನಿಮ್ಮಂತಹವರು ಮಾತ್ರವೇ ಹೇಳಲು ಸಾಧ್ಯ.

ರಾಮನೊಬ್ಬನೇ ನನ್ನ ಒಡೆಯ. ಆತನನ್ನು ಬಿಟ್ಟರೆ ಉಳಿದವರೆಲ್ಲ ಪರಪುರುಷರು. ಪಾತಿವ್ರತ್ಯವಿಲ್ಲದವಳು ಕುಲಸ್ತ್ರೀಯಾಗಲು ಸಾಧ್ಯವೇ! ಹರಿವಂಶದ ಸ್ತ್ರೀಯ ತಪ್ಪು ಒಪ್ಪುಗಳನ್ನು ಅರಿಯದೆ ಇಂತಹ ಅನುಚಿತವನ್ನು ನಿಮ್ಮಂತಹವರನ್ನು ಬಿಟ್ಟು ಬೇರ್‍ಯಾರು ಆಡುವುದಿಲ್ಲ' ಎಂದು ನುಡಿದಳು.

ಇನ್ನೊಂದು ಸಂದರ್ಭವೆಂದರೆ ರಾವಣನು ಬಹುರೂಪಿಣಿಯನ್ನು ಸಾಧಿಸಿ ವೈರಿಯನ್ನು ನಾಶಮಾಡಲು ಸಂಕಲ್ಪಿಸುತ್ತಾನೆ. ತಪಸ್ಸು ಮಾಡುತ್ತಿರುವ ರಾವಣನ ಮೇಲೆ ಯುದ್ಧ ಮಾಡಬಹುದೋ ಬಾರದೋ? ಎಂದು ಯೋಚಿಸಿದರು. ಪೂರ್ಣಭದ್ರ ಮತ್ತು ಮಣಭದ್ರರೆಂಬ ಯಕ್ಷರು ಲಂಕಾಪುರದ ಮನೆ, ಚೈತ್ಯಾಲಯಗಳಿಗೆ ಹಾನಿಗೊಳಿಸದೆ, ಜಪದಲ್ಲಿರುವ ರಾವಣನನ್ನು ಈಗಲೇ ಹತ್ಯೆ ಮಾಡದೆ ಆತನ ವಿದ್ಯಾಸಾಧನೆಗೆ ವಿಘ್ನಗಳನ್ನು ತರಬಹುದೆಂದು ಹೇಳಿದರು. ಅಂಗದನು ಲಂಕೆಗೆ ಹೋಗಿ ಚುಚ್ಚು ಮಾತುಗಳಿಂದ ರಾವಣನನ್ನು ಕೆಣಕುತ್ತಾನೆ. ಅರಮನೆಯ ಯುವತಿಯರ ಜಡೆಗಳನ್ನು ಒಬ್ಬರದೊಬ್ಬರಿಗೆ ಗಂಟುಹಾಕಿದ. ರಾವಣನಿಗೆ ಹೇಳಿದ 'ನಿನ್ನ ಕಣ್ಣೆದುರಿಗೇ ನಿನ್ನ ಮನೆಯ ಹೆಣ್ಣುಮಕ್ಕಳನ್ನು ಎಳೆದೊಯ್ಯುತ್ತೇನೆ. ಮಂಡೋದರಿಯನ್ನು ನನ್ನ ತಾಯಿ ತಂದೆಯರಿಗೆ ಚಾಮರ ಸೇವೆ ಮಾಡಲು ಕರೆದೊಯ್ಯುತ್ತೇನೆ. ಧೈರ್ಯವಿದ್ದರೆ ಬಿಡಿಸಿಕೋ' ಎನ್ನುತ್ತಾನೆ. 'ನೀನು ವಿದ್ಯೆಯನ್ನು ಸಾಧಿಸಿ ಮಾಡುವುದಾದರೂ ಏನು? ನಿನ್ನ ಎದುರಿನಲ್ಲಿಯೇ ನಮಗೆ ತೊಂದರೆ ಕೊಡುತ್ತಿದ್ದರೂ ಮಿಡುಕದಿರುವೆಯಲ್ಲ' ಎಂದು ಮಂಡೋದರಿಯೇ ಮುಂತಾದವರು ಹುಯ್ಯಲಿಟ್ಟರು.

ಮುಂದೆ ವಿದ್ಯೆಯನ್ನು ವಶಪಡಿಸಿಕೊಂಡ ರಾವಣನಿಗೆ ವಿದ್ಯಾಧಿದೇವತೆಯು ರಾಮಲಕ್ಷ್ಮಣರನ್ನುಳಿದು ಮಿಕ್ಕವರೆಲ್ಲರನ್ನೂ ನಾಶಗೊಳಿಸುತ್ತಿಯಾ ಎಂದಾಗ ಮಿಕ್ಕೆಲ್ಲರ ಸಾವಿನಿಂದ ನನಗೇನು ಪ್ರಯೋಜನವೆಂದು ನಮಸ್ಕರಿಸಿ ತನ್ನ ಅರಮನೆ ಸೇರಿದನು. ಬಾಡಿದ ಮುಖದ ಮಂಡೋದರಿಯನ್ನು ಕಂಡು ಅವಳಿಗೆ ಮತ್ತು ಇತರ ಸ್ತ್ರೀಯರಿಗೆ ಅಪಮಾನ ಮಾಡಿದ ಅಂಗದಾದಿಗಳನ್ನು ಸೆರೆಹಿಡಿದು ತರುತ್ತೇನೆಂದು ಸಂತೈಸಿದ.

ಅನೇಕ ಅಪಶಕುನಗಳನ್ನು ಕಂಡ ಶಕುನಕಾರರು ರಾವಣನಿಗೆ ಅಪಾಯವಾಗುವುದೆಂದು ಗುರುತಿಸಿದರು. ಅದೇ ಸಮಯದಲ್ಲಿ ರಾವಣನಿಗೆ ರಾಮನ ಕಡೆ ಸೆರೆಯಲ್ಲಿದ್ದ ಮಗ ಮತ್ತು ತಮ್ಮಂದಿರ ನೆನಪಾಯಿತು. ಕೋಪಗೊಂಡು ಆಗಲೇ ಯುದ್ಧಕ್ಕೆ ಹೊರಡಲು ಸಿದ್ಧನಾದ. ಅದನ್ನು ಕಂಡು ಮಂಡೋದರಿಗೆ ಹೆದರಿಕೆಯಾಯಿತು. ಆಕೆ ರಾವಣನ ಬಳಿ ಬಂದು ಜಾನಕಿಯನ್ನು ರಾಮನಿಗೊಪ್ಪಿಸಿ ನಿಮ್ಮ ತಮ್ಮ ಮತ್ತು ಮಗನನ್ನು ಹಿಂದಿರುಗಿ ಕರೆತರುತ್ತೇನೆಂದು ಹೇಳಿದಳು. ಯುದ್ಧಗಳಿಂದ ಬಂಧುಗಳೆಲ್ಲರೂ ಸಾಯುತ್ತಾರೆ. ಆದ್ದರಿಂದ ಯುದ್ಧವನ್ನು ಕೈ ಬಿಡೆಂದರೂ ರಾವಣನು ಒಪ್ಪುವುದಿಲ್ಲ.

ಒಟ್ಟಾರೆಯಾಗಿ ನಾಗಚಂದ್ರನ ಮಂಡೋದರಿ ಪತಿಹಿತಕ್ಕಾಗಿ ಸೀತೆಯನ್ನು ಒಲಿಸುವ ಪ್ರಯತ್ನದಿಂದಾಗಿ ಸೀತೆಯಿಂದ ಅಪಮಾನಕ್ಕೊಳಗಾಗುತ್ತಾಳೆ. ಮೂಲ ರಾಮಾಯಣದಲ್ಲಿ ಮಂಡೋದರಿಯ ಬಗೆಗೆ ಇಷ್ಟೊಂದು ವಿಚಾರಗಳು ದೊರಕುವುದಿಲ್ಲ.

ಶಿವನ ಹಣೆಗಣ್ಣಿನ ಪ್ರಪಂಚ ಬೆಂಕಿಯ ಉರಿಯ ಹೊಡೆತದಿಂದ ಸಾಯಲಾರದೆ ಪುರುಷತನವನ್ನು ಬಿಟ್ಟು ಮನ್ಮಥನು ಮಂಡೋದರಿಯ ರೂಪವನ್ನು ಧರಿಸಿದನೋ ಎನ್ನುವಂತೆ, ಶೃಂಗಾರದ ಸಾರವನ್ನು ತುಂಬಿಕೊಂಡ ಸೌಂದರ್ಯಸಾಗರದ ಮುತ್ತೋ ಎನ್ನುವಂತೆ ಮಂಡೋದರಿ ಕಾಣಿಸಿದಳು.[೬೪]

**೫.೭ ಪ್ರಮುಖ ಸ್ತ್ರೀಪಾತ್ರಗಳ ವಿಶ್ಲೇಷಣೆ**

ಈವರೆಗೆ ಸೀತೆ ಹಾಗೂ ಊರ್ಮಿಳೆ ಪಾತ್ರಗಳು ಹೇಗೆ ನಿರ್ಲಕ್ಷಕ್ಕೆ ಒಳಗಾದವು. ಈ ನಿರ್ಲಕ್ಷಕಕ್ಕೆ ಮೂಲ ಕವಿಗಿದ್ದ ಕಾರಣಗಳೇನಿರಬಹುದು ಎಂಬುದನ್ನು ಗಮನಿಸಲಾಗಿದೆ. ಅಂದಿನ ಸಮಾಜದ ಮಹಿಳೆಯ ಸ್ಥಿತಿಗತಿಯನ್ನು ಬಿಂಬಿಸುವಲ್ಲಿ ಕವಿಯ ಸಾರ್ಥಕತೆ ಇರುವುದು ಕಂಡುಬರುತ್ತದೆ. ರಾಮಾಯಣದಲ್ಲಿ ಪದೇ ಪದೇ ಚರ್ಚೆಗೆ ಒಳಗಾಗುವ ಕೆಲವು ಮುಖ್ಯ ಸ್ತ್ರೀ ಪಾತ್ರಗಳಲ್ಲಿ ಕೈಕೇಯಿ, ಮಂಡೋದರಿ, ಮಂಥರೆ, ಅಹಲ್ಯೆ ಹಾಗೂ ಶೂರ್ಪನಖಿಯರು ಕಂಡುಬರುತ್ತಾರೆ. ಕೌಸಲ್ಯೆ, ಸೌಮಿತ್ರೆ, ಸುನಯದೇವಿ, ತಾಟಕಿ ಮುಂತಾದ ಪಾತ್ರಗಳು ನಿರ್ಲಕ್ಷ ಪಾತ್ರಗಳೇ ಆದರೂ ಮಂಡೋದರಿ, ಕೈಕೇಯಿ, ಮಂಡೋದರಿ, ಮಂಥರೆ, ಅಹಲ್ಯೆ ಹಾಗೂ ಶೂರ್ಪನಖಿ ಪಾತ್ರಗಳಷ್ಟು ಚರ್ಚೆಯಾಗಿಲ್ಲ. ಕಥೆಯ ಬೆಳವಣಿಗೆಯ ದೃಷ್ಟಿಯಿಂದ ಪ್ರಾಸಂಗಿಕವಾಗಿ ಬಂದು ಹೋಗುವ ಅಥವಾ ಹಾದು ಹೋಗುವ ಪಾತ್ರಗಳು ಇವು. ಕವಿಯ ದೃಷ್ಟಿಯಂತೂ ಸದಾ ಪುರುಷೋತ್ತಮನ ಮೇಲೆ ಇರುತ್ತದೆ.

ಈ ನಾಲ್ಕು ಪ್ರಮುಖ ಪಾತ್ರಗಳ ಚಿತ್ರಣವನ್ನು ಗಮನಿಸಿದರೆ ನಮಗೆ ಕಂಡುಬರುವ ಪ್ರಮುಖ ಅಂಶವೆಂದರೆ ಮಂಥರೆಯ ಹೊರತುಪಡಿಸಿ ಉಳಿದವರೆಲ್ಲರೂ ಲೈಂಗಿಕವಾಗಿ ಶೋಷಣೆಗೆ ಒಳಪಟ್ಟವರು. ಸ್ತ್ರೀ ಪಾತ್ರಗಳಾದ ಇವರನ್ನು ಪುರುಷ ಪಾತ್ರಗಳು ಕನಿಷ್ಠ ಪರಿಗಣನೆಗೆ ತೆಗೆದುಕೊಂಡಂತೆ ಕಂಡುಬರುವುದಿಲ್ಲ. ಅದಕ್ಕೆ ಕಾರಣ ಕವಿಯ ಮನಸ್ಸು ಹಾಗೂ ಮನಸ್ಥಿತಿ, ಆತನ ಮನಸ್ಥಿತಿಯನ್ನು ರೂಪಿಸಿದ ಪಿತೃಸಂಸ್ಕೃತಿ.

ಸ್ತ್ರೀ ಸಮಾನತೆಯ ಬಗ್ಗೆ ಅನೇಕ ಚರ್ಚೆಗಳು ಶತಮಾನಗಳಿಂದ ನಡೆಯುತ್ತಲೇ ಇವೆ. ಆದರೂ ಸಮಾನತೆಯನ್ನು ಸ್ಥಾಪಿಸಲು ಸಾಧ್ಯವಾಗಿಲ್ಲ. ಒಂದು ಹಂತದಲ್ಲಿ ಸ್ತ್ರೀಯೇ ಎಲ್ಲವನ್ನು ನಿರ್ಣಯಿಸುತ್ತಿದ್ದಳು ಎಂಬ ಅಂಶವನ್ನು ನಾವು ಚಾರಿತ್ರಿಕ ಸಂಗತಿಗಳಿಂದ ಗಮನಿಸಿದ್ದೇವೆ. ಕೃಷಿ, ಪಶುಪಾಲನೆ, ಬೇಟೆಯೇ ಪ್ರಮುಖವಾಗಿದ್ದ ಆರಂಭದ ದಿನಗಳಲ್ಲಿ ಶ್ರಮ ವಿಭಜನೆಯೂ ಸಮಾನವಾಗಿತ್ತು. ಆಹಾರ ಪದಾರ್ಥಗಳ ಸಂರಕ್ಷಣೆ, ಕೃಷಿ ಚಟುವಟಿಕೆಗಳು, ಮಕ್ಕಳ ಪಾಲನೆ, ಪೋಷಣೆ ಇಂತಹ ಪ್ರಮುಖ ಜವಾಬ್ದಾರಿಗಳು ಸ್ತ್ರೀಯರದ್ದೇ ಆಗಿತ್ತು. ಯಾವಾಗ ಇದು ಒಂದು ಮಿತಿಯನ್ನು ದಾಟಿ ವಿಸ್ತರಿಸಿಕೊಳ್ಳಲಾರಂಭಿಸಿತೋ ಆಗ ಪುರುಷ ಆ ವಿಸ್ತರಣಾ ಚಟುವಟಿಕೆಗಳನ್ನು ತನ್ನದೇ ಉಸ್ತುವಾರಿಯಲ್ಲಿ ನೋಡಿಕೊಳ್ಳತೊಡಗಿದ. ಅನಿವಾರ್ಯವಾಗಿ ಶಿಶುಪಾಲನೆಯ ಹೊಣೆ ಹೊತ್ತ ಸ್ತ್ರೀ ಸ್ಥಾಯಿಯಾಗಬೇಕಾಯಿತು. ಮುಂದುವರಿದು ಆತ ಆಹಾರ ಸಂಗ್ರಹಣೆ, ಬೇಟೆ, ಮುಂತಾದ ಕೆಲಸಗಳಲ್ಲಿ ತನ್ನನ್ನು ತೊಡಗಿಸಿಕೊಂಡ. ಅಷ್ಟೇ ಪ್ರಮಾಣದ ಶ್ರಮದ

ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿದ್ದ ಸ್ತ್ರೀಯ ಕೆಲಸಗಳನ್ನು ಕಡೆಗಾಣಿಸಿದ. ತನ್ನದೇ ಮುಖ್ಯ ಪಾತ್ರ ಎಂದು ಸಾರತೊಡಗಿದ. ಕ್ರಮೇಣ ಇಡೀ ವ್ಯವಸ್ಥೆಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡು ಸ್ತ್ರೀಯನ್ನು ಅಧೀನಳನ್ನಾಗಿಸಿದ.

ಹಾಗಾಗಿ ಆದಿಮ ಸ್ಥಿತಿಯಲ್ಲಿ ಸ್ತ್ರೀ ಪುರುಷರ ಮಧ್ಯೆ ಅಂತಹ ಭೇದಗಳಿರಲಿಲ್ಲ. ಶಾರೀರಿಕ ಸಂಚನೆಯಲ್ಲಿ ಮಾತ್ರ ವ್ಯತ್ಯಾಸಗಳಿದ್ದವು. ವೇದಗಳ ಕಾಲದಲ್ಲೂ ಸ್ತ್ರೀ-ಪುರುಷರ ಸಾಮಾಜಿಕ ಸ್ಥಾನಮಾನಗಳಲ್ಲಿ ಅಷ್ಟೇನೂ ಅಂತರಗಳಿರಲಿಲ್ಲ ಎಂಬುದನ್ನು ಗಮನಿಸಿದ್ದೇವೆ. ಋಗ್ವೇದದಲ್ಲಿಯೇ ಬ್ರಹ್ಮವಾದಿನಿಯರ, ಸದ್ಯೋದ್ವಾಹರ ಪ್ರಸ್ತಾಪ ಬಂದಿರುವುದರಿಂದ ಸಮಾನತೆ ಇತ್ತು ಎಂಬ ಅಂಶ ನಮಗೆ ಸ್ಪಷ್ಟವಾಗುತ್ತದೆ. ಕಾತ್ಯಾಯನನ ವಾರ್ತಿಕದಲ್ಲೂ 'ಉಪಾಧ್ಯಾಯಿನಿ' ಎಂಬ ಉಲ್ಲೇಖವಿರುವುದನ್ನು ಗಮನಿಸಿದರೆ ಶಿಕ್ಷಣಕ್ಷೇತ್ರದಲ್ಲೂ ಆಕೆ ಸಕ್ರಿಯವಾಗಿದ್ದಳು ಎಂಬುದಕ್ಕೆ ಆಧಾರ ಲಭಿಸುತ್ತದೆ. ಬೌದ್ಧಧರ್ಮದ ಥೇರಿಗಾಥಾದ ಪ್ರಸ್ತಾಪ, ದ್ರೌಪದಿ, ಸೀತೆ, ಊರ್ಮಿಳೆಯರು ಸರ್ವಕಲೆಗಳಲ್ಲಿ ಪಂಡಿತರಾಗಿದ್ದರೂ ಎಂಬ ಅಂಶ, ಮೈತ್ರೇಯಿ, ಗಾರ್ಗಿ ಅವರುಗಳ ಪಾಂಡಿತ್ಯ ಪ್ರದರ್ಶನ ಇವೆಲ್ಲವೂ ಸ್ತ್ರೀ ಸಾಮಾಜಿಕ ಸ್ಥಿತಿಗತಿ ಉತ್ತಮವಾಗಿತ್ತು ಎಂಬುದನ್ನು ಬಿಂಬಿಸುತ್ತವೆ.

ಈ ಹಿಂದೆ ಹೇಳಿದಂತೆ ಶಿಕ್ಷಣ ಕ್ಷೇತ್ರ ಮಾತ್ರವಲ್ಲದೆ ಶಾರೀರಿಕ ಶ್ರಮದ ಕೆಲಸಗಳಲ್ಲೂ ಮಹಿಳೆ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಿದ್ದಳು. ಯುದ್ಧಕಲೆ, ವಿವಿಧ ಲಲಿತ ಕಲೆಗಳು, ರಾಜಕೀಯ (ಊರ್ಮಿಳೆಯ ಪ್ರಸಂಗದಲ್ಲಿ ಇದು ವೇದ್ಯವಾಗುತ್ತದೆ. ಆಕೆ ಭರತನೊಂದಿಗೆ ರಾಜ್ಯದ ಜನತೆಯ ಕ್ಷೇಮ ಸಮಾಚಾರದ ಬಗ್ಗೆ ಮಾಹಿತಿ ಪಡೆದುಕೊಳ್ಳುತ್ತಾಳೆ) ಮುಂತಾದ ಕ್ಷೇತ್ರಗಳಿಗೆ ಪ್ರವೇಶ ಇತ್ತು ಎಂಬುದನ್ನು ಗಮನಿಸಬಹುದಾಗಿದೆ. ಪ್ರವೇಶ ಏಕೆ ಇತ್ತು ಅಂದರೆ ಆ ಕ್ಷೇತ್ರದಲ್ಲಿ ಆಕೆಗೆ ಪರಿಣಿತಿ ಇತ್ತು ಎಂದರ್ಥ. ಕೈಕೇಯಿ ಸಹಾಯವನ್ನು ದಶರಥ ಯುದ್ಧಭೂಮಿಯಲ್ಲಿ ಪಡೆದುಕೊಂಡು ಯಶಸ್ವಿಯಾದದ್ದನ್ನು ನಾವು ಗಮನಿಸಿದ್ದೇವೆ. ಆಕೆ ಆ ಕಲೆಯಲ್ಲಿ ಪರಿಣಿತಿ ಇಲ್ಲದೇ ಇದ್ದರೆ ಅದು ಸಾಧ್ಯವಾಗುತ್ತಿತ್ತೆ. ಸೀತೆ ಕೂಡ ರಾಮನಿಗೆ ಯುದ್ಧದಲ್ಲಿ ನೆರವಾಗುವಂತಹ ಪ್ರಸಂಗಗಳು ಕೆಲವು ರಾಮಾಯಣಗಳಲ್ಲಿ ಚಿತ್ರಣಗೊಂಡಿವೆ. ಅದ್ಭುತ ರಾಮಾಯಣದಲ್ಲಿ ಈ ಪ್ರಸಂಗ ಕಂಡುಬರುತ್ತದೆ. ಹತ್ತು ತಲೆಯ ರಾವಣನನ್ನು ರಾಮ ಸಂಹರಿಸುತ್ತಾನೆ. ಮರುಕ್ಷಣವೇ ಸಾವಿರ ತಲೆಯ ರಾವಣ ಎದುರಾಗುತ್ತಾನೆ. ಆಗ ಸೀತೆಯೇ ಅವನನ್ನು ಸಂಹರಿಸುತ್ತಾಳೆ. ಇದನ್ನು ಕಂಡ ರಾಮ ಮೂರ್ಛೆ ಹೋಗುತ್ತಾನೆ. ಸ್ತ್ರೀಯ ಸಾಮರ್ಥ್ಯ ಎಷ್ಟು ಪಟ್ಟು ಪುರುಷನಿಗಿಂತ ಹೆಚ್ಚು ಎಂಬುದನ್ನು ಇಲ್ಲಿ ಸಾಂಕೇತಿಕವಾಗಿ ಬಿಂಬಿಸಿದಂತಿದೆ.

ಇಂತಹ ಹಿರಿಮೆ ಗರಿಮೆಗಳಿಂದ ಕೂಡಿದ್ದ ಸ್ತ್ರೀಯರ ಸಾಮಾಜಿಕ ಸ್ಥಿತಿ ಯಾವುದೋ ಒಂದು ಹಂತದಲ್ಲಿ ಪುರುಷನ ಅಧಿಪತ್ಯದ ಸ್ಥಾಪನೆಯಿಂದ ಆಘಾತಕ್ಕೊಳಗಾಗುತ್ತದೆ. ಒಮ್ಮೆ ತನ್ನ ಅಧಿಪತ್ಯವನ್ನು ಸ್ಥಾಪಿಸಿದ ಪುರುಷ ಮತ್ತೆ ಹಿಂತಿರುಗಿ ನೋಡುವಂತಹ ಸಂದರ್ಭವೇ ಬರುವುದಿಲ್ಲ. ತನ್ನ ಅಧಿಕಾರದ

ಪರಿಧಿಯನ್ನು ವಿಸ್ತರಿಸಹೊರಟ ಪುರುಷ ಎಲ್ಲವೂ ತನ್ನ ಅಧೀನ ಎಂದು ಸಾರತೊಡಗಿದ. ಅದಕ್ಕೆ ಬೇಕಾದ ತಂತ್ರಗಳನ್ನು ರೂಪಿಸಿದ. ತುಂಬಾ ಚಾಣಾಕ್ಷತೆಯಿಂದ ಭಾವನಾತ್ಮಕವಾಗಿ ತನ್ನ ಉದ್ದೇಶಗಳನ್ನು ಈಡೇರಿಸಿಕೊಂಡ. ಆಕೆಯ ರಕ್ಷಣೆ ಭಾರವನ್ನು ತಾನು ಹೊತ್ತುಕೊಂಡಿರುವಂತೆ, ಆಕೆಯ ಸಂಪೂರ್ಣ ಯೋಗಕ್ಷೇಮವೇ ನನ್ನ ಗುರಿ ಎಂಬ ಭ್ರಮೆಯನ್ನು ಹುಟ್ಟುಹಾಕಿದ. ಆ ಭ್ರಮೆಯಿಂದ ಮಹಿಳೆ ಹೊರಬರಲು ಸಾಧ್ಯವೇ ಆಗಲಿಲ್ಲ. ಸದ್ಯ ಈಗ ಕೆಲವು ಮಹಿಳಾ ಚಿಂತಕಿಯರು ಪಿತೃಸಂಸ್ಕೃತಿಯಿಂದ ಆಗಿರಬಹುದಾದ ಅನಾಹುತಗಳೇನು ಎಂಬುದನ್ನು ಗುರುತಿಸುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿದ್ದಾರೆ. ಇಷ್ಟವಿಲ್ಲದ ಅನಿವಾರ್ಯವಾಗಿ ಬದುಕುತ್ತಿರುವುದರ ಅರಿವು ಈಗ ಅವರಿಗಾಗಿದೆ. ಆದರೆ ಇಷ್ಟವಿರುವ, ನಮ್ಮ ಬದುಕನ್ನು ಬದುಕಲು ದಾರಿಯಾವುದು ಎಂಬುದು ಸ್ಪಷ್ಟವಾಗಿಲ್ಲ. ಸಾಮಾಜಿಕವಾಗಿ ತನ್ನ ಸ್ಥಿತಿ ಹೀನವಾಗಿದೆ, ಆತಂಕದ ಬದುಕು ತನ್ನದಾಗಿದೆ ಎಂಬ ಎಚ್ಚರ ಆಕೆಯ ಮನಸ್ಸಿಗೆ ಬಂದಿದೆ. ಅವಳಿದ್ದ ಭ್ರಮೆ ಹರಿದು ಸ್ಮೃತಿ ಅವಳ ತಲೆಗೇರಿದೆ. ಆದರೆ ಇದರಿಂದ ಹೊರಬರುವ ಸಾಮರ್ಥ್ಯವನ್ನು ಸಂಪಾದಿಸುವ ಹಾದಿಯಲ್ಲಿ ಆಕೆ ಪ್ರಯತ್ನಶೀಲಳಾಗಿದ್ದಾಳೆ. ಈ ಪ್ರಯತ್ನದ ಫಲವಾಗಿ ಹಲವು ಚಿಂತಕಿಯರು ಹೋರಾಟ, ಚಳುವಳಿಯ ಹಾದಿಯನ್ನು ತುಳಿದಿದ್ದಾರೆ. ಕೆಲವರು ಇದಕ್ಕೆ ಪೂರ್ವ ಸಿದ್ಧತೆ, ತಯಾರಿಗಳನ್ನು ಮಾಡಿಕೊಂಡಿದ್ದಾರೆ. ಕೆಲವರು ಹೆಣ್ಣು ದೇಹ, ಲೈಂಗಿಕತೆಗಳ ನೆಲೆಯಿಂದ ಸಮಸ್ಯೆಗಳನ್ನು ಗುರುತಿಸಲು ಪ್ರಯತ್ನಿಸಿದ್ದಾರೆ, ಮತ್ತೆ ಕೆಲವರು ಆರ್ಥಿಕತೆ, ಸಾಮಾಜಿಕತೆಯ ನೆಲೆಯಿಂದ ಇರಬಹುದಾದ ಸಮಸ್ಯೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅಲ್ಲದೆ, ಇದಕ್ಕೆ ಮಹಿಳೆಯ ಅಂತರ್ಯದಲ್ಲೇ ಇರಬಹುದಾದ ದೌರ್ಬಲ್ಯಗಳೇನು ಎಂಬುದನ್ನೂ ಕಂಡುಕೊಳ್ಳುವ ಪ್ರಯತ್ನಗಳನ್ನು ಮಾಡಿದ್ದಾರೆ. ಸಮಾಜದಲ್ಲಿ ನಮಗೆ ತಿಳಿದಿರುವಂತೆ ಈಗಿರುವುದು ಪುರುಷ ಕೇಂದ್ರಿತವೂ, ಪುರುಷ ನಿರ್ಮಿತವೂ ಆದ ಜ್ಞಾನವಲಯ. ಎಲ್ಲವೂ ಅವನ ಅನುಕೂಲಕ್ಕೆ, ಸುಖಕ್ಕೆ ಸೃಷ್ಟಿಯಾದ ಅಂಶಗಳೇ ಆಗಿವೆ. ಅವು ಇಡೀ ಸಮಾಜವನ್ನು ನಿಯಂತ್ರಣದಲ್ಲಿಟ್ಟುಕೊಂಡಿವೆ. ಇದನ್ನು ಪ್ರಶ್ನಿಸಬೇಕಾದ, ಅದಕ್ಕೆ ಬೇಕಾದ ಜ್ಞಾನವನ್ನು ಸಂಪಾದಿಸಬೇಕಾದ ಸವಾಲು ಸ್ತ್ರೀಯರ ಮುಂದಿದೆ. ಚರಿತ್ರೆಯ ಗತಿಯಲ್ಲಿ ಎಲ್ಲ ಸಂಪನ್ಮೂಲಗಳ ಮೇಲೆ ತನ್ನ ದೈಹಿಕ, ಮಾನಸಿಕ ಬಲದಿಂದ ಹಿಡಿತವನ್ನು ಸಾಧಿಸಿ ಅನಿವಾರ್ಯವಾಗಿ ಮಹಿಳೆ ಅಧೀನ ಸ್ಥಿತಿಗೆ ಇಳಿಯುವಂತೆ ಮಾಡಲಾಗಿರುವುದು ರಹಸ್ಯವಾಗೇನು ಈಗ ಉಳಿದಿಲ್ಲ. ಈ ಅಧೀನ ಸ್ಥಿತಿಯನ್ನು ಕಾಯ್ದಿರಿಸಲು ಪುರುಷ ನಿರಂತರ ಪ್ರಯತ್ನದಲ್ಲಿದ್ದಾನೆ. ಅಧೀನತೆಯ ನೆಲೆಯಿಂದ ಪಾರಾಗುವ ಮೊದಲ ಹಜ್ಜೆಯಾಗಿ ಸ್ತ್ರೀ ತನ್ನ ಕಾಲಮೇಲೆ ತಾನು ಸ್ವತಂತ್ರವಾಗಿ ನಿಲ್ಲಬೇಕಿದೆ. ಸ್ವಾವಲಂಬನೆಯ ಬದುಕನ್ನು ಕಟ್ಟಿಕೊಳ್ಳಲು ಶಿಕ್ಷಣ ಪಡೆಯಬೇಕಾಗಿದೆ. ಉದ್ಯೋಗ ಪಡೆದುಕೊಳ್ಳಬೇಕಾಗಿದೆ. ಆಗ ಮಾತ್ರ ಪುರುಷನ ಯಜಮಾನಿಕೆಯನ್ನು ಪ್ರಶ್ನಿಸಲು ಸಾಧ್ಯವಾಗುತ್ತದೆ. ಇಂತಹ ಪ್ರಯತ್ನ ಸ್ತ್ರೀಯರಿಂದ ಸಾಧ್ಯವಾಗಿಲ್ಲ ಎಂದಲ್ಲ. ಆ ಹಾದಿಯಲ್ಲಿ ಆಕೆ ಇನ್ನೂ ಸಾಗಬೇಕಾಗಿದೆ. ಸ್ವಾವಲಂಬನೆಯನ್ನು ಪಡೆದುಕೊಂಡ ಹೆಣ್ಣು ಎಷ್ಟೋ ಸಂದರ್ಭಗಳಲ್ಲಿ ಪುರುಷನ ಭಾವನಾತ್ಮಕ ಬಲೆಗೆ ಬಿದ್ದು ತನ್ನ ಹೋರಾಟವನ್ನು ಅರ್ಧದಲ್ಲೇ ಬಿಟ್ಟು

ಹಿಂತಿರುಗಿದ ಪ್ರಸಂಗಗಳೂ ಇವೆ. ಈವರೆಗೆ ಸ್ಥಾಪಿತವಾಗಿರುವ ಎಲ್ಲ ಜ್ಞಾನವಲಯಗಳೂ ಪುರುಷ ಕೇಂದ್ರಿತವೇ ಆಗಿವೆ ಎಂಬ ಸಂಗತಿಯನ್ನು ಸ್ತ್ರೀವಾದಿಗಳು ಲಭ್ಯ ಸಾಕ್ಷ್ಯಗಳ ಆಧಾರದ ಮೇಲೆ ನಿರೂಪಿಸಿದ್ದಾರೆ. ಆದರೂ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಪುರುಷ ಕಟ್ಟಿದ ಜ್ಞಾನವು ನಮಗೂ ಅನ್ವಯವಾಗುತ್ತದೆ ಎಂದು ಸ್ತ್ರೀಯರು ಸ್ವೀಕರಿಸಿರುವ ಸಂದರ್ಭಗಳೂ ಇವೆ. ಆದರೂ ಪುರುಷ ಕೇಂದ್ರಿತ ಚಿಂತನೆಗಳು ಈ ಸಮಾಜದಲ್ಲಿ ಭದ್ರವಾಗಿ ನೆಲೆಯೂರಿ ಪರಿಣಾಮ ಬೀರಲು 'ಪಿತೃಸಂಸ್ಕೃತಿ'ಯ ಪರಿಕಲ್ಪನೆಯು ಒಂದು ಸಮರ್ಥವಾದ ಪಿತೂರಿ ಎಂಬ ಅರಿವು ಹಲವರಿಗೆ ಬಂದಿದೆ. ಪುರುಷ ಪ್ರತಿಪಾದಿಸುವಂತೆ ಇದು ಮನಕುಲದ ಉದ್ಧಾರಕ್ಕಾಗಿಯೇ ರೂಪಿಸಲಾದ ಜ್ಞಾನವಲಯ ಅದು ಮಹಿಳೆಯನ್ನೂ ಒಳಗೊಂಡಿದೆ ಎಂಬುದು ಭ್ರಮೆಯಲ್ಲದೆ ಮತ್ತೇನು ಅಲ್ಲ. ಆಕೆ ಈ ಕಟ್ಟುವ ಪ್ರಕ್ರಿಯೆಯಲ್ಲಿ ಯಾವುದೇ ಪಾತ್ರವನ್ನು ವಹಿಸಿಲ್ಲ ಹಾಗೂ ಆಕೆ ಅದರ ಭಾಗವಾಗಿಯೂ ಇಲ್ಲ. ಪುರಷನ ಅಧಿಪತ್ಯವನ್ನು ಅನೇಕ ಪ್ರತಿಮೆಗಳು ಸಂಕೇತಗಳ ಮೂಲಕ ಸ್ಥಾಪಿಸಲು ಭಾಷೆಯೂ ಅಪಾರ ನೆರವನ್ನು ಒದಗಿಸಿದೆ. ಅಂತಹ ಸೌಲಭ್ಯದಿಂದ ಸ್ತ್ರೀ ಸದಾ ವಂಚಿತಳಾಗಿದ್ದಾಳೆ. ಪುರುಷ ಕಟ್ಟಿದ ಜ್ಞಾನವಲಯದ ಒಳಗೆ ತನ್ನ ಸ್ವಾವಲಂಬನೆಯ ಬೇರುಗಳನ್ನು ಹುಡುಕಬೇಕಾದ ಸವಾಲು ಇಂದಿನ ಸ್ತ್ರೀಯರ ಮುಂದಿದೆ. ತನ್ನನ್ನು ಅರ್ಥಮಾಡಿಕೊಳ್ಳಲು, ತನ್ನ ಸಾಮರ್ಥ್ಯವನ್ನು ಸ್ಥಾಪಿಸಲು ಅರ್ಥ ಮಾಡಿಕೊಳ್ಳಬೇಕಾಗಿದೆಯೇ ಹೊರತು ಪುರುಷನಿಂದ ಪ್ರತ್ಯೇಕವಾಗಿ ಬದುಕಬೇಕೆಂಬ ಉದ್ದೇಶದಿಂದಲ್ಲ. ಇವರಿಬ್ಬರ ಬದುಕು ಪರಸ್ಪರ ಅವಲಂಬಿತವಾಗಿದೆ. ಈ ದಿಕ್ಕಿನಲ್ಲಿ ನಡೆದಿರುವ ಚಾರಿತ್ರಿಕ ಮಾಹಿತಿಗಳನ್ನು ಗಮನಿಸಿದಾಗ ಅದರಲ್ಲಿ ಅಡಗಿರುವ ಆಕೆಯ ಸಾಮರ್ಥ್ಯ ಸೂಕ್ಷ್ಮವಾಗಿ ಗೋಚರವಾಗುತ್ತದೆ. ಇಂತಹ ಮಹಿಳೆಯರ ಅನುಭವಗಳ ಜಾಡು ಹಿಡಿದು ಸ್ತ್ರೀವಾದಿ ಚಿಂತಕಿಯರು ಮಹಿಳೆಯ ವಾಸ್ತವದಲ್ಲಿರುವ ಚೈತನ್ಯದ ಸ್ವರೂಪ, ಅವರ ಜ್ಞಾನದ ಸ್ವರೂಪವನ್ನು ಗ್ರಹಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದ್ದಾರೆ.

ಆದರೂ, ಮಹಿಳೆಯರ ಈ ನಡೆಯನ್ನು ದಮನಿಸುವಂತಹ ಪ್ರವೃತ್ತಿ ಪುರುಷರಲ್ಲಿ ಇಂದಿಗೂ ಕಂಡುಬರುತ್ತಿದೆ. ಸ್ತ್ರೀಯರ ಸಾಧನೆಗಳ ಬಗ್ಗೆ ಅಸಹನೆ ತೋರುವುದು, ಅವಳ ಸ್ಪರ್ಧಾತ್ಮಕ ಮನೋಭಾವದಿಂದ ಹುಟ್ಟಿದ ಕೀಳರಿಮೆಗಳೇ ಮೂಲವಾಗಿ ಧರ್ಮಶಾಸ್ತ್ರಗಳೂ, ಸ್ಮೃತಿಗಳೂ ಅವಳ ಸ್ವಾತಂತ್ರವನ್ನು ಮೊಟಕುಗೊಳಿಸಲು ಮುಂದಾದದ್ದು ನಮಗೆ ತಿಳಿದ ಸಂಗತಿಯೇ ಆಗಿದೆ. ಸ್ತ್ರೀಯರು ತಮ್ಮ ಚಹರೆಗಳನ್ನು ಹುಡುಕುತ್ತಿರುವ ಅನೇಕ ಜ್ಞಾನವಲಯಗಳಲ್ಲಿ ಸಂಸ್ಕೃತಿ ಕೂಡ ಒಂದು. ಮಹಿಳೆಯನ್ನು ಅಧೀನ ನೆಲೆಗೆ ಕೊಂಡೊಯ್ಯಲು ರೂಪಿಸಲಾದ ಅನೇಕ ಷಡ್ಯಂತ್ರಗಳಲ್ಲಿ ಸಂಸ್ಕೃತಿಯ ಮೂಲಕ ರೂಪಿಸಲಾದ ಮಾದರಿಗಳು, ಆರೋಪಿಸಲಾದ ಸ್ತ್ರೀಧರ್ಮ, ಸ್ತ್ರೀ ಗುಣಗಳೇ ಇಂದಿಗೂ ಆಕೆಯನ್ನು ನಿಯಂತ್ರಿಸುತ್ತಿವೆ. ಇಂತಹ ಪುರುಷ ನಿರ್ಮಿತ ಜ್ಞಾನವಲಯದ ಹಿಂದಿರಬಹುದಾದ ಒಂದೇ ಉದ್ದೇಶ ಮಹಿಳೆ ಆತ ವಿಧಿಸಿದ ಗೆರೆಯನ್ನು ದಾಟಬಾರದು ಎಂಬುದೇ ಆಗಿದೆ. ಉದಾಹರಣೆಗೆ ಸಂಸ್ಕೃತಿಯನ್ನು

ಬಿಂಬಿಸುವ ರಾಮಾಯಣ ಕೃತಿಯಲ್ಲಿ ಬರುವ ಅನೇಕ ಸ್ತ್ರೀ ಪಾತ್ರಗಳು. ಪ್ರಸ್ತುತ ಅಧ್ಯಾಯದಲ್ಲಿ ನಾವು ಚರ್ಚೆಗೆ ತೆಗೆದುಕೊಂಡಿರುವ ಸ್ತ್ರೀ ಪಾತ್ರಗಳನ್ನು ಒಂದೊಂದನ್ನೇ ಗಮನಿಸೋಣ. ಕೈಕೇಯಿ ಪಾತ್ರ. ಸ್ತ್ರೀಯರು ಹಠ ಮಾಡಬಾರದು. ಸ್ತ್ರೀಯರಿಗೆ ಹಠ ಪುರುಷರಿಗೆ ಚಟ ಇದ್ದರೆ ನಾಶ ಖಂಡಿತಾ. ಕೈಕೇಯಿಯು ಮಾಡುವ ಹಠದಿಂದಾಗಿ ಇಡೀ ಅಯೋಧ್ಯೆ ದುಃಖದಲ್ಲಿ ಮುಳುಗುತ್ತದೆ. ಹಠ ಎನ್ನುವುದು ಸ್ತ್ರೀಯರಿಗೆ ಯೋಗ್ಯವಾದ ಗುಣವಲ್ಲ. ಅದನ್ನು ರೂಢಿಸಿಕೊಳ್ಳಬಾರದು. ಒಂದು ವೇಳೆ ಆ ಗುಣ ಸ್ತ್ರೀಯರಿಗಿದ್ದರೆ ಅದರಿಂದ ದುರಂತ ಕಟ್ಟಿಟ್ಟ ಬುತ್ತಿ ಎಂಬ ಸಂದೇಶವನ್ನು ಆ ಪಾತ್ರದ ಮೂಲಕ ನೀಡಲಾಗಿದೆ. ರಾಮಾಯಣ ನಡೆಯುವುದಕ್ಕೆ ಕಾರಣವಾದ ಇಂತಹ ಗುಣವನ್ನು ರೂಢಿಸಿಕೊಳ್ಳುವುದು ಸರಿಯಲ್ಲ ಎಂಬ ತಿಳುವಳಿಕೆಯನ್ನು ಸಂಸ್ಕೃತಿಯಲ್ಲಿ ಚರ್ಚಿತವಾದ ನಾಗರಿಕತೆಯ ಮೂಲಕ ನೀಡಲಾಗುತ್ತದೆ. ಇದನ್ನು ಒಡೆದು ಅದರೊಳಗಿರುವ ಸತ್ಯವನ್ನು ಕಂಡುಕೊಳ್ಳುವ ಪ್ರಯತ್ನವೇ ಇಂತಹ ಅಧ್ಯಯನಗಳ ಪ್ರಮುಖ ಉದ್ದೇಶ. ಈ ದಾರಿಯಲ್ಲಿ ಮಹಿಳೆ ಅನೇಕ ಚಳವಳಿಗಳು, ಹೋರಾಟಗಳು, ಅಧ್ಯಯನಗಳನ್ನು ಮಾಡುತ್ತಾ ಸಾಗಿರುವಾಗ ಪಿತೃಸಂಸ್ಕೃತಿಯ ಹರಿಕಾರರು ರಾಮಾಯಣದಲ್ಲಿನ ಇಂತಹ ಗುಣಗಳನ್ನು ಅನುಮಾನದಿಂದಲೇ ನೋಡುತ್ತಿರುವಾಗ ಅದಕ್ಕೆ ಸಮರ್ಥನೆ ನೀಡುವಂತಹ ಪ್ರಯತ್ನಗಳು ಈಗಲೂ ನಡೆಯುತ್ತಿರುವುದು ವಿಷಾದ. ಮನಸ್ಮೃತಿಯನ್ನು ಕುರಿತು ಡಾ. ಮ. ರಾಮಜೋಯಿಸ್ ಅವರು ನೀಡುವ ವಿವರಣೆ ಹಾಗೂ ರಾಮಾಯಣ ಪಾತ್ರಗಳನ್ನು ಕುರಿತು ಡಾ. ಕೆ.ಎಸ್. ನಾರಾಯಣಚಾರ್ ಅವರು ನೀಡುವ ವಿವರಣೆಗಳು ಇದಕ್ಕೆ ಉತ್ತಮ ಉದಾಹರಣೆ. ಇದು ಚರಿತ್ರೆಯಲ್ಲ, ಅದರಲ್ಲಿ ಅನೇಕ ಅಂಶಗಳು ಪ್ರಕ್ಷಿಪ್ತ. ಆಯಾ ಕಾಲದ ಅಗತ್ಯಗಳಿಗೆ ಅನುಗುಣವಾಗಿ ಅಗತ್ಯ ಸಂಗತಿಗಳು ಸೇರ್ಪಡೆಯಾಗಿವೆ ಎಂಬುದು ಚರ್ಚಿತವಾಗುತ್ತಿರುವ ಸಂಗತಿ. ಅದೇನೇ ಇರಲಿ ರಾಮಾಯಣದ ಪಾತ್ರಗಳು ಇಂದಿಗೂ ಸಮಾಜದಲ್ಲಿ ಪ್ರತಿಮೆಗಳಾಗಿ ನಿಂತಿವೆ. ನನ್ನ ಮಗ ರಾಮನಂತಿರಬೇಕು. ನನ್ನ ಸೊಸೆ ಸೀತೆಯಂತಿರಬೇಕು. ರಾಮಲಕ್ಷ್ಮಣರಂತಹ ಅಣ್ಣ-ತಮ್ಮಂದಿರು... ಹೀಗೆ ಸಾಗುತ್ತದೆ ಆದರ್ಶಪ್ರತಿಮೆಗಳ ವಿವರಣೆ. ಇಂತಹ ಸಂದರ್ಭದಲ್ಲಿ ಸಂಸ್ಕೃತಿ ಮಾದರಿಗಳನ್ನು ಗಟ್ಟಿಗೊಳಿಸುವ ಕಾರ್ಯ ಇಂದಿಗೂ ನಡೆಯುತ್ತಿದೆ. ಒಂದೆರಡು ಉದಾಹರಣೆಗಳ ಮೂಲಕ ಈ ಅಂಶವನ್ನು ಸಮರ್ಥಿಸಬಹುದಾಗಿದೆ. ಡಾ. ಕೆ.ಎಸ್. ನಾರಾಯಣಾಚಾರ್ಯ ಅವರು ರಾಮಾಯಣ ಮಹಾಭಾರತವನ್ನು ಭಿನ್ನ ದೃಷ್ಟಿಕೋನದಲ್ಲಿ ನೋಡಲು ಪ್ರಯತ್ನಿಸಿರುವ ಕ್ರಮ ಶ್ಲಾಘನೀಯ. ಕಳೆದ ದಶಕಗಳಿಂದ ಆದರ್ಶ ಪಾತ್ರಗಳ ಅವಗುಣಗಳು ಎಂದು ಏನನ್ನು ಗುರುತಿಸಿ ಅವು ಅನುಕರಣೀಯವಲ್ಲ ಎಂದು ಹೇಳುತ್ತಿರುವ ಸಂದರ್ಭದಲ್ಲೇ ಅವು ಸರಿ ಎಂದು ಸಮರ್ಥಿಸುತ್ತಿರುವುದು ವಿಷಾದನೀಯ. ಒಳ್ಳೆಯದು ಸದಾ ಇರಲಿ, ಸರಿಯಿಲ್ಲ ಎಂಬುದು ಸಮಾಜಕ್ಕೆ ಮಾರಕ, ಸಾಮಾಜಿಕ ಸ್ವಾಸ್ಥ್ಯ ಕೆಡಿಸುತ್ತದೆ ಎಂದರೆ ಅಂಥವುಗಳನ್ನು ಬಿಡುವುದು ಒಳಿತು. ಚಲನಚಿತ್ರದ ಒಂದು ಉದಾಹರಣೆಯನ್ನು ಉಲ್ಲೇಖಿಸಬಯಸುತ್ತೇನೆ. ಎಷ್ಟರಮಟ್ಟಿಗೆ ರಾಮಾಯಣ ಮಹಾಭಾರತಗಳು ಜನಮಾನಸದಲ್ಲಿ ಹಾಸುಹೊಕ್ಕಾಗಿವೆ ಎಂಬುದಕ್ಕೆ ಇದು ನಿದರ್ಶನ. ನಾಯಕನ ಸ್ನೇಹಿತ ನಾಯಕನಿಗೆ ನಿಮ್ಮ

ದಾಂಪತ್ಯ ಸೀತಾರಾಮರಂತಿರಲಿ ಎಂದು ಹರಸುತ್ತಾನೆ. ಅದಕ್ಕೆ ನಾಯಕ ಕೂಡಲೇ ಅವನಿಗೆ ಹಿಗ್ಗಾಮುಗ್ಗ ಚಚ್ಚಲು ಶುರುಮಾಡುತ್ತಾನೆ. ಆಗ ಅಲ್ಲಿ ಹಾದು ಹೋಗುತ್ತಿದ್ದ ಹಿರಿಯರೊಬ್ಬರು ಯಾಕಪ್ಪ ಅವನಿಗೆ ಅಷ್ಟೊಂದು ಥಳಿಸುತ್ತಿದ್ದೀಯಾ ಎಂದು ಕೇಳುತ್ತಾರೆ. ಅದಕ್ಕೆ ನಾಯಕ ನೋಡು ಅಜ್ಜ ಆತ ನನಗೆ ನಿಮ್ಮ ದಾಂಪತ್ಯ ಸೀತಾರಾಮರಂತಾಗಲಿ ಎಂದು ಹೇಳುತ್ತಿದ್ದಾನೆ ಎಂದು ಮತ್ತೆ ಥಳಿಸುತ್ತಾನೆ. ಅದಕ್ಕೆ ಹಿರಿಯಜ್ಜ, ಆತ ಹೇಳಿದ್ದರಲ್ಲಿ ತಪ್ಪೇನಿದೆ ಮಗ ಎಂದು ಕೇಳುತ್ತಾನೆ. ಅಲ್ಲ ಅಜ್ಜ ನೀವೂ ಹಾಗೇ ಹೇಳುತ್ತೀರಲ್ಲ. ರಾಮಸೀತೆ ಯಾವತ್ತಾದರು ಸುಖವಾಗಿದ್ದರೆ? ಅವರಂತೆ ನಾನು ವನವಾಸಕ್ಕೆ ಹೋಗಬೇಕೆಂಬುದು ಇವನ ಅಪೇಕ್ಷೆ ಎಂದು ತನ್ನ ಅಭಿಪ್ರಾಯವನ್ನು ತಿಳಿಸುತ್ತಾನೆ. ಅದಕ್ಕೆ ಹಿರಿಯ ಮನುಷ್ಯ ಮರುಮಾತಿಲ್ಲದೆ ಮುಂದೆ ಸಾಗುತ್ತಾನೆ.

ಅಂದರೆ ರಾಮಾಯಣ ಕಟ್ಟಿಕೊಟ್ಟ ಆದರ್ಶ ಮಾದರಿಗಳು ಇಂದು ಪ್ರಶ್ನಾರ್ಹವಾಗಿವೆ. ಆ ಕಾಲಘಟ್ಟದಲ್ಲಿ ಇರಬಹುದಾದ ರೀತಿ–ನೀತಿಗಳು ಇಂದಿಗೂ ಅನುಕರಣೀಯ ಎಂದು ಹೇಳುವುದು ಎಷ್ಟು ಪ್ರಸ್ತುತ. ರಾಮಾಯಣ ಮಹಾಭಾರತಗಳು ಸರ್ವಕಾಲಿಕ ಸತ್ಯಗಳನ್ನು ಪ್ರತಿಪಾದಿಸಿವೆ ಎಂದು ಹೇಳುವುದು ಎಷ್ಟು ಸಮಂಜಸ.

ನಾರಾಯಣಾಚಾರ್ಯ ಅವರು ವಾಲ್ಮೀಕಿ ಚಿತ್ರಿಸಿರುವ ಕೈಕೇಯಿ ಪಾತ್ರ ತುಂಬಾ ಸಹಜವಾದ ಚಿತ್ರಣ ಅದನ್ನು ಉದ್ಧರಿಸುವ ಭರದಲ್ಲಿ ತುಳಸೀ ರಾಮಾಯಣ, ಕಂಬರಾಮಾಯಣದಲ್ಲಿ ಅಸಹಜಗೊಳಿಸಿದ್ದಾರೆ ಎಂದು ಹೇಳುತ್ತಾ ವಾಲ್ಮೀಕಿಯ ಕೈಕೇಯಿ ಮನುಷ್ಯಸಹಜ ಮಿಶ್ರಸ್ವಭಾವದವಳು. ಒಲಿದರೆ ನಾರಿ, ಮುನಿದರೆ ಮಾರಿ ಎಂಬ ಗಾದೆಗೆ ಹೇಳಿ ಮಾಡಿಸಿದಂತಿರುವ ಉದಾಹರಣೆ ಎಂದು ಅಭಿಪ್ರಾಯ ಮಂಡಿಸುತ್ತಾರೆ. ಅಂದರೆ ಹಠ ಮಾಡುವುದು ಸ್ತ್ರೀಯರ ಸಹಜ ಸ್ವಭಾವ ಅದನ್ನು ಯಥಾವತ್ತಾಗಿ ವಾಲ್ಮೀಕಿ ಚಿತ್ರಿಸಿದ್ದಾನೆ ಎಂಬುದು ಇವರ ಅಭಿಪ್ರಾಯ. ಕೈಕೇಯಿ ಒಂದು ಬಗೆಯಲ್ಲಿ ಗಟ್ಟಿ ಹೃದಯದ ದಿಟ್ಟ ಹೆಣ್ಣು, ಹುಟ್ಟಿನಿಂದಲೇ ಭರತನನ್ನು ಬಿಟ್ಟಗಲಿ ಅಯೋಧ್ಯೆಯಲ್ಲಿ ತಾನು ಮಾತ್ರ ಬಾಳಲು ಸಿದ್ಧವಿದ್ದವಳು. ಅವಳ ಸೋದರ ಭರತನನ್ನು ಕೇಕಯ ರಾಜ್ಯಕ್ಕೆ ಚಿಕ್ಕಂದಿನಲ್ಲೇ ಕರೆದೊಯ್ದುಬಿಟ್ಟ. ಈ ಕೈಕೇಯಿಯ ಮಾತೃಹೃದಯ ಇದಕೊಪ್ಪಿತೆ? ಇದು ಸಹಜವೇ? ಎಂಬುದಕ್ಕು ಮೊದಲು ವಿಮರ್ಶಕರು ಉತ್ತರಿಸಬೇಕು. ದೊರೆಗೆ ತಾನು ಅಚ್ಚುಮೆಚ್ಚಿನ ರಾಣಿಯಾಗಿದ್ದು, ಅರಮನೆಯ ಸುಖ, ಭೋಗ, ತನ್ನ ದರ್ಪ ದರ್ಬಾರುಗಳ ವಿಲಾಸದಲ್ಲಿ ಪ್ರಾಯಃ ಭರತನ ಅಗಲಿಕೆಯನ್ನು ಮರೆಯಲು ಯತ್ನಿಸಿರಬೇಕು[೬೪] ಎಂದು ಇದಕ್ಕೆ ಸಮರ್ಥನೆ ನೀಡುತ್ತಾರೆ. ಅಂದರೆ ರಾಜವೈಭೋಗವಿದ್ದರೆ ತಾಯಿಗೆ ಮಗನೂ ಅಗತ್ಯವಿಲ್ಲ. ಹೆತ್ತಮಗನ ವಾಂಛೆ ಆಕೆಗಿಲ್ಲ. ಇದು ಕೈಕೇಯಿಯ ಸಹಜ ಸ್ವಭಾವ. ಆಕೆಯ ಸ್ವಭಾವವನ್ನು ಮತ್ತಷ್ಟು ಉದಾಹರಣೆಗಳ ಮೂಲಕ ಚಿತ್ರಿಸಿ ಸಹಜತೆ ಎಂದರೇನು ಎಂಬುದನ್ನು ಪ್ರತಿಪಾದಿಸುತ್ತಾರೆ. ಮಾತೃಶ್ರೀಯನ್ನು ಕುರಿತು ಭರತನಾಡುವ ಮಾತುಗಳನ್ನು ಗಮನಿಸೋಣ,

**ಆತ್ಮಕಾಮಾ ಸದಾ ಚಂಡೀ ಕ್ರೋಧನಾ ಪ್ರಾಜ್ಞಮಾನಿನೀ!**

**ಅರೋಗಾ ಚಾಪಿ ಮೇ ಮಾತಾ ಕೈಕೇಯೀ ಕಿಮುವಾಚ ಹ?**

**(ಅಯೋಧ್ಯಾಕಾಂಡ-೭೦-೧೦)**

ಸದಾ ತನ್ನ ಹಠವನ್ನೇ ಸಾಧಿಸುವಳೂ, ತನ್ನನ್ನು ತಾನೇ ಪ್ರೀತಿಸುವ ಅಹಂಕಾರೀ, ದುರಾಭಿಮಾನಿಯೂ, ಕೊಪಿಷ್ಠಳೂ, ತನ್ನನ್ನು ಎಲ್ಲ ಬಲ್ಲವಳೆಂದು ಭ್ರಮಿಸುವಳೂ ಆದ ನನ್ನ ತಾಯಿ ಯಾದ ಕೈಕೇಯಿಯು ಆರೋಗ್ಯವೇ? ಅವಳೇನು ಹೇಳಿ ಕಳುಹಿಸಿದಳು?[೬೫]

ತಾಯಿಯನ್ನು ಬಾಲ್ಯದಲ್ಲೇ ಬಿಟ್ಟು ಮಾವನ ಮನೆಗೆ ಹೋದ ಭರತನಿಗೂ ತಾಯಿಯ ಗುಣಸ್ವಭಾವಗಳ ಅರಿವು ಚೆನ್ನಾಗಿದೆ ಅಥವಾ ಸ್ತ್ರೀಯರೆಲ್ಲ ಇದೇ ರೀತಿ ಎಂಬ ಧೋರಣೆಯಿಂದ ಈ ಮಾತುಗಳನ್ನಾಡಿದನೋ ಏನೂ ತಿಳಿಯದು.

ಇದಕ್ಕೆ ನಾರಾಯಣಾಚಾರ್ ಅವರು ನೀಡುವ ಸಮರ್ಥನೆಯನ್ನು ಗಮನಿಸೋಣ;

"ಕೈಕೇಯಿಯು ಅಲ್ಲಿ ಮಾಡಿದ ಅನಾಹುತ ತಿಳಿಯುವ ಮೊದಲೇ, ಇನ್ನೂ ಲೋಕಾಭಿರಾಮವಾಗಿ ಕುಶಲಪ್ರಶ್ನೆ ಮಾಡುವಾಗಲೇ ಭರತ ಹೀಗೆ ಕೇಳಬೇಕಾದರೆ, ಇದು ಅವಳ ನಿಜ ಸ್ವಭಾವವೆಂಬುದರಲ್ಲಿ ಸಂದೇಹವೇ ಇಲ್ಲ"[೬೬]

ಸುಮಂತ್ರ, ವಶಿಷ್ಠ, ಸಿದ್ಧಾರ್ಥ ಮುಂತಾದ ಮಂತ್ರಿ, ಮುನಿಗಳೂ ದಶರಥನ ಸಮ್ಮುಖದಲ್ಲೇ ಕೇಕೇಯಿಗೆ ಹೀನಾಯವಾಗಿ ಶಪಿಸುತ್ತಾರೆ. ಜಗತ್ಪ್ರಸಿದ್ಧ ದುರ್ನಡತೆಯ ತಾಯಿಯ ಮಗಳೆಂಬುದನ್ನು ಮೊದಲೇ ಇವರು ತಿಳಿದಿದ್ದರು ಎಂದು ಹೇಳುತ್ತಾ ತಮಿಳಿನ ಒಂದು ಗಾದೆಯನ್ನು ಉಲ್ಲೇಖಿಸುತ್ತಾರೆ, "ತಾಯೈಪ್ಪಾರ್ತ್ತು ಮಗಳೈಕ್ಕೊಳ್ಳು, ಪಾಲೈಪ್ಪಾರ್ತು ಪಶುವೈಕ್ಕೊಳ್ಳು" ತಾಯಿಯನ್ನು ನೋಡಿ ಮಗಳನ್ನು ಪಡೆ, ಗೋವನ್ನು ಕೊಳ್ಳುವವರು ಅದೆಷ್ಟು ಹಾಲುಗರೆಯುತ್ತದೆ ಎಂಬುದನ್ನು ಗಮನಿಸಬೇಕು ಎಂಬುದು ಇದರ ತಾತ್ಪರ್ಯ. ಅಂದರೆ ಸ್ತ್ರೀಯನ್ನು ಒಂದು ಪಶುವಿಗೆ ಸಮಾನವಾಗಿ ಭಾವಿಸಿರುವುದು ಕಂಡುಬರುತ್ತದೆ. ರಾಜನ ಪತ್ನಿಯೇ ಆಗಲಿ, ಪಟ್ಟದರಸಿಯೇ ಆಗಲಿ, ಮೊದಲಿಗೆ ಆಕೆ ಸ್ತ್ರೀಯೆಂಬ ಧೋರಣೆಯಿಂದ ಅವರೆಲ್ಲ ಆಕೆಯನ್ನು ಅಷ್ಟೊಂದು ಕಠೋರವಾದ ಮಾತುಗಳಿಂದ ಬೈಯುತ್ತಾರೆ. ಇಲ್ಲಿ ಕೆಲವು ಗಾದೆ ಮಾತುಗಳನ್ನು ಉಲ್ಲೇಖಿಸಿ ಪುರುಷ ಪರವಾದ ಸಂಗತಿಗಳನ್ನು ಸಮರ್ಥಿಸುವ ಕೆಲಸ ನಡೆದಿರುವುದನ್ನು ಗಮನಿಸಿದ್ದೇವೆ. 'ತಾಯಿಯಂತೆ ಮಕ್ಕಳು ನೂಲಿನಂತೆ ಸೀರೆ', ಹೆಂಗಸು ಹಟ ಮಾಡಿ ಕೆಟ್ಟಳು ಗಂಡಸು ಚಟ ಕಲಿತು ಹಾಳಾದಳು ಮುಂತಾಗಿ. ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲ. ಇದು ಅನುಭವ ಜನ್ಯ ಮಾಗಿದ ನುಡಿಗಳು ಎಂಬ ಅನೇಕ ಮಾತುಗಳನ್ನು ಪದೆ ಪದೆ ಗಮನಿಸುತ್ತಿರುತ್ತೇವೆ. ಗಾದೆಗಳನ್ನು ಕಟ್ಟಿದವರ್ಯಾರು? ಅದನ್ನು ಕಟ್ಟಿದವರು ಮನುಷ್ಯರೇ ಅಲ್ಲವೆ. ಅದರಲ್ಲೂ ಪುರುಷರೇ ಅಲ್ಲವೆ. ಜನಪದರಲ್ಲಿ ಮಹಿಳೆಯರ ಸಂವೇದನೆಗೆ ಸ್ಥಾನವಿದೆ. ಸ್ತ್ರೀ ಸಮಾನತೆ ಇದೆ. ಅವರನ್ನು ಮಾತೃ ಸ್ವರೂಪಿಣಿಯಾಗಿ, ಪ್ರಕೃತಿಯ

ಪ್ರತಿರೂಪವಾಗಿ ಜನಪದರು ಕಾಣುತ್ತಾ ಬಂದಿದ್ದಾರೆ, ಎಂಬೆಲ್ಲ ಮಾತುಗಳಿವೆ. ಆದರೆ ಜನಪದ ಸಂಗ್ರಹಗಳನ್ನು ಮಾಡಿದವರೂ ಪುರುಷರೇ ಅಲ್ಲವೆ. ಡಾ. ಶೈಲಜಾ ಹಿರೇಮಠ ಅವರ ಮಾತು ಇದನ್ನು ಸಮರ್ಥಿಸುತ್ತದೆ, "ಒಡಮುಗಳು ಕೂಡ ಪುರುಷ ಪ್ರಧಾನ ಸಮಾಜದ ಅಪೇಕ್ಷೆಯ ಮೇರೆಗೆ ಸಂಗ್ರಹಿಸಲ್ಪಟ್ಟಿವೆಯೆನ್ನುವ ಶೈಲಜಾ ಅವರು ಅದರ ಹಿಂದಿರುವ ಪುರುಷ ರಾಜಕೀಯವನ್ನು ವಿವರಿಸಿದ್ದಾರೆ.[೬೭] ಸ್ವಾತಂತ್ರ್ಯ ಪೂರ್ವದ ಅವಧಿಯಲ್ಲಿ ಜನಪದ ಸಾಹಿತ್ಯ ಸಂಗ್ರಹಕಾರರು ಪುರುಷರೇ ಆಗಿದ್ದರೆಂಬುದನ್ನವರು ಉಲ್ಲೇಖಿಸುತ್ತಾರೆ. ವಿವಾಹ ವ್ಯವಸ್ಥೆಯನ್ನು ವಿರೋಧಿಸುವಂತಹ, ಅಲ್ಲಿಯೂ ಮಹಿಳೆ ನೋವು, ಸಂಕಟಗಳನ್ನು ಅನುಭವಿಸುತ್ತಿದ್ದಾಳೆ ಎಂಬುದು ಈ ತ್ರಿಪದಿಯಲ್ಲಿ ನಮಗೆ ಕಂಡುಬರುತ್ತದೆ.

**ಸುಡುವ ಬೆಂಕಿಗೆ ಎಣ್ಣೆಯ ಕೊಡನೊಯ್ದು**
**ಕುಂಬಳ ಕಾಯೊಯ್ದು ಕುಡಗೋಲಿಗೆ। ಕೊಟ್ಟಂತೆ**
**ಎಂಥವರಿಗೆ ಕೊಟ್ಟೆ ಹಡೆದವ್ವ॥**

ಡಾ. ಬಸವರಾಜ ಸಬರದ ಅವರು ಇದನ್ನು ಜನಪದ ಗರತಿ ನೊಂದೊಡಲಿನಿಂದ ಹಾಡುವ ತ್ರಿಪದಿ ಎಂದು ವಿವರಿಸುತ್ತಾರೆ. ಜನಪದ ಗರತಿಯ ಈ ನೋವಿನ ನುಡಿಯನ್ನು ನಿರ್ಲಕ್ಷಿಸಿ, ಮದುವೆ ಮತ್ತು ಕೌಟುಂಬಿಕ ನೆಲೆಗಳನ್ನು ಜನಪದ ವಿದ್ವಾಂಸರು ವೈಭವೀಕರಿಸಿದರೆ, ಸ್ತ್ರೀವಾದಿ ವಿಮರ್ಶೆ ವಸ್ತುಸ್ಥಿತಿಯನ್ನು ತೆರೆದಿಟ್ಟಿದೆ. ನಿರ್ಲಕ್ಷಿಸಲ್ಪಟ್ಟ ಗರತಿಯ ನೋವಿನ ಅಭಿವ್ಯಕ್ತಿಯನ್ನು ಸೈದ್ಧಾಂತಿಕವಾಗಿ ನಿರ್ವಚಿಸಿದೆ. ಅತ್ತೆ ಮಾವರಿಗಂಜಿ ಮತ್ತೆ ಮೈದುನಗಂಜಿ ಬಾಳುವ ಸ್ಥಿತಿ ಒಂದುಕಡೆಯಾದರೆ, ತವರಿಗೆ ಹೆಸರನ್ನು ತರುವುದಕ್ಕಾಗಿ ಆಕೆ ಪಡುವ ಪಾಡು ಶೋಚನೀಯವಾಗಿದೆ. ಉತ್ತಮರ ಮಗಳೆಂದು ಕರೆಯಿಸಿಕೊಳ್ಳಲು ಆಕೆ ತನ್ನತನವನ್ನೆಲ್ಲ ಬಿಟ್ಟು ಬದುಕಬೇಕಾಗುತ್ತದೆ.[೬೮]

ಜನಪದರಲ್ಲೂ ಹೆಣ್ಣನ್ನು ಎಷ್ಟೊಂದು ನಿಕೃಷ್ಟವಾಗಿ ಕಾಣಲಾಗಿದೆ ಎಂಬುದಕ್ಕೆ ಅನೇಕ ನಿದರ್ಶನಗಳೂ ನಮಗೆ ಜನಪದ ಸಂಗ್ರಹಗಳಲ್ಲಿ ಕಂಡುಬರುತ್ತದೆ. ಸತ್ನೀರಾಯನ ಕಥೆ, ಸಂಕಮ್ಮ ಕಥೆ, ಸಿರಿ ಕಥೆ, ಕೆರೆಗೆ ಹಾರ ಮುಂತಾದವುಗಳನ್ನು ಇಲ್ಲಿ ಉದಾಹರಿಸಬಹುದು. ಸತ್ತ ಅವಿವಾಹಿತ ರಾಕುಮಾರನಿಗೆ ಜೀವಂತ ಹೆಣ್ಣನ್ನು ಮದುವೆ ಮಾಡುವ ಪ್ರಸಂಗ, ಸತಿಯ ಪ್ರಾಮಾಣಿಕತೆಯನ್ನು ನಂಬದೆ ಸಂಕಮ್ಮನಿಂದ ಭಾಷೆ ಕೇಳುವ ಗಂಡನ ಚಿತ್ರಣ, ಹುಟ್ಟ ಸೀರೆಯನ್ನು ನೀಡಿ ಪ್ರೀತಿಯನ್ನೇ ಅವಮಾನಿಸಿದ ಸಿರಿಯ ಪ್ರಸಂಗ, ಅದರಲ್ಲೂ ಕೆರೆಗೆ ಹಾರದ ಬಲಿ ಪ್ರಸಂಗವನ್ನು ಜನಪದ ವಿದ್ವಾಂಸರು ಒಂದು ಸಂಪ್ರದಾಯದ ಆಚರಣೆ ಎನ್ನುವ ರೀತಿಯಲ್ಲಿ ವೈಭವೀಕರಿಸಿದ್ದಾರೆ. ಕೆರೆಗೆ ಬಲಿಯಾದ ಭಾಗೀರಥಿಯ ಪ್ರಸಂಗವನ್ನು ತೀನಂಶ್ರೀಯವರು ಕನ್ನಡ ಕಾವ್ಯಶ್ರೀಯ ಕಂಠದ ಹಾರ ಎಂದು ವರ್ಣಿಸಿದ್ದಾರೆ. ಸಮಷ್ಟಿ ಹಿತಕ್ಕಾಗಿ ವ್ಯಕ್ತಿ ಆತ್ಮಾರ್ಪಣೆಗೆ ಸಿದ್ಧವಾಗಿರಬೇಕೆಂಬುದೇ ಅದರ ಹಿಂದಿರುವ ತತ್ವ'ವೆಂದು ದೇಜಗೌ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇಲ್ಲಿ ಅವರು ಹೇಳುವ ವ್ಯಕ್ತಿ ಪುರುಷ ಏಕೆ ಆಗಲಿಲ್ಲ ಎಂಬುದು ಹಾಗೇ ಉಳಿಯುವ

ಪ್ರಶ್ನೆ. ಇದನ್ನೇ ಸಮರ್ಥಿಸುವಂತಿದೆ ಡಾ. ದೇವೇಂದ್ರಕುಮಾರ ಹಕಾರಿಯವರ ಮಾತುಗಳು, 'ಸಮಷ್ಠಿ ಹಿತಕ್ಕಾಗಿ ವ್ಯಷ್ಠಿಯ ಬಲಿ, ಅದೊಂದು ಸ್ವೀಕೃತ ಮೌಲ್ಯ, ಅದೇ ಭಾಗೀರತಿ ಪಾಲಿನ ನಿರ್ಣಯಾತ್ಮಕ ಮೌಲ್ಯ'. ಇವರು ಪ್ರತಿಪಾದಿಸುವ ಮೌಲ್ಯ ಸ್ತ್ರೀ ಬಲಿಯಲ್ಲದೆ ಮತ್ತೇನು. ಭಾಗೀರತಿಯ ಪತಿಪರಾಯಣತೆ, ಸೌಹಾರ್ದಪ್ರಿಯತೆ, ಆತ್ಮ ಬಲಿದಾನದಲ್ಲಿ ಅವಳಿಗಿದ್ದ ನಿಷ್ಠೆ ಗಮನ ಸೆಳೆಯುತ್ತದೆ ಎಂಬು ಹೇಳಿ ಆ ಬಲಿ ಆಕೆಯ ನಿಷ್ಠೆಯ ಪ್ರದರ್ಶನ ಎಂದು ಅಭಿಪ್ರಾಯಪಡುತ್ತಾರೆ. ಈ ಬಲಿ ಒಂದು ಕ್ಷಣ ನಮ್ಮ ಅಂತಃಕರಣವನ್ನು ಕಲಕಬಹುದಾದರೂ ಅವಳ ಉನ್ನತ ತ್ಯಾಗದ ಉಜ್ವಲ ಆದರ್ಶ, ಜನಪದ ಬದುಕಿನ ಒಂದು ಪರಮ ಮೌಲ್ಯ" ಎನ್ನುವ ಸಿ.ಪಿ.ಕೆ. ಮಾತು ಕೂಡ ಆತ್ಮಾರ್ಪಣೆ ಒಂದು ಮೌಲ್ಯ ಎಂದು ಪ್ರತಿಪಾದಿಸುತ್ತದೆ. ಜನಪದ ವಿದ್ವಾಂಸರಾದ ಜೀಶಂಪ ಅವರು ಆಡುವ ಮಾತುಗಳು ಕೂಡ ಸೋಜಿಗವೆನಿಸುತ್ತದೆ. ಜನತೆಯ ಉಪಕಾರಾರ್ಥವಾಗಿ ಪ್ರಾಣಾರ್ಪಣೆ ಮಾಡಿದ ಹೆಣ್ಣಿನ ತ್ಯಾಗ ದೊಡ್ಡದು. ಈ ಎಲ್ಲ ವಿದ್ವಾಂಸರ ಅಭಿಪ್ರಾಯ ಪಿತೃಸಂಸ್ಕೃತಿಯ, ವೈದಿಕ ಚಿಂತನೆಯ ಫಲಶೃತಿಯೆಂಬಂತೆ ಕಂಡುಬರುತ್ತದೆ. ವಸ್ತು ಯಾವುದೇ ಇರಲಿ ನೋಡುಗನ ಮನಸ್ಥಿತಿಗೆ ಅನುಗುಣವಾಗಿ ಅದು ವರ್ಣನೆಗೆ ಒಳಪಡುತ್ತದೆ. ಪುರುಷ ನಿರ್ಮಿತ ಮೌಲ್ಯಗಳನ್ನೇ ಇವು ಪ್ರತಿಪಾದಿಸುತ್ತವೆ. ಒಟ್ಟಾರೆ ಜನಪದವೇ ಆಗಲಿ ಸಾಹಿತ್ಯವೇ ಆಗಲಿ ಅವೆಲ್ಲ ಪುರುಷ ನಿರ್ಮಿತ ಜ್ಞಾನವಲಯದ ರೆಂಬೆಕೊಂಬೆಗಳೇ ಎಂಬುದು ನಿಶ್ಚಯ. ಇಲ್ಲಿ ಶೋಷಣೆ ಎಂಬುದು ಸಾಮಾನ್ಯ ಸಂಗತಿಯಾಗಿ ಗೋಚರವಾಗುತ್ತದೆ. ಇದು ಪುರುಷನ ಜನ್ಮಸಿದ್ಧ ಹಕ್ಕು ಎಂಬಂತೆ ನಡೆದುಹೋಗುತ್ತದೆ. ಭಾಗೀರಥಿಯ ಮನಸ್ಸಿನ ಆಳದ ಭಾವನೆಗಳೇನು ಎಂಬುದರ ಕಡೆ ಯಾರೂ ಗಮನ ಹರಿಸುವುದಿಲ್ಲ.

ಮತ್ತೆ ನಾವು ಕೈಕೇಯಿಯ ಪ್ರಸಂಗಕ್ಕೆ ಬರೋಣ. ಕೈಕೇಯಿಯಲ್ಲಿರಬಹುದಾದ ಅವಗುಣ ಆಕೆಯದಲ್ಲ ಅದು ದೈವನಿಯಮ ಎಂದು ಕೈತೊಳೆದುಕೊಂಡು ಚರ್ಚೆಯೇ ಇಲ್ಲದಂತೆ ಇತಿಶ್ರೀ ಹಾಡಿದ ಕವಿಗಳೂ ಇದ್ದಾರೆ. ಅದರಿಂದ ಅಷ್ಟೇನು ಪ್ರಯೋಜನವಾಗುವುದಿಲ್ಲ. ಆದರೆ ಭೋಜ ಕವಿಯ ಚಂಪೂರಾಮಾಯಣದಲ್ಲಿ ಕೈಕೇಯಿಯ ಅವಗುಣಕ್ಕೆ ಕಾರಣ ಮಂಥರೆ ಎಂದು ಹೇಳುವ ಪ್ರಯತ್ನ ನಡೆದಿರುವುದು ಕಂಡುಬರುತ್ತದೆ. ಅದನ್ನು ಕವಿ ಭೋಜ ಕಾವ್ಯಮಯವಾಗಿ ಕಟ್ಟಿಕೊಟ್ಟಿದ್ದಾನೆ, "ಕೈಕೇಯಿಯ ಹೃದಯ ಶಿಲೆ ಎಂಬುದು ನಿಜವಾದರೂ, ಚಂದ್ರನಿಗೆ ಮಾತ್ರ ಕರಗುವ ಉಳಿದಲ್ಲಿ ಕಠಿಣವಾಗೇ ಇರುವ ಸ್ವಭಾವದ್ದು. ಇಲ್ಲಿ ರಾಮನೋ ಚಂದ್ರ! ಪೂರ್ಣಚಂದ್ರ! ಆ ಚಂದ್ರನಿಗೆ ಈ ಶಿಲೆ ಕರಗುವುದಿಲ್ಲ. ಆದರೆ, ಅಂದು ಮಾತ್ರ ಮಂಥರೆಯೆಂಬ ವಕ್ರವಾದ ಬಳ್ಳಿಯೊಂದು ಆ ಹೃದಯ ಶಿಲೆಯನ್ನು ಪೂರ್ಣವಾಗಿ ಮುಚ್ಚಿ ರಾಮನ ಗುಣಗಳಿಗೆ ಅಂದು ಕರಗದಂತೆ ಮಾಡಿಬಿಟ್ಟಿತು."[೬] ಲೇಖಕರು ಪ್ರತಿಪಾದಿಸುವಂತೆ ಕೈಕೇಯಿಯಲ್ಲಿರಬಹುದಾದ ಸಹಜಗುಣವನ್ನು ಮರೆಮಾಚಲು ಭೋಜನಾಗಲಿ, ತುಳಿಸಿದಾಸರಾಗಲಿ ಏಕೆ ಪ್ರಯತ್ನಿಸಿದರು. ಈ ಸ್ತ್ರೀಯಲ್ಲಿ ದುಷ್ಟಗುಣ ಇಲ್ಲ ಎಂದು ಹೇಳಿ ಸಾಬೀತುಪಡಿಸಲು ಮಂಥರೆಯಲ್ಲಿ ದೋಷ

ಹುಡುಕಲಾಯಿತು. ಮಂಥರೆಯದ್ದು ದೋಷವಿಲ್ಲ ಎಂದು ಸರಸ್ವತಿಯೇ ಅವಳ ನಾಲಿಗೆಯ ಮೇಲೆ ಹಾಗೇ ನುಡಿಸಿದಳು ಎಂದೂ ಹೇಳಿದ್ದಾಯಿತು. ಒಟ್ಟಾರೆ ರಾಮಾಯಣದಲ್ಲಿ ಒಂದು ವೇಳೆ ಅನರ್ಥಗಳಿದ್ದರೆ ಅದು ಸ್ತ್ರೀ ಪಾತ್ರಗಳಿಂದಲೇ ಆಗಿರುವಂತದ್ದು ಎಂಬುದೇ ಅವರ ವಾದವಲ್ಲವೆ.

ಕೈಕೇಯಿಯ ನಡವಳಿಕೆ ಸಹಜವಾದದ್ದು ಅದನ್ನು ನೇರವಾಗಿ ಕಂಡಿದ್ದ ವಾಲ್ಮೀಕಿ ಸಹಜವಾಗಿಯೇ ಚಿತ್ರಿಸಿದ್ದಾರೆ ಎಂದು ಹೇಳುವ ನಾರಾಯಣಾಚಾರ್ ಅವರ ಅಭಿಪ್ರಾಯವನ್ನು ಒಂದು ಕ್ಷಣ ಒಪ್ಪೋಣ ಅಥವಾ ಇದು ಸ್ತ್ರೀಯರ ಸಹಜ ಗುಣ ಎಂದೇ ನಂಬೋಣ. ಈ ಸಹಜತೆ ಅಹಲ್ಯೆಯ ಪ್ರಸಂಗದಲ್ಲಿ ಏಕೆ ಕಂಡುಬರುವುದಿಲ್ಲ. ಆಕೆಯ ಸಹಜ ಲೈಂಗಿಕಾಪೇಕ್ಷೆ ತಪ್ಪೆಂದು ಗ್ರಹಿಸಿದ್ದೇಕೆ. ಅದು ಮನುಷ್ಯನ ಮೂಲಭೂತವಾದ ಸಹಜವಾದ ಅಪೇಕ್ಷೆಯಲ್ಲವೆ. ಸ್ತ್ರೀಯರಿಗೆ ಮಾತ್ರ ಲೈಂಗಿಕ ಸ್ವಾತಂತ್ರ್ಯದ ನಿರ್ಬಂಧ ಏಕೆ. ಪು.ತಿ. ನರಸಿಂಹಾಚಾರ್ ಅವರ 'ಅಹಲ್ಯೆ' ನಾಟಕವನ್ನು ಗಮನಿಸಿದರೆ ಇಂದ್ರನನ್ನು ಕೂಡುವ ಪೂರ್ವದಲ್ಲಿ ಅಹಲ್ಯೆಯ ಸ್ಥಿತಿ ಹೇಗಿತ್ತು ಎಂಬುದನ್ನು ಪು.ತಿ.ನ. ಅವರು ಸವಿವರವಾಗಿ ವರ್ಣಿಸಿದ್ದಾರೆ. ಅದನ್ನು ತೀ.ನಂ.ಶ್ರೀ ಅವರು ಮುನ್ನುಡಿಯಲ್ಲಿ ಹೀಗೆ ಚರ್ಚಿಸಿದ್ದಾರೆ, 'ಈ ಕಥೆಯೆಲ್ಲಕ್ಕೂ ಮೂಲ ಬೀಜ ಅವರವರ ಪ್ರವೃತ್ತಿಯಲ್ಲೇ ಹೇಗೆ ಇತ್ತೆಂಬುದು ನಾಟಕದಲ್ಲಿ ಸುಸ್ಪಷ್ಟವಾಗುತ್ತದೆ. ಅಹಲ್ಯೆ ಪತಿಯೊಂದಿಗೆ ಸಂಸಾರ ಹೂಡಿ ಇನ್ನೂ ಹೆಚ್ಚು ದಿನವಾಗಿಲ್ಲ. ಪ್ರಥಮಾನುರಾಗದ ಫಲವಾಗಿ ಮಗನೊಬ್ಬನು ಜನಿಸಿದ ಬಳಿಕ, ಇಬ್ಬರೂ ಒಟ್ಟಿಗೇ ಬಾಳುತ್ತಿದ್ದರೂ ಒಬ್ಬರ ಹಂಬಲವನ್ನೊಬ್ಬರು ಅರಿತುಕೊಳ್ಳದೇ ಹೋಗುವರು. ಗೌತಮನು ಮೂರು ಲೋಕವನ್ನು ಗೆಲ್ಲುವಂಥ ಶಕ್ತಿಯನ್ನು ಸಾಧಿಸಬೇಕೆಂದು ಹಠತೊಟ್ಟು ಉಗ್ರತಪಸ್ಸಿನಲ್ಲಿ ಮಗ್ನನಾಗಿದ್ದಾನೆ; ಇದಕ್ಕಾಗಿ ತನ್ನ ಇಂದ್ರಿಯಗಳನ್ನೆಲ್ಲಾ ಅದುಮಿ, ಧರ್ಮಪತ್ನಿಯನ್ನು ಕೂಡ ಉಪೇಕ್ಷಿಸಿ, ಶುಷ್ಕ ನಿಯಮಗಳನ್ನು ಪಾಲಿಸುತ್ತಾ ಒತ್ತಟ್ಟಿಗಿದ್ದಾನೆ. ಇತ್ತ ಅಹಲ್ಯೆ ಒಂಟಿ; ಭೋಗದ ಆಸೆ ಇನ್ನು ತಣಿಯದ ಎಳೆ ಹರೆಯದಲ್ಲಿ ಒಂಟಿ. ಅಲ್ಲದೆ ಈ ತಪಸ್ಸಿನಿಂದ ತನ್ನ ಗಂಡನು ಸಾಧಿಸುವ ಫಲದಲ್ಲಿ ಅವಳಿಗೆ ನೆಚ್ಚಿಕೆಯೂ ಕಡಿಮೆ. ಇಂತಹ ಸಂದರ್ಭದಲ್ಲಿ ಇಂದ್ರನ ಪ್ರವೇಶವಾಗುತ್ತದೆ. ಭೋಗಾಪೇಕ್ಷೆಯ ಹಸಿ ಅವಳ ಹೃದಯದಲ್ಲಿ ಇದ್ದೇ ಇತ್ತು; ಪತಿಯ ಉಪೇಕ್ಷೆ ಅದನ್ನು ಇನ್ನಷ್ಟು ಹೆಚ್ಚಿಸಿತು. ಇದರ ಜೊತೆಗೆ ತಾನೂ ಸಮಸ್ತರೂ ಅರ್ಚಿಸಿ ಆರಾಧಿಸುತ್ತಿದ್ದ ಇಂದ್ರನ ಸಿರಿ ಅವಳ ಮನಸ್ಸನ್ನು ಮರುಳುಗೊಳಿಸಿತ್ತು. ತಕ್ಕ ಕಾಲದಲ್ಲಿ ಗಂಡನು ಬಹಿರ್ಮುಖವಾಗಿ, ತನ್ನ ಬಳಿಗೆ ಬಂದಿದ್ದ ಮಡದಿಯನ್ನು ಲಲ್ಲೈಸಿ ತನ್ನ ಪ್ರೇಮದ ರಕ್ಷೆಯನ್ನು ಕಟ್ಟಿದ್ದರೆ,- ಅವಳು ಮುಂದಿನ ದುಃಖಕ್ಕೆ ಗುರಿಯಾಗುತ್ತಿರಲಿಲ್ಲ.[೨೦]

ಇದು ಆಕೆಯ ಸಹಜ ಬಯಕೆಯಲ್ಲವೆ. ಒಂದು ವೇಳೆ ಇದು ಅಧರ್ಮ ಎಂದರೆ ಪುರುಷನಿಗೆ ಈ ಧರ್ಮ ಅನ್ವಯವಾಗುವುದಿಲ್ಲವೆ. ಪ್ರಕೃತಿ ನಿಯಮದಂತೆ ಸಹಜವಾಗಿ ಪ್ರತಿ ಜೀವಿಗೂ ದೊರೆಯಬೇಕಾದ ಎಲ್ಲ ಸೌಖ್ಯವೂ ದೊರೆಯದಿದ್ದರೂ ಅದನ್ನು ಹತ್ತಿಕ್ಕಬೇಕೆ. ಕೈಕೇಯಿಗೆ ಇರಬಹುದಾದ ಹಠ, ಸಿಡುಕುತನ, ಸವತಿ ಮತ್ಸರ- ಮುಂತಾದ ಭಾವನೆಯಂತೆ ಇದು ಒಂದು ಭಾವನೆಯಲ್ಲವೆ. ನಾವು ಈಗಾಗಲೇ ವಿವಾಹ

ವ್ಯವಸ್ಥೆ ಜಾರಿಗೆ ಬಂದದ್ದರಿಂದ ಆಗಿರುವ ಅನಾಹುತಗಳು, ಪುರುಷ ಅಧಿಪತ್ಯದ ಸ್ಥಾಪನೆ ಮುಂತಾದ ಅಂಶಗಳ ಬಗ್ಗೆ ಚರ್ಚಿಸಿದ್ದೇವೆ. ಒಟ್ಟಾರೆ ಸಂಸ್ಕೃತಿಯ ಮಾದರಿಗಳ ಮೂಲಕ ಸ್ತ್ರೀಯರ ಬದುಕಿನ ರೀತಿ-ನೀತಿಗಳನ್ನು ನಿರ್ಧರಿಸಲಾಗಿದೆ ಎಂಬುದು ಇವುಗಳಿಂದ ಮತ್ತೆ ಸ್ಪಷ್ಟವಾಗುತ್ತದೆ. ಈವರೆಗೆ ಮರುಸೃಷ್ಟಿಯಾದ ಅನೇಕ ರಾಮಕಥೆಗಳು ಆಯಾ ಸಂದರ್ಭದಲ್ಲಿ ಪ್ರಚಲಿತದಲ್ಲಿದ್ದ ಧರ್ಮ, ಪಂಥ, ಆಚಾರ, ವಿಚಾರಗಳು, ರೀತಿ ನೀತಿಗಳನ್ನು ಪ್ರತಿಪಾದಿಸಲು ಹೊಸ ರೂಪಗಳನ್ನು ಪಡೆದುಕೊಂಡಿವೆ. ಕೆಲವು ಅಹಿಂಸೆಯನ್ನು ಪ್ರತಿಪಾದಿಸಿದರೆ, ಮತ್ತೆ ಕೆಲವು ರಾಜಧರ್ಮವನ್ನು, ಸ್ತ್ರೀ ಧರ್ಮವನ್ನು ಪ್ರತಿಪಾದಿಸಿವೆ. ಇವ್ಯಾವು ಪಿತೃ ಸಂಸ್ಕೃತಿಯ ವಿರುದ್ಧದ ನಡೆಯನ್ನು ಬಿಂಬಿಸಲು ಪ್ರಯತ್ನಿಸಿಲ್ಲ. ಅಲ್ಲಲ್ಲಿ ಕೆಲವು ಘಟನೆಗಳನ್ನಾಧರಿಸಿ ರಚಿಸಲಾದ ಕಾವ್ಯಗಳು, ನಾಟಕಗಳು, ಲೇಖನಗಳನ್ನು ಹೊರತುಪಡಿಸಿದರೆ ಸಮಗ್ರವಾಗಿ ಸ್ತ್ರೀ ಸಮಾನತೆ, ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಿಲ್ಲ. ಪಿತೃ ಸಂಸ್ಕೃತಿ, ಪುರುಷ ಪ್ರಾಧಾನ್ಯತೆಯನ್ನು ಪ್ರಗತಿಪರರು ಪ್ರಶ್ನಿಸುತ್ತಿರುವ ಈ ಹೊತ್ತಿನಲ್ಲಿ ಈ ಹಿಂದಿನ ಮಹಾಕಾವ್ಯ, ಸ್ಮೃತಿಗಳ ಮಾದರಿಗಳು ಇಂದಿಗೂ ಅನುಕರಣೀಯ ಎಂದು ಹೇಳುವಂತಹ ಪ್ರಯತ್ನಗಳು ಅಷ್ಟೇ ಪ್ರಮಾಣದಲ್ಲಿರುವುದು ಸುಳ್ಳಲ್ಲ. ಈ ಹಿಂದೆ ಪ್ರಸ್ತಾಪಿಸಿದಂತೆ ರಾಮಾಜೋಯಿಸರು ಮನಸ್ಮೃತಿಯಲ್ಲಿ ಶಾಶ್ವತ ಜೀವನ ಮೌಲ್ಯಗಳು ಎಂಬ ಶೀರ್ಷಿಕೆಯ ಕೃತಿಯಲ್ಲಿ ಸ್ತ್ರೀ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಮನು ಹೇಳಿರುವ ಸಂಗತಿಗಳು ಇಂದಿಗೂ ಪ್ರಸ್ತುತ ಎಂದು ಸಮರ್ಥಿಸುತ್ತಾರೆ. ಒಂದೆರಡು ಉದಾಹರಣೆಗಳನ್ನು ಇಲ್ಲಿ ಉಲ್ಲೇಖಿಸಿ ಚರ್ಚಿಸುವುದು ಉಚಿತವೆಂಬುದು ನನ್ನ ಅಭಿಪ್ರಾಯ, ರಾಮಾ ಜೋಯಿಸರು ಹೇಳುವಂತೆ, ಪ್ರತಿಯೊಬ್ಬ ಸ್ತ್ರೀಯೂ ತಾಯಿಯಾಗಬಲ್ಲವಳಾದ್ದರಿಂದ ಆಕೆಯನ್ನು ದೇವರೆಂದು ತಿಳಿಯಬೇಕು ಎಂಬ ಸಾಂಸ್ಕೃತಿಕ ಮೌಲ್ಯ ಬೆಳೆದು ಬಂದಿದೆ. ಈ ಮೌಲ್ಯದ ಆಧಾರದ ಮೇಲೆ ಪತ್ನಿಯೊಬ್ಬಳನ್ನು ಹೊರತು ಮಿಕ್ಕೆಲ್ಲ ಸ್ತ್ರೀಯರನ್ನು ತಾಯಿಯೆಂದು ಕಾಣಬೇಕೆಂಬ ಜೀವನ ಮೌಲ್ಯವೂ ಜಾರಿಗೆ ಬಂದಿದೆ. ಪರಿಣಾಮವಾಗಿ ಪ್ರತಿಯೊಬ್ಬ ಸ್ತ್ರೀಯನ್ನು ಮತ್ತು ಒಬ್ಬ ಚಿಕ್ಕ ಬಾಲಕಿಯನ್ನು ಸಹ ಮಾ, ಅಮ್ಮ ಎಂದು ಕರೆಯುತ್ತೇವೆ, ಅಂದರೆ ತಾಯಿ ಎಂದು ಸಂಬೋಧಿಸುತ್ತೇವೆ.

ಆ ಮೌಲ್ಯವನ್ನು ಪುರುಷರ ಕಾಮುಕ ಪ್ರವೃತ್ತಿಗೆ ಪ್ರತಿರೋಧಕವಾಗಿ ಸೃಷ್ಟಿಸಿ ಬೆಳಸಿದಂತೆ ಕಾಣುತ್ತದೆ. ಏಕೆಂದರೆ ಪುರುಷನ ಹೃದಯದಲ್ಲಿ, ಮನಸ್ಸಿನಲ್ಲಿ ಪ್ರತಿ ಸ್ತ್ರೀಯು ತಾಯಿ ಎಂಬ ಮೌಲ್ಯವು ಅಂಕಿತವಾದರೆ ಸ್ತ್ರೀಯ ವಿರುದ್ಧ ಅಪರಾಧವೆಸಗುವ ಕೆಟ್ಟ ಯೋಚನೆಗಳು ನಾಶವಾಗುತ್ತವೆ. ಅಂತಹ ಮೌಲ್ಯಗಳನ್ನು ಪ್ರತಿ ಒಬ್ಬ ವ್ಯಕ್ತಿ ಬೆಳಸಿಕೊಂಡರೆ ಸ್ತ್ರೀಯರ ಮೇಲೆ ಆಘಾತ ಮಾಡುವ ಹಾಗೂ ಅನೈತಿಕ ಲೈಂಗಿಕ ಪ್ರವೃತ್ತಿಗೆ ಅದು ಕಡಿವಾಣವಾಗುತ್ತದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇಂತಹ ಮೌಲ್ಯವನ್ನು ಕಂಡುಹಿಡಿದಿದ್ದು ಮತ್ತು ಅದನ್ನು ಬೆಳೆಸಿದ್ದು ಮಾನವೀಯತೆಗೆ ನಮ್ಮ ಪೂರ್ವಜರ ಒಂದು ಅಮೂಲ್ಯ ಕೊಡುಗೆ. ವಾಸ್ತವವಾಗಿ

ಈ ಭೂಮಿಯಲ್ಲಿ ನಡೆದ ಎರಡು ಮಹಾಯುದ್ಧಗಳಾದ ರಾಮ-ರಾವಣ ಯುದ್ಧ ಹಾಗೂ ಪಾಂಡವ ಕೌರವರ ಯುದ್ಧಗಳಿಗೆ ಕಾರಣ ಒಬ್ಬ ಸ್ತ್ರೀ ಅಂದರೆ ಸೀತೆ ಮತ್ತು ದ್ರೌಪದಿಯ ಮೇಲೆ ಮಾಡಿದ ಆಘಾತ"[೭೧]

ರಾಮಾಯಣ, ಮಹಾಭಾರತದ ಮಹಾಯದ್ಧಗಳಿಗೆ ಇಬ್ಬರು ಸ್ತ್ರೀಯರು ಕಾರಣ ಎಂಬ ಅಭಿಪ್ರಾಯ ಮೂಡುವ ಚರ್ಚೆಯಿಂದಾಗಿ ನಾನು ಇದನ್ನು ಆಯ್ಕೆ ಮಾಡಿಕೊಂಡೆ. ರಾಮಾಯಣದ ಸ್ತ್ರೀ ಪಾತ್ರಗಳನ್ನು ಕುರಿತು ಚರ್ಚಿಸುವ ಸಂದರ್ಭದಲ್ಲಿ ಮನವಿನ ಮನಸ್ಸಿನಲ್ಲಿ ಇರುವ ಸ್ತ್ರೀಪರವಾದ ಆಲೋಚನೆಗಳ ವಾಸ್ತವವೇನು ಎಂಬುದನ್ನು ಗಮನಿಸುವ ಉದ್ದೇಶ ನನ್ನದು. ಮನಸ್ಮೃತಿಯ ಅನೇಕ ಪುರುಷವಾಕ್ಯಗಳ ಬಗ್ಗೆ ಅನೇಕ ಚರ್ಚೆಗಳು, ಅಭಿಪ್ರಾಯಗಳು ಈಗಾಗಲೇ ಮಂಡನೆಯಾಗಿವೆ. ರಾಮಾಯಣದ ಸ್ತ್ರೀ ಪಾತ್ರಗಳ ಸ್ಥಿತಿಗೂ ಮನುವಿನ ಆಲೋಚನಾ ಕ್ರಮಕ್ಕೂ ಸಾಮ್ಯತೆಯಿದೆ. ರಾಮಾಜೋಯಿಸರೇ ಹೇಳುವ ಮಾತುಗಳಲ್ಲೇ ಸ್ತ್ರೀಯನ್ನು ಪ್ರತ್ಯೇಕಿಸಿ ನೋಡುವ ಪರಿಭಾಷೆ ಕಂಡುಬರುತ್ತದೆ. ಮನುಷ್ಯರು ಎಂದರೆ ಸ್ತ್ರೀ ಪುರುಷರು ಎಂಬ ಭಾವನೆ ಕಂಡುಬರುವುದಿಲ್ಲ. ಪುರುಷ ಎಂದರೆ ಕಾಮುಕ ಎಂದು ಪರಿಭಾವಿಸಿದ್ದಾರೆ. ಸ್ತ್ರೀ ರಕ್ಷಣೆಯ ನೆಪದಲ್ಲಿ ಆಕೆಯನ್ನು ಅಬಲೆಯೆಂದು ಸಾರಿದ್ದಾರೆ. ಅವರು ಹೇಳುವಂತೆ ಅದು ಒಂದು ಮೌಲ್ಯವಾಗಿದ್ದಿದ್ದರೆ. ಇಂದು ಆಗುತ್ತಿರುವ ಅತ್ಯಾಚಾರ, ಅನೈತಿಕತೆ, ಸಲಿಂಗಕಾಮ, ದೇವದಾಸಿ ಪದ್ಧತಿ, ವೇಶ್ಯಾವಾಟಿಕೆ ಇವೆಲ್ಲ ಏನು. ಅವರು ಹೇಳುವ ಮೌಲ್ಯಕ್ಕೆ ಇವುಗಳನ್ನು ತಡೆಯುವ ಸಾಮರ್ಥ್ಯ ಇಲ್ಲವಾಗಿದೆಯೇ, ಅದೊಂದು ಕೇವಲ ಆದರ್ಶವಾಗಿ ಉಳಿದಿದೆಯೇ. ಮನುಷ್ಯನ ಪ್ರವೃತ್ತಿಯಲ್ಲಿ ಇಂತಹ ಬದಲಾವಣೆಗೆ ಕಾರಣಗಳೇನು. ಯಾವುದೇ ಅನಾಹುತ ಅವಘಡಕ್ಕೆ ಸ್ತ್ರೀ ಮಾತ್ರ ಕಾರಣಳೇ. ಲೈಂಗಿಕತೆ ಎನ್ನುವುದು ಸ್ತ್ರೀ ಪುರುಷರಿಗೆ ಬೇರೆ ಬೇರೆಯೇ ಇರುತ್ತದೆಯೇ. ಮನಸ್ಸೆಂಬುದು ಲಿಂಗಾಧಾರಿತವಾಗಿ ವ್ಯತ್ಯಾಸವಾಗುತ್ತದೆಯೇ. ಇಂತಹ ಅನೇಕ ಪ್ರಶ್ನೆಗಳು ಪ್ರಸ್ತುತ ಸಾಮಾಜಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಉದ್ಭವಿಸುತ್ತವೆ. ಇದಕ್ಕೆ ಸಂಸ್ಕೃತಿಯಲ್ಲಿ, ನಾಗರೀಕತೆ ಎಂಬ ಪರಿಕಲ್ಪನೆಯಲ್ಲಿ ಉತ್ತರ ಲಭಿಸುತ್ತದೆ ಎಂದರೆ, ಅದೂ ಕೂಡ ನಿಗೂಢವಾಗಿರುವುದು ಕಂಡುಬರುತ್ತದೆ. ಗೋಚರಿಸುವ ಸತ್ಯವೇ ಬೇರೆ, ಅಂತರ್ಯದ ಅರ್ಥವೇ ಬೇರೆಯಾಗಿರುತ್ತದೆ.

ಡಾ. ಸಿ.ಎನ್.ಆರ್. ಅವರು ಹೇಳುವಂತೆ ಇದು ಲೈಂಗಿಕ ಭೀತಿಯಿಂದ ಉಂಟಾದ ಕ್ರಮವೇ ಆಗಿದೆ. ಪೋಲಂಕಿಯವರು ಕೂಡ ಇದನ್ನು ಬಿಡಿಸಿ ನೋಡುವ ಪ್ರಯತ್ನ ಮಾಡಿದ್ದಾರೆ, 'ಹೆಣ್ಣಿನ ಬಗೆಗಿನ ಲೈಂಗಿಕ ಅಸ್ಪೃಶ್ಯತೆ ಹೆಣ್ಣು ಎಳೆಯ ಮಗುವಾದಂದಿನಿಂದ ಸತ್ತು ಶವವಾಗಿ, ಶವಸಂಸ್ಕಾರ ಪಡೆಯುವವರೆಗೂ ಬೆಳೆದು ಬಂದಿದೆ. ಈ ಲೈಂಗಿಕ ಭಯಕ್ಕಾಗಿಯೇ ನಾವೇ ಹೆಣ್ಣನ್ನು ಎಳೆಯ ಮಗುವಾಗಿರುವಾಗಿಂದಲೇ ತಾಯಿ, ಅವ್ವ ಅಮ್ಮ ಎಂಬ ಪ್ರತ್ಯಯಗಳಿಂದಲೇ ಕರೆಯುತ್ತೇವೆ. ಹೀಗೆ ಹೆಣ್ಣನ್ನು ತಾಯಿ ಎಂತಲೇ ಸಂಬೋಧಿಸುವ ತಾಯ್ತನದ ಪ್ರತ್ಯಯಗಳಾದ 'ಅಮ್ಮ' 'ಅವ್ವ' ಎಂಬ ಶಬ್ದಗಳಿಂದ ಕರೆಯುವ ವಾಡಿಕೆ ಪ್ರಪಂಚದ ಬೇರಾವ ಜನಾಂಗದಲ್ಲೂ ಇಲ್ಲದಿರುವುದನ್ನು ಗಮನಿಸಬಹುದು.[೭೨] ಮುಂದುವರಿದು ಅವರು ಲೈಂಗಿಕತೆಯನ್ನು ಅಧುಮಿಟ್ಟುಕೊಂಡು ಬಂದ ಪರಿಣಾಮವಾಗಿ ಆಗಿರುವ ಅನಾಹುತಗಳನ್ನು ಚರ್ಚಿಸುತ್ತಾರೆ. ತಾಯಿ ಅಮ್ಮ

ಎಂದು ಕರೆಯುವ ಮೂಲಕ ಆಕೆಯ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಿ ಆಕೆಯ ಸೃಜನಶೀಲ ಆಲೋಚನೆಯ ಸಾಧ್ಯತೆಗಳನ್ನೇ ಹತ್ತಿಕ್ಕುತ್ತಿದ್ದೇವೆ. ಇದನ್ನು ಮೀರಿದ ಪಶ್ಚಿಮದವರು ಪ್ರೌಢತೆಯನ್ನು ಪಡೆದು ಲೈಂಗಿಕ ಬೆಳವಣಿಗೆಯ ಪೂರ್ಣತೆಯಿಂದಾಗಿ ಗಂಡಿಗೆ ಎದುರಾಗಿ ಪೂರಕವಾಗಿ ನಿಲ್ಲುವ ಗಟ್ಟಿತನವನ್ನು ಹೊಂದಿದ್ದಾಳೆ. ರಾಮಮೂರ್ತಿಯವರು ಉಲ್ಲೇಖಿಸಿದಂತೆ ವಿವೇಕಾನಂದರ 'ತಾಯಿ' ಎಂಬ ಸಂಬೋಧನೆಯನ್ನು ಅಮೇರಿಕೆಯ ಸ್ತ್ರೀಯೊಬ್ಬಳು 'ನನಗೆ ಅಷ್ಟೊಂದು ವಯಸ್ಸಾಗಿದೆ ಎಂದು ನಿಮಗನ್ನಿಸುತ್ತದೆಯೇ' ಎಂದು ಪ್ರಶ್ನಿಸುತ್ತಾಳೆ.

'ನಾವು ಹೆಣ್ಣು ತಾಯಿ, ತಾಯಿ ಎಂದು ನಮ್ಮ ಲೈಂಗಿಕತೆಯನ್ನು ಗುದ್ದಿಕೊಳ್ಳಬಹುದು. ಆದರೆ ಜೈವಿಕ ಸತ್ಯವಾದ ಲೈಂಗಿಕತೆ ತಾಯ್ತನವನ್ನು ಬೇಧಿಸಿ ಹೆಣ್ಣುತನವನ್ನು ಅಪ್ಪುತ್ತದೆ. ಅದರಿಂದಾಗಿ ಗುದ್ದಿಕೊಂಡ ಲೈಂಗಿಕತೆ ಮನೋವಿಕಾರಗಳಲ್ಲಿ, ವೈಪರೀತ್ಯಗಳಲ್ಲಿ ಎದ್ದು ಕುಳಿತುಕೊಳ್ಳುತ್ತದೆ. ಈ ೩೦೦೦ ವರ್ಷದ ಸಂಸ್ಕೃತಿ ಹುಟ್ಟಿದಂದಿನಿಂದ ಸಾವಿನವರೆಗೆ ನಡೆದಿದ್ದಾಗ್ಯೂ ಹೇಗೆ ಆ ಅದಮ್ಯ ಚೇತನ ಹೆಬ್ಬಂಡೆಗಳನ್ನು ಸೀಳಿ ಬೆಳೆವ ಆಲದಂತೆ ವ್ಯಗ್ರೋಧವಾಗಿ ಅಂದರೆ– ತಲೆಕೆಳಕು ಬೆಳವ ಮರವಾಗಿ– ಮಾನಸಿಕ ವಿಕಾರ, ವೈಪರೀತ್ಯಗಳ ತಲೆಕೆಳಕಿನಲ್ಲಿ ಕವಲು ಹೊಡೆಯುತ್ತಾ ಬಂದಿದೆ ಎಂಬುದಕ್ಕೆ ವೇದೋಕ್ತಿಗಳು, ಮನಸ್ಮೃತಿಗಳು ಸಾಕ್ಷಿಯಾಗಿವೆ."[೭೩]

ಮೌಲ್ಯಗಳು ಎಂದು ಪ್ರತಿಪಾದಿಸುವ ವೇದೋಪನಿಷತ್ ಕಾಲದಲ್ಲಿ, ರಾಮಾಯಣ, ಮಹಾಭಾರತ ಚರಿತ್ರೆ ಎಂದಾದರೆ ಆ ಕಾಲದಲ್ಲಿ, ಇವು ಆಚರಣೆಯಲ್ಲಿದ್ದವೆ. ರಾಮಾಯಣ, ಮಹಾಭಾರತದ ನಾಯಕ ನಾಯಕಿಯರಲ್ಲಿ ಬಹುಪಾಲು ವರಪ್ರಸಾದದಿಂದ ಜನ್ಮ ಪಡೆದವರು. ರಾಮ ಯಜ್ಞಪುರುಷ ನೀಡಿದ ಪಾಯಸದಿಂದ, ಸೀತೆ ಆಯೋನಿಜೆ. ಪ್ರಕೃತಿಯ ಜೈವಿಕ ಕ್ರಮಕ್ಕೆ ವಿರುದ್ಧವಾದ ಜನ್ಮ ರಹಸ್ಯಗಳು. ಆದರೂ ಮಹಾಕಾವ್ಯ, ಸ್ಮೃತಿಗಳ ಮೂಲಕ ಸ್ತ್ರೀಯರ ರೀತಿ ನೀತಿ ಬದುಕನ್ನು ನಿಯಂತ್ರಿಸಲು, ಅನೇಕ ಮೌಲ್ಯಗಳನ್ನು ಸ್ಥಾಪಿಸಲು ನಿರಂತರ ಪ್ರಯತ್ನಗಳು ನಡೆದಿವೆ. ರಾಮಾಜೋಯಿಸರು ಮನಸ್ಮೃತಿಯ,

**'ಪಿತಾ ರಕ್ಷತಿ ಕೌಮಾರೇ, ಭರ್ತಾ ರಕ್ಷತಿ ಯೌವನೇ,**

**ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ'**

ಎಂಬುದನ್ನು ಸಮರ್ಥಿಸಲು ನೀಡುವ ಉದಾಹರಣೆ ಹಾಸ್ಯಾಸ್ಪದವಾಗಿದೆ, ಗಮನಿಸಿ, ತಂದೆ ತಾಯಿಗಳು ತಮ್ಮ ಮಗನನ್ನು ವ್ಯಾಸಂಗಕ್ಕಾಗಿ ದೂರದ ಊರಿಗೆ ಕಳಿಸಬೇಕೆಂದು ಇಷ್ಟಪಡುತ್ತಾರೆ ಎಂಬ ಸನ್ನಿವೇಶವನ್ನು ತೆಗೆದುಕೊಳ್ಳೋಣ, ಅವರಿಗೆ ತಿಳಿದ ವ್ಯಕ್ತಿಗೆ ಒಂದು ಪರಿಚಯ ಪತ್ರವನ್ನು ಕೊಟ್ಟು ಅಂಥ ವ್ಯಕ್ತಿಯನ್ನು ಹೋಗಿ ಸಂಪರ್ಕ ಮಾಡು ಮತ್ತು ಅವರಿಂದ ಅಗತ್ಯವಾದ ಸಹಾಯವನ್ನು ಪಡೆದು ವಿದ್ಯಾಭ್ಯಾಸವನ್ನು ಮುಂದುವರಿಸು ಎಂದು ಹೇಳಿ ಕಳುಹಿಸಬಹುದು. ಆದರೆ ಇದನ್ನು ಒಬ್ಬ ಬಾಲಕಿಯ ಬಗ್ಗೆ ಮಾಡಲು ಸಾಧ್ಯವೇ? ಖಂಡಿತಾ ಸಾಧ್ಯವಿಲ್ಲ... ಇದೇ ಸ್ತ್ರೀಗೂ ಮತ್ತು ಪುರಷರಿಗೂ ಇರುವ ವ್ಯತ್ಯಾಸ[೭೪] ಇಂತಹ

ಕೆಲಸವನ್ನು ಸ್ತ್ರೀಯೊಬ್ಬಳು ಮಾಡಲು ಸಾಧ್ಯವಿಲ್ಲವೆ. ಪರಊರಿಗೆ ಒಂಟಿಯಾಗಿ ಪ್ರಯಾಣಿಸಲು ಸಾಧ್ಯವಿಲ್ಲವೆ. ಮತ್ತೊಬ್ಬರನ್ನು ಸಂಪರ್ಕಿಸಿ ನೆರವು ಪಡೆಯುವಂತಿಲ್ಲವೆ. ತಮಗಿರುವ ಭೀತಿಯನ್ನು ವ್ಯಕ್ತಪಡಿಸಲಾಗದೆ ಈ ರೀತಿ ರಕ್ಷಣೆಯ ತಂತ್ರ ಹೂಡಲಾಗಿದೆಯೇ ಎಂಬ ಅನುಮಾನ ಸಹಜವಾಗಿ ಮೂಡುತ್ತದೆ.

ನಮ್ಮ ಉದ್ದೇಶ ಈಗಿರುವ ಮಾದರಿಗಳನ್ನು ಕೆಡವಿ ಸ್ತ್ರೀ ಸ್ವಾಭಿಮಾನಿಯಾಗಿ, ಸ್ವತಂತ್ರವಾಗಿ ಬದುಕಲು ಸಾಧ್ಯವಾಗಬಹುದಾದ ಹೊಸ ಸೀತೆಯ, ಊರ್ಮಿಳೆಯ ಮಾದರಿಗಳನ್ನು ಕಟ್ಟಿಕೊಡುವುದು. ತೆಲುಗಿನ ಓಲ್ಗಾ ಅವರು ಇಂತಹ ಪ್ರಯತ್ನವನ್ನು ಸಮರ್ಥವಾಗಿ ಮಾಡಿದ್ದಾರೆ. ಇವರ ಎಲ್ಲಾ ಮಹಿಳಾ ಪಾತ್ರಗಳು ಅಂತಿವಾಗಿ ಪರಿಸ್ಥಿತಿಯನ್ನು ಎದುರಿಸುವ, ನಿಭಾಯಿಸುವ ಸಾಮರ್ಥ್ಯವನ್ನು ಗಳಿಸಿಕೊಳ್ಳುತ್ತವೆ. ಅವರು ಸೃಜಿಸಿದ ಪಾತ್ರಗಳ ಮಾತುಗಳು ಈ ಅಭಿಪ್ರಾಯವನ್ನು ಸಮರ್ಥಿಸಿತ್ತವೆ.

ಮೊದಲನೆಯದು ಸೀತೆಯ ಪಾತ್ರ– ಈ ಪಾತ್ರ ಹೇಳುವ ಮಾತು, ಶ್ರೀರಾಮನನ್ನು ಪ್ರೀತಿಸಿದ ಸ್ತ್ರೀಯರಿಗೆ ವೇದನೆ ತಪ್ಪದಾ?

ಶೂರ್ಪನಖಿ: "ಆ ಕೋಪದಿಂದ ಹೊರಬರಲು, ಪುನಃ ಸೌಂದರ್ಯವನ್ನು ಪ್ರೀತಿಸಲು ರೂಪ ಕುರೂಪಗಳ ಮೂಲ ಸಾರವೇನೆಂಬುದನ್ನು ಕಂಡುಕೊಳ್ಳಲು ನನ್ನೊಂದಿಗೆ ನಾನು ನನೊಳಗೆ ದೊಡ್ಡ ಯುದ್ಧವನ್ನೇ ಮಾಡಬೇಕಾಯಿತು"[೭೫]

"ಶೂರ್ಪನಖಿಯು ನೆಮ್ಮದಿ, ಸಂತೋಷಗಳಿಂದ ಸುಂದರವಾಗಿ ನಕ್ಕಳು 'ಪುರುಷರಿಗೆ ಮಾತ್ರ ಕಣ್ಣಿರಲಾರವೇ? ಮನಸ್ಸು ಇರಲಾರದೇ? ಕುರೂಪಿಗಳನ್ನಾಗಿ ಮಾಡುವುದು, ಅವರನ್ನು ಅಸಹ್ಯಸಿಕೊಳ್ಳುವುದು ಮಾತ್ರ ಗೊತ್ತಿರುವ ಪುರಷರ ಬಗ್ಗೆ ಅಲ್ಲ".[೭೬]

ಅಹಲ್ಯೆ: ಬಹಳಷ್ಟು ವರ್ಷಗಳು ಶಿಲೆಯಂತೆ ನಿರ್ಜೀವವಾಗಿ ಬದುಕಿದ್ದೆ ಎಂದು ನೀವಂದುಕೊಳ್ಳುತ್ತೀರಿ. ಇಷ್ಟು ವರ್ಷವೂ ನಾನು ಈ ವಿಶ್ವದಲ್ಲಿ ನನ್ನ ಅಸ್ತಿತ್ವವನ್ನು ಕುರಿತು ಆಲೋಚಿಸುತ್ತಿದ್ದೇನೆ. ಪ್ರಪಂಚ ಯಾವ ನೀತಿಗಳ ಮೇಲೆ, ಧರ್ಮಗಳ ಮೇಲೆ ನಡೆಯುತ್ತದೆಯೋ, ಅವುಗಳಿಗೆ ಮೂಲ ಯಾವುದೆಂದು ತಿಳಿದುಕೊಂಡಿರುವೆ. ಆ ಬಗ್ಗೆ ನಾನು ಬಹಳಷ್ಟು ಜ್ಞಾನವನ್ನು ಸಂಪಾದಿಸಿಕೊಂಡಿರುವೆ. ಸತ್ಯವು ಸದಾ ಒಂದೇ ರೀತಿ ಇರುವುದಿಲ್ಲವೆಂದು ನಿರಂತರವಾಗಿ ಬದಲಾಗುತ್ತಿರುತ್ತದೆಂದು ತಿಳಿದುಕೊಳ್ಳುವುದೇ ನಾನು ಸಂಪಾದಿಸಿದ ಜ್ಞಾನ[೭೭]

ಸೀತೆಯ ಅಂತಿಮ ನಿರ್ಧಾರವನ್ನು ಓಲ್ಗಾ ಹೇಗೆ ಪರಿಕಲ್ಪಿಸಿದ್ದಾರೆ ಎಂಬುದನ್ನು ಸ್ವಲ್ಪ ದೀರ್ಘವೆನಿಸಿದರೂ ನಮ್ಮ ಅಧ್ಯಯನಕ್ಕೆ ಪೂರಕವಾದ್ದರಿಂದ ಗಮನಿಸಲೇಬೇಕು. ಇದು ಒಟ್ಟು ಅಧ್ಯಯನದ ಉದ್ದೇಶವನ್ನು ದೃಢಪಡಿಸುತ್ತದೆ,

'ವಾಲ್ಮೀಕಿಯ ಕಂಠದ ತುಂಬಾ ಆನಂದ, ಆತನ ಕರ್ತವ್ಯವನ್ನು ಆತ ನೆರವೇರಿಸಿದ್ದಾನೆ. ಶ್ರೀರಾಮನ ಮಕ್ಕಳು, ತನ್ನ ಕಥಾನಾಯಕನ ತನಯರು ತನ್ನ ಆಶ್ರಮದಲ್ಲಿ ಸುಶಿಕ್ಷಿತರಾಗಿ ತಂದೆಯನ್ನು ಸೇರುತ್ತಿದ್ದಾರೆ.

ತನ್ನ ಮಹಾಕಾವ್ಯವು ತಂದೆ ಮಕ್ಕಳ ಸೇರುವಿಕೆಯಿಂದ ಸುಖಾಂತ್ಯವಾಗುತ್ತದೆಂದು ಉದ್ವೇಗದಿಂದ ಉತ್ಸಾಹದಿಂದ ಇದ್ದಾನೆ.

ಸೀತೆ ಅಲುಗಾಡದೆ 'ಒಳ್ಳೆಯದೇ ತಾನೇ ಮುನೀಶ್ವರಾ ಎಂದು ಸುಮ್ಮನಾದಳು. ಆಗ ಆತನ ಆನಂದಕ್ಕೆ ಅಡ್ಡಿಯಾಯಿತು. ಸೀತೆಯ ಸಂಗತಿ ಗೊತ್ತಾಗಬೇಕಲ್ಲ– ಸ್ವಲ್ಪ ತಡವರಿಸಿದನು. 'ಅಮ್ಮಾ–ರಾಮನು ನಿನ್ನನು ಸಭೆಗೆ ಬಂದು ಸಭಿಕರೆಲ್ಲರ ಮುಂದೆ, ಸತ್ಯವನ್ನು ಹೇಳೆಂದನು. ಆಮೇಲೆ ನೀನು ಆತನ ಪಟ್ಟಮಹಿಷಿ ತರುವಾಯ ವೀರಮಾತೆ, ರಾಜಮಾತೆ', ಸೀತೆಗೆ ಗಹಗಹಿಸಿ ನಗಬೇಕೆನಿಸಿತು.

ವಾಲ್ಮೀಕಿಯ ಮೇಲಿದ್ದ ಗೌರವದಿಂದ, ನಿಗ್ರಹಿಸಿಕೊಂಡು– ಕಿರುನಗೆಗೆ ಎಳ್ಳಷ್ಟು ಕುಂದಾಗದಂತೆ,

'ನನಗೆ ಅಷ್ಟೊಂದು ಅಗತ್ಯವಿದೆ ಎನ್ನುವಿರಾ? ಆ ಪ್ರಯಾಸಕ್ಕೆ ಅರ್ಥವಿದೆ ಎನ್ನುವಿರಾ?[೭೮]

ಅಯೋಧ್ಯೆಗೆ ಬರಲು ಸೀತೆಗೆ ರಾಮ ವಾರ್ತೆಯನ್ನು ಕಳುಹಿಸಿದ್ದಾನೆ. ಸೀತೆಯಲ್ಲಿ ಯಾವುದೇ ಉದ್ವೇಗವೂ ಇಲ್ಲ. ಹನ್ನೆರಡು ವರ್ಷಗಳಿಂದ ಆಕೆಯ ಮುಖದಲ್ಲಿ ಬೆಳೆಯುತ್ತಿರುವ ಆನಂದದ ಬೆಳಗು ಅಣುಮಾತ್ರವೂ ತಗ್ಗಲಿಲ್ಲ.

ಕಿರುನಗೆಯಿಂದ ರಾಮನ ವಿನಂತಿಯನ್ನು ತಿರಸ್ಕರಿಸಿದಳು. 'ನಿನ್ನ ಮಕ್ಕಳನ್ನು ಬಿಟ್ಟು ನೀನು ಇರಬಲ್ಲೆಯಾ ಸೀತೆ' ಮತ್ತೊಂದು ವಾರ್ತೆ ಅಯೋಧ್ಯೆಯಿಂದ ಆಶ್ರಮಕ್ಕೆ ಬಂದಿತು.

ಸೀತೆ ಈ ಅಸ್ತ್ರದಿಂದ ಪರಾಜಿತಳಾಗುತ್ತಾಳೆಂದು ತಿಳಿದಿದ್ದಾನೆ ರಾಮ.

'ಆ ಮಕ್ಕಳು ನನ್ನ ಮಕ್ಕಳು ಮಾತ್ರವಲ್ಲ ರಾಮ. ಈ ವಿಶ್ವದಲ್ಲಿ ಅನಂತ ಪ್ರಾಣಶಕ್ತಿಯ ಪ್ರತೀಕರು. ಅವರು ವಿಶ್ವಕ್ಕೆಲ್ಲ ಸಂಬಂಧಿಸಿದವರೆಂದು ನಾನು ಅರ್ಥಮಾಡಿಕೊಂಡಿದ್ದೇನೆ. ನೀವು, ಅವರು ಅಯೋಧ್ಯೆಗೆ ಸಂಬಂಧಿಸಿದವರೆಂದು, ಸೂರ್ಯವಂಶಕ್ಕೆ ವಾರಸುದಾರರೆಂದು ನಂಬುವವರು, ನಿಮ್ಮ ಪ್ರಕಾರ ನೀವು ನಡೆದುಕೊಳ್ಳಿ.

'ಮತ್ತೆ ನೀನೇನಾಗುವೆ ಸೀತೆ– ಪತಿ ಪುತ್ರರು ಇಲ್ಲದೆ...' 'ನಾನು ಭೂಪುತ್ರಿ ರಾಮಾ! ನನ್ನನ್ನು ನಾನು ಅರ್ಥಮಾಡಿಕೊಂಡಿರುವೆ. ಈ ವಿಶ್ವವೆಲ್ಲಾ ನನ್ನದೆ. ನನಗೆ ಕೊರತೆಯೇನೂ ಇಲ್ಲ. ನಾನು ಭೂಪುತ್ರಿ.

ಗಂಭೀರವಾಗಿ, ಸ್ಥಿರವಾಗಿ ನುಡಿದ ಆ ಮಾತುಗಳಿಗೆ ನಿರುತ್ತರನಾದನು ರಾಮ.

ಸೀತೆಯ ಸಹಾಯವಿಲ್ಲದೆ ರಾಮನು ಜೀವನದಲ್ಲಿ ಮೊದಲಸಾರಿ ಸೋಲಿನ ರುಚಿ ನೋಡಿದನು. ಹೊರಗಿನಿಂದ ಬರುವ ಅಧಿಕಾರಕ್ಕೆ ಶರಣಾಗದ ಸೀತೆ, ತನ್ನೊಳಗೆ ತನ್ನ ಮೇಲೆ ತನಗಿರುವ ಅಧಿಕಾರದ ಶಕ್ತಿಯನ್ನು ಮೊದಲ ಸಾರಿ ಸಂಪೂರ್ಣವಾಗಿ ಅನುಭವಿಸಿದ್ದಳು.[೭೯]

ಪಿತೃ ಸಂಸ್ಕೃತಿ ಸೃಷ್ಟಿಸಿದ್ದ ಅನಿವಾರ್ಯತೆ ಎಂಬ ಚೌಕಟ್ಟಿನಿಂದ ಹೊರಬರುವ ಊಹಾತ್ಮಕ ಕಲ್ಪನೆ ನಿಜವಾಗಿಯೂ ಪ್ರಸ್ತುತ ಸಮಾಜದಲ್ಲಿ ನಿರೀಕ್ಷಿಸಬೇಕಾದ ಸ್ತ್ರೀ ಸ್ವಾತಂತ್ರ್ಯ. ಗಂಡು ಮಕ್ಕಳು ಎಂಬ

ಪ್ರಪಂಚದಲ್ಲಿ ಕಳೆದುಹೋಗಿ ತನ್ನನ್ನು ಕಳೆದುಕೊಳ್ಳುವ ಸ್ತ್ರೀಗೆ ತನ್ನ ಪ್ರಪಂಚವೇನು ಎಂದು ಅರ್ಥಮಾಡಿಕೊಳ್ಳಬೇಕಾದ ಸಂದರ್ಭ ಅಂದಿಗಿಂತ ಇಂದು ಹೆಚ್ಚಾಗಿದೆ.

ಓಲ್ಗಾ ಅವರ ಊರ್ಮಿಳೆಯ ಮಾತುಗಳು ಇದನ್ನು ಸಮರ್ಥಿಸುತ್ತದೆ,

ನನಗೆ ಗೊತ್ತು ಅಕ್ಕಾ ನಿಮಗೆ ಅರ್ಥವಾಗುತ್ತದೆಂದು, ಅದಕ್ಕೆ ಇಂದು ತುಟಿ ಬಿಚ್ಚಿ ಮಾತನಾಡುತ್ತಿರುವೆ. ಆದರೆ ಅಕ್ಕಾ ನಿನ್ನ ಜೀವನದಲ್ಲಿ ನನಗೆ ಬಂದ ಪರೀಕ್ಷಾ ಸಮಯ ಬಂದರೆ ಆಗ ಆ ಪರೀಕ್ಷೆ ನಿನ್ನನ್ನು ಸಹಜತೆಯೆಡಗೆ, ಕೊಳಚೆಯೊಳಗೆ ತಳ್ಳದಂತೆ, ದ್ವೇಷದಿಂದ, ಆಗ್ರಹದಿಂದ ನಿನ್ನನ್ನು ನೀನು ದಹಿಸಿಕೊಳ್ಳದೆ, ನಿನ್ನನ್ನು ನೀನು ಕಾಪಡಿಕೋ, ನಿನ್ನ ಮೇಲಿನ ಅಧಿಕಾರವನ್ನು ನೀನೇ ನಿರ್ಣಯಿಸಿಕೋ- ಇತರರ ಮೇಲಿನ ಅಧಿಕಾರವನ್ನು ಕಳೆದುಕೋ. ಆಗ ನಿನಗೆ ನೀನು ಲಭ್ಯವಾಗುವೆ, ನಿನಗೆ ನೀನು ಅರ್ಥವಾಗುವೆ. ನಾವು ನಾವಾಗಿರುವುದೆಂದರೆ ಕೇವಲ ಮಾತಲ್ಲ ಅಕ್ಕಾ- ನನ್ನ ಮತುಗಳನ್ನು ನಂಬು'[೬೦]

ಅಂತಿಮವಾಗಿ, ಸೀತೆ ಶೂರ್ಪನಖಿ, ಅಹಲ್ಯೆ, ರೇಣುಕೆ, ಊರ್ಮಿಳೆ, ಒಬ್ಬೊಬ್ಬರದು ಒಂದೊಂದು ಕಥೆ. ಆದರೂ ಅವರೆಲ್ಲರ ಜೀವನದ ಕಥೆಯ ವ್ಯಥೆಗಳು ಸಮಾನವಾದದ್ದು. ಆ ಕಾರಣಕ್ಕಾಗಿಯೇ ಸೀತೆಗೆ ತಾನು ಒಬ್ಬಂಟಿ ಭಾವ ಹೋಗಿ, ಸ್ತ್ರೀ ಸಮೂಹದಲ್ಲಿ ತಾನೂ ಒಬ್ಬಳೆಂಬ ಅರಿವುಂಟಾಗುತ್ತದೆ.

ಜನಪದ ಕಾವ್ಯಗಳೂ ಪುರುಷ ಕೇಂದ್ರಿತ ದೃಷ್ಟಿಕೋನದಲ್ಲಿ ರಚನೆಗೊಂಡಿವೆ ಎಂಬುದನ್ನು ನಾವು ಗಮನಿಸಿದ್ದೇವೆ. ಪುರೋಹಿತಶಾಹಿ, ಊಳಿಗಮಾನ್ಯಶಾಹಿಗಳು ತಮ್ಮ ಅನುಕೂಲಕ್ಕಾಗಿ ಸ್ಥಾಪಿಸಿದ ಮೌಲ್ಯಗಳನ್ನು ಒಡೆಯುವ ಪ್ರಯತ್ನಗಳನ್ನು ಜನಪದ ಕಥನಗಳು ಮಾಡಿರುವುದು ಕಂಡುಬರುತ್ತದೆ. ಉದಾಹರಣೆಗೆ ನೀಲಯ್ಯ ಸಂಕಮ್ಮನಿಗೆ ಬಲಗೈ ನೀಡಿ ಭಾಷೆ ಕೊಡುವಂತೆ ಕೇಳುತ್ತಾನೆ. ಅದಕ್ಕವಳು ಭಾಷೆ ಕೊಡಲು ನಿರಾಕರಿಸಿ ಮುಂದಿನಂತೆ ಹೇಳುತ್ತಾಳೆ,

**"ನೀನು ಕಟ್ಟಿದ ತೆರುವ ತಕ್ಕಯ್ಯ**
**ನನ್ನ ಹಟ್ಟಿಂದಾಚೆ ಕಳುವಯ್ಯ**
**ನಿನ್ನ ದಾರಿಯ ನೀನು ನೋಡಯ್ಯ**
**ನನ್ನ ದಾರಿಯ ನಾನು ನೋಡ್ತೀನಿ**
**ನಾನು ಬಲಗೈ ಮುಟ್ಟಿ ಭಾಷೆ ಕೊಡುವಂತ**
**ಮಗಳಲ್ಲ ಹೋಗೋ ಯಜಮಾನ"**

**(ಮಲೆಮಾದೇಶ್ವರ ಕಾವ್ಯ, ಪುಟ-೫೫೮)**

ಈ ಮಾತುಗಳನ್ನು ಜನಪದ ಅಧ್ಯಯನಕಾರ್ತಿಯರು ಭಿನ್ನ ನೆಲೆಗಳಲ್ಲಿ ಅರ್ಥೈಸಿದ್ದಾರೆ. 'ಸಂಕಮ್ಮನಿಗೆ ಕೈಭಾಷೆ ಕೊಡುವುದು ಬರಿಯ ಭಾಷೆಯ ಮಾತಿನ ಪ್ರಶ್ನೆಯಲ್ಲ. ಅದು ಅವಳ ಅಸ್ತಿತ್ವವನ್ನು, ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಪ್ರಶ್ನೆ. ಕೈಭಾಷೆ ಕೊಡುವುದು ತನ್ನ ಸ್ವಾಭಿಮಾನಕ್ಕೆ ಅವಮಾನ ಎನ್ನುವುದರ

ಜತೆಗೇನೇ ಅದು ತನ್ನ ಸತ್ಯಕ್ಕೆ, ಅಂತಸಾಕ್ಷಿಗೆ ಮಾಡುವ ಅಪಚಾರವೆಂದು ಆಕೆ ಭಾವಿಸುತ್ತಾಳೆ. ಇಲ್ಲಿ ನೀಲಯ್ಯ ಪಾತಿವ್ರತ್ಯವನ್ನು ಒಂದು ಮೌಲ್ಯವನ್ನಾಗಿ ನಂಬಿದರೆ, ಸಂಕಮ್ಮ ಹೆಣ್ಣಿನ ಸ್ವಾಭಿಮಾನವನ್ನು, ಆತ್ಮಸಾಕ್ಷಿಯನ್ನು ಒಂದು ಮೌಲ್ಯವನ್ನಾಗಿ ಮಂಡಿಸುತ್ತಾಳೆ. ಸಂಕಮ್ಮನನ್ನು ಮಾತೃಪ್ರಧಾನ ಬುಡಕಟ್ಟೊಂದರ ಹೆಣ್ಣು ಶಕ್ತಿಯಾಗಿ, ನೀಲಯ್ಯನನ್ನು ಪಿತೃಪ್ರಧಾನ ಸಮಾಜದ ಪುರುಷನ ಪ್ರತಿನಿಧಿಯಾಗಿ ಗುರುತಿಸಬೇಕಾಗುತ್ತದೆ[೮೧] ಗಾಯತ್ರಿ ನಾವಡರು ಹೇಳುವಂತೆ ಸ್ತ್ರೀ ಸ್ವಾಭಿಮಾನ ಎತ್ತಿಹಿಡಿಯಲು ಆಕೆ ಭಾಷೆ ಕೊಡಲು ಪ್ರತಿಭಟಿಸುತ್ತಾಳೆ. ಆತ್ಮಗೌರವಕ್ಕೆ, ಸ್ವಾಭಿಮಾನಕ್ಕೆ ಪೆಟ್ಟು ಬೀಳುವಂತಹ ಪ್ರಸಂಗಗಳು ಬಂದರೆ ಅದನ್ನು ಪ್ರತಿಭಟಸುವುದು ಸರಿಯಾದ ಕ್ರಮವೆ. ಆದರೆ ಆ ಪ್ರತಿಭಟನೆಗೆ ಇರಬಹುದಾದ ಕಾರಣವೇನು ಎಂಬದನ್ನೂ ಬಹಳ ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಮೇಲ್ನೋಟಕ್ಕೆ ಆಕೆಯ ಧೈರ್ಯವನ್ನು ಮೆಚ್ಚಿ ಹೊಗಳುತ್ತೇವೆ. ಪ್ರತಿಭಟನೆಯಂತಹ ಕ್ರಮಕ್ಕೆ ಒಬ್ಬ ಸಾಧಾರಣ ಮಹಿಳೆ ಮುಂದಾದುದಕ್ಕೆ ಕಾರಣವೇನು ಎಂದು ಕಂಡುಕೊಳ್ಳುವುದು ಮುಖ್ಯ. ಡಾ. ಶೈಲಜ ಹಿರೇಮಠ ಅವರು ಈ ಅಂಶವನ್ನು ಗುರುತಿಸಿದ್ದಾರೆ ಎಂದೆನಿಸುತ್ತದೆ. ಸಂಕವ್ವನ ಪ್ರಕರಣದಲ್ಲಿ ಆಕೆ ಎತ್ತುವ ಎರಡು ಪ್ರಮುಖ ಪ್ರಶ್ನೆಗಳು ಬಹಳ ಮುಖ್ಯ ಎಂದೆನಿಸುತ್ತದೆ.

೧. ಪಾತಿವ್ರತ್ಯವನ್ನು ಕಾಯ್ದುಕೊಂಡು ಬಂಜೆತನದ ಶಾಪ ಎದುರಿಸುವುದು.

೨. ಪಾತಿವ್ರತ್ಯವನ್ನು ಬಿಟ್ಟುಕೊಟ್ಟು ಬಂಜೆತನದಿಂದ ಬಿಡುಗಡೆ ಹೊಂದುವುದು[೮೨]

ಇಲ್ಲಿ ಗಮನಿಸಬೇಕಾದ ಎರಡು ಅಂಶಗಳು ಪಾತಿವ್ರತ್ಯ ಮತ್ತು ಬಂಜೆತನ. ಇವೆರೆಡು ಪಿತೃಸಂಸ್ಕೃತಿಯು ವಿವಾಹ ಸಂಸ್ಥೆಯ ಮೂಲಕ ನಿರ್ಬಂಧಿಸಲು ಕಟ್ಟಿದ ಮೌಲ್ಯಗಳು. ಇವೆರೆಡು ಪುರುಷನಿಗೆ ವರವಾದರೆ ಸ್ತ್ರೀಯರಿಗೆ ಶಾಪ. ಇವೆರಡರಿಂದಲೂ ಮಹಿಳೆಗೆ ದುರಂತ ತಪ್ಪಿದ್ದಲ್ಲ. ಪಾತಿವ್ರತ್ಯ ಕಾಪಾಡಿಕೊಳ್ಳುವುದು ಮಹಿಳೆಯರಿಗೆ ಅನಿವಾರ್ಯವೆಂಬುದು ಪುರುಷ ಕೇಂದ್ರಿತ ಕಟ್ಟುಪಾಡು. ಆ ಮೂಲಕ ತನ್ನ ಸಂತಾನಕ್ಕೆ ತಾನೇ ಕಾರಣ ಎಂದು ಗುರುತಿಸಿಕೊಳ್ಳಲು ಮಾಡಿದ ಉಪಾಯ. ಇದರಿಂದ ಹೊರಬರಲು ಸಾಧ್ಯವೇ ಇಲ್ಲ. ಹಾಗಂತ ಬಂಜೆಬಾಳು ಬಹಳ ದುಸ್ತರ. ಬಂಜೆಯಾಗಿ ಬದುಕುವುದಕ್ಕಿಂತ ಸಾಯಿವುದು ಮೇಲು ಎಂಬಂತಹ ಸ್ಥಿತಿಯನ್ನು ನಿರ್ಮಿಸಲಾಗಿತ್ತು.

**"ಬಾಲಕರಿಲ್ಲದ ಬಾಲಿದ್ಯಾತರ ಜನ್ಮ**
**ಬಾಡೀಗಿ ಎತ್ತು ದುಡಿದಂಗ । ಬಾಳೆಲೆಯ**
**ಹಾಸ್ಸುಂಡು ಬೀಸಿ ಒಗೆದಂಗ॥**
**ಕಂದನ ಕುಡು ಶಿವನೆ ಬಂಧನ ಬಿಡಲಾರೆ**
**ಹಂಗೀನ ಬಾನ ಉಣಲಾರೆ। ಜಗದಾಗ**
**ಬಂಜೆಂಬ ಶಬುದ ಹೊರಲಾರೆ॥**

ಇಂತಹ ತ್ರಿಪದಿಗಳು ಬಂಜೆತನದ ತೀವ್ರತೆಯನ್ನು ಬಿಂಬಿಸುತ್ತವೆ. ಬಾಡಿಗೆ ಎತ್ತು, ಬಾಳೆಯ ಎಲೆಗೆ ತನ್ನ ಬಂಜೆ ಬಾಳನ್ನು ಹೋಲಿಸುವ ಸ್ತ್ರೀಯರ ಸ್ಥಿತಿ ತುಂಬಾ ಶೋಚನೀಯವಾಗಿತ್ತು ಎಂಬುದನ್ನು ವ್ಯಕ್ತಪಡಿಸುತ್ತದೆ. ಸಂಕವ್ವ ಮಾತ್ರ ಇವೆರಡು ಬಂಧನಗಳಿಂದ ಜಾಣ್ಮೆಯಿಂದ ಬಿಡುಗಡೆ ಪಡೆಯುವುದೇ ಒಂದು ಸವಾಲಿನ ಕೆಲಸದಂತೆ ಕಂಡುಬರುತ್ತದೆ. ನೀಲಯ್ಯನಿಗೆ ಭಾಷೆ ಕೊಟ್ಟರೆ ತಾನು ಬಂಜೆಯಾಗಿಯೇ ಉಳಿದು ಅದರಿಂದ ಉಂಟಾಗುವ ದುಃಸ್ಥಿತಿಯ ಅರಿವು ಆಕೆಗಿದೆ. ಹಾಗೆಯೇ ಪಾತಿವ್ರತ್ಯ ಮೀರಿ ಬದುಕುವುದು ದುರಂತಕ್ಕೆ ದಾರಿಯಾದಂತೆಯೇ ಸರಿ ಎಂಬ ತಿಳುವಳಿಕೆಯೂ ಆಕೆಗಿದೆ. ಆಕೆ ತನ್ನ ದೈಹಿಕ ತೃಪ್ತಿಯ ಆಸೆಯಿಂದ ಮಾದಯ್ಯನನ್ನು ಕೂಡಲು ಬಯಸುವುದಿಲ್ಲ. ಹಾಗೆಯೇ ಮಕ್ಕಳನ್ನು ಪಡೆದು ಆ ಮಕ್ಕಳ ಲಾಲನೆ ಪಾಲನೆಯಲ್ಲಿ ಜೀವನವನ್ನು ಸಂತೋಷದಿಂದ ಕಳೆಯಬೇಕೆಂಬ ಹಂಬಲವೂ ಆಕೆಗಿಲ್ಲ. ಬಂಜೆಯ ಬಾಳು ಬದುಕುವುದು, ಸವತಿಯೊಂದಿಗೆ ಜೀವಿಸುವುದು ಬಹಳ ಯಾತನಾಮಯ ಎಂಬ ವಾಸ್ತವದ ಬಗ್ಗೆ ಆಕೆಯಲ್ಲಿ ಸರಿಯಾದ ತಿಳುವಳಿಕೆ ಮೂಡಿದೆ. ಅದಕ್ಕಾಗಿ ಅವಳು 'ಮಕ್ಕಳ ಫಲವನ್ನು ನೀವು ಕೊಟ್ರೆ ಸರಿ, ಇಲ್ಲದೇ ಹೋದ ಪಕ್ಷದಲ್ಲಿ ನಿಮ್ಮ ಪಾದದ ಮೇಲೆ ಬಿದ್ದು ಪ್ರಾಣವನ್ನಾದರೂ ಬಿಡತೀನಿ'[೮೩] ಎಂದು ಬೇಡುತ್ತಾಳೆ. ಬಂಜೆತನದಿಂದಾಗಿ ಸಾಮಾಜಿಕ ಅಪಮಾನಗಳಿಂದ ಬಿಡುಗಡೆ ಹೊಂದಲು ಬಯಸುತ್ತಾಳೆ. ಇಲ್ಲಿ ಮಾದಯ್ಯನನ್ನು ಕೂಡುವುದರಿಂದ ವೇಶ್ಯೆಯೆಂಬ ಪಟ್ಟವನ್ನು ಪಡೆಯದೆ ಬಂಜೆತನದ ಅಪಮಾನದಿಂದ ಮುಕ್ತಳಾಗುತ್ತಾಳೆ. ನೀಲಯ್ಯ ಹೆಂಡತಿಯಿಂದ ಹುಟ್ಟಿದ ಮಕ್ಕಳು ತನ್ನವಲ್ಲ ಎಂದರೆ ತನ್ನ ಹಾಗೂ ಕುಟುಂಬದ ಮರ್ಯಾದೆಯನ್ನು ಹರಾಜಿಗಿಟ್ಟಂತಾಗುತ್ತದೆ. ಅಲ್ಲದೆ ಆತ ಅವಿಭಕ್ತ ಕುಟುಂಬದಿಂದ ಹೊರಬಂದು ಒಂಟಿಯಾಗಿ ಬದುಕುತ್ತಿದ್ದಾನೆ. ಮರ್ಯಾದೆಗೆಟ್ಟು ಬದುಕಬೇಕಾದ ಅನಿವಾರ್ಯತೆಯಿಂದ ಹೊರಬರಲು ಸಂಕಮ್ಮನನ್ನು ಸ್ವೀಕರಿಸುತ್ತಾನೆ.

ಒಟ್ಟಾರೆ ಸಂಸ್ಕೃತಿಯ ಅಭಿವ್ಯಕ್ತಿಗಳಾದ ಸಾಹಿತ್ಯದ ವಿವಿಧ ಪ್ರಕಾರಗಳ ಮೂಲಕ ಪಿತೃಪ್ರಧಾನ ಸಂಸ್ಕೃತಿ ಸ್ಥಾಪಿಸಿರುವ ಮೌಲ್ಯಗಳು, ಜ್ಞಾನವಲಯಗಳನ್ನು ಅನಾಮತ್ತಾಗಿ ಸ್ವೀಕರಿಸಿ ಪುರುಷ ಪ್ರಪಂಚದಲ್ಲಿ ಒಬ್ಬಳಾಗಿ ಬದುಕು ಸವೆಸಿ ಕಳೆದು ಹೋಗುವುದರ ಬದಲು ತನ್ನ ಅಧಿಕಾರ ಸ್ಥಾಪಿಸಿ, ತನ್ನ ಅರಿವಿನ ದಿಗಂತವನ್ನು ವಿಸ್ತರಿಸಿಕೊಂಡು ತನ್ನ ಪ್ರಪಂಚವನ್ನು ಸೃಷ್ಟಿಸಿಕೊಂಡು ಪುರುಷನಿಗೆ ಸಮನಾಗಿ ಎಲ್ಲ ಕ್ಷೇತ್ರಗಳಲ್ಲೂ ತನ್ನ ತನವನ್ನು ಸ್ಥಾಪಿಸಬೇಕೆಂಬುದೇ ಇಂತಹ ಅಧ್ಯಯನಗಳ ಉದ್ದೇಶ. ಸಂಸ್ಕೃತಿಯ ಪ್ರತಿಬಿಂಬಗಳಾದ ಮಹಾಕಾವ್ಯಗಳಲ್ಲಿ ಚಿತ್ರಿತವಾದ ಸೀತೆ, ಅಹಲ್ಯೆ, ಅನುಸೂಯೆ, ಕುಂತಿ, ಶಕುಂತಲೆ ಮುಂತಾದ ಮಾದರಿಗಳನ್ನು ಪ್ರಶ್ನಿಸಬೇಕಾದ ಸಂದರ್ಭ ಇದಾಗಿದೆ. ಪಿತೃಪ್ರಧಾನ ವ್ಯವಸ್ಥೆ ಬಹಳ ಜಾಣತನದಿಂದ ಸ್ತ್ರೀ ಪಾತ್ರಗಳ ಮೂಲಕವೇ ತನ್ನ ಉದ್ದೇಶಗಳನ್ನು ಈಡೇರಿಸಲು ಶತಮಾನಗಳಿಂದ ಪ್ರಯತ್ನಿಸುತ್ತಲೇ ಬಂದಿದೆ. ಅಂತಹ ಪ್ರಯತ್ನಗಳು ಇಂದಿಗೂ ನಡೆಯುತ್ತಿವೆ. ಇನ್ನಾದರೂ ಅವುಗಳಿಂದ ಎಚ್ಚೆತ್ತುಕೊಳ್ಳಬೇಕಾದ ಪರಿಸ್ಥಿತಿ ಪ್ರತಿ ಮಹಿಳೆಗೂ ಇದೆ. ಪುರುಷನನ್ನು ಪ್ರಶ್ನಿಸಿ ಅವನಿಗೆ ಇಕ್ಕಟ್ಟುಗಳನ್ನು

ಸೃಷ್ಟಿಸಬೇಕೆಂಬುದು ನಮ್ಮ ಅಪೇಕ್ಷೆಯಲ್ಲ. ಸ್ತ್ರೀಯರಿಗೆ ವಿಧಿಸಿದ ನಿರ್ಬಂಧಗಳು, ನಿಷೇಧಗಳು, ಲೈಂಗಿಕ ಸ್ವಾತಂತ್ರ್ಯ ಇಲ್ಲದಿರುವುದು ಮುಂತಾದ ಸಂಗತಿಗಳಿಂದ ಪುರುಷರು ಹೇಗೆ ವಿನಾಯಿತಿ ಪಡೆದಿದ್ದಾರೆ ಎಂಬುದನ್ನು ಪರೀಕ್ಷಿಸಬೇಕಾದ ಅನಿವಾರ್ಯತೆ ಸದ್ಯ ನಮ್ಮ ಮುಂದಿದೆ.

**ಟಿಪ್ಪಣಿಗಳು**

೧. ಪುರಾಣ ಭಾರತ ಕೋಶ, ಪುಟ-೧೪೫.

೨. ಶ್ರೀಮದ್ವಾಲ್ಮೀಕಿ ರಾಮಾಯಣಮ್, ಅಯೋಧ್ಯಾಕಾಂಡ, ಸರ್ಗ-೭-೩೧, ೩೨.

೩. ಅದೇ, ಸರ್ಗ-೭-೩೪-೩೬

೪. ಅದೇ, ಸರ್ಗ-೮-೨

೫. ಅದೇ, ಸರ್ಗ-೧೨-೫

೬. ಅದೇ, ಸರ್ಗ-೧೧-೭

೭. ಅದೇ, ಸರ್ಗ-೧೨-೫

೮. ಶ್ರೀ ರಾಮಚರಿತಮಾನಸ, ಅಯೋಧ್ಯಾಕಾಂಡ, ೩೪ ದೋ. ೧೪.

೯. ಅದೇ, ದೋ-೧೪, ಚೌ: ೧-೪

೧೦. ಅದೇ, ದೋ-೧೬

೧೧. ಅದೇ, ದೋ-೧೮, ಚೌ: ೧-೪

೧೨. ಅದೇ, ದೋ-೧೯, ಚೌ: ೧, ೩, ೪.

೧೩. ಅದೇ, ದೋ-೨೦, ಚೌ-೧.

೧೪. ಅದೇ, ದೋ-೨೧.

೧೫. ಅದೇ, ದೋ-೨೬.

೧೬. ಅದೇ, ದೋ-೨೮, ಚೌ: ೧-೨.

೧೭. ಅದೇ, ದೋ-೨೯, ಚೌ: ೧-೪.

೧೮. ಅದೇ, ದೋ-೩೨, ಚೌ: ೨-೪.

೧೯. ಅದೇ, ದೋ-೩೩.

೨೦. ಅದೇ, ದೋ-೩೯, ಚೌ: ೩-೪.

೨೧. ಅದೇ, ದೋ-೪೦.

೨೨. ಅದೇ, ದೋ-೪೨, ಚೌ: ೧-೪.

೨೩. ಅದೇ, ದೋ-೫೦, ಚೌ: ೧-೪.

೨೪. ಅದೇ, ಅಯೋಧ್ಯಾಕಾಂಡ, ಸೋ-೨೫೧, ಚೌ-೩, ಪುಟ-೩೮೧.

೨೫. ಅದೇ, ಪುಟ:೭೮-೭೯.

೨೬. ಅದೇ, ಪುಟ: ೮೨.

೨೭. ಅದೇ, ಪುಟ: ೮೨.

೨೮. ಅದೇ, ಪುಟ: ೮೫-೮೬.

೨೯. ಅದೇ, ಪುಟ-೯೧-೯೨.

೩೦. ಅದೇ, ಪುಟ: ೧೦೪.

೩೧. ಅದೇ, ಪುಟ: ೧೦೬.

೩೨. ಅದೇ, ಪುಟ: ೨೪೬.

೩೩. ಅದೇ, ಪುಟ: ೨೬೬.

೩೪. ಅದೇ, ಪುಟ: ೨೬೬, ೨೬೮.

೩೫. ಅದೇ, ಪುಟ: ೩೩೨.

೩೬. ರಾಮಚರಿತ ಪುರಾಣ- 'ಒಡಲ ಶುಚಿತ್ವಮಂ ಗತಿಚತುಷ್ಟಯದೋಳ್ ದೊರೆಕೊಳ್ವನಿಷ್ಟಮಂ...

೩೭. ರಾಮಚರಿತ ಪುರಾಣ- ಧರೆಯಂ ರಾಮಂಗಿತ್ತಂ। ಗುರುವಾನಜೆಂದ- ಮಿರ್ದೊಡೇನಕ್ಕುಂ ಕಿಂ।

೩೮. ಅದೇ, ಅಂತುಂ ದಶರಥಂ ಮೂರ್ಛಿತನಪ್ಪುದಂ.

೩೯. ಅದೇ- ಅಕಳಂಕಚರಿತ್ರಂ ಕ್ಷ। ತ್ರಕುಳೊದ್ಗತನೆರಡನುಸಿರ್ದೊಡೈಹಿಕಮಾಮು।

೪೦. ತೊರವೆ ರಾಮಾಯಣ, ಅಯೋಧ್ಯಾಕಾಂಡ, ಒಂದನೆಯ ಸಂಧಿ, ಪದ್ಯ-೨೭-೨೮.

೪೧. ಅದೇ, ಪದ್ಯ-೩೭-೩೮.

೪೨. ಅದೇ, ಸಂಧಿ-೨, ಪದ್ಯ-೬.

೪೩. ಅದೇ, ಪದ್ಯ: ೩೯-೪೨.

೪೪. ಅದೇ, ಪದ್ಯ: ೪೭-೪೮.

೪೫. ಅದೇ, ಸಂಧಿ-೬, ಪದ್ಯ: ೩೦

೪೬. ಶ್ರೀಮದ್ವಾಲ್ಮೀಕಿ ರಾಮಾಯಣಮ್, ಅರಣ್ಯಕಾಂಡ

೪೭. ತುಲಸಿ ರಾಮಾಯಣ.

೪೮. ಪುರಾಣ ಭಾರತ ಕೋಶ.

೪೯. ಶ್ರೀಮದ್ವಾಲ್ಮೀಕಿ ರಾಮಾಯಣ, ಯುದ್ಧಕಾಂಡ, ಸರ್ಗ-೧೧೪, ಶ್ಲೋ ೧೯.

೫೦. ಅದೇ, ಶ್ಲೋ: ೨೮-೨೯.

೫೧. ಅದೇ, ಶ್ಲೋ: ೩೨-೩೪.

೫೨. ಅದೇ, ಶ್ಲೋ: ೩೯-೪೦.

೫೩. ಅದೇ, ಶ್ಲೋ: ೪೭-೪೮.

೫೪. ಅದೇ, ಶ್ಲೋ: ೬೫-೬೬.

೫೫. ಅದೇ, ಶ್ಲೋ: ೬೯-೭೦.

೫೬. ಶ್ರೀ ರಾಮಚರಿತಮಾನಸ, ಲಂಕಾಕಾಂಡ, ದೋ-೬.

೫೭. ಅದೇ, ದೋ: ೭.

೫೮. ಅದೇ, ದೋ: ೩೫ (ಖ).

೫೯. ಅದೇ, ದೋ: ೩೫ (ಖ) ಚೌ: ೧-೪.

೬೦. ಅದೇ, ದೋ: ೩೬, ಚೌ: ೧-೪.

೬೧. ತೊರವೆ ರಾಮಾಯಣ, ಸಉುಂದರಕಾಂಡ, ಸಂಧಿ-೨, ಪದ್ಯ-೭೬.

೬೨. ಡಾ. ಕೆ.ಎಸ್. ನಾರಾಯಣಚಾರ್, ಶ್ರೀರಾಮಾಯಣ ಪಾತ್ರ ಪ್ರಪಂಚ, ೨೦೧೦, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ಪುಟ-೪೬.

೬೩. ಅದೇ, ಪುಟ-೬೩.

೬೪. ಅದೇ, ಪುಟ-೫೧.

೬೫. ಡಾ. ವಿಜಯಶ್ರೀ ಸಬರದ (ಸಂ), ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂಪುಟ-೬, ಸಾಹಿತ್ಯ ವಿಮರ್ಶೆ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ, ಪುಟ-೩೫೫.

೬೬. ಅದೇ, ಪುಟ-೨೫೮.

೬೭. ಡಾ. ಕೆ.ಎಸ್. ನಾರಾಯಣಾಚಾರ್, ಶ್ರೀ ರಾಮಾಯಣ ಪಾತ್ರ ಪ್ರಪಂಚ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೧೦, ಪುಟ-೫೬.

೬೮. ಪು.ತಿ. ನರಸಿಂಹಾಚಾರ್, ಅಹಲ್ಯೆ, ಡಿ.ವಿ.ಕೆ. ಮೂರ್ತಿ ಪ್ರಕಾಶಕರು: ಮೈಸೂರು, ಪುಟ-೧೨.

೬೯. ನ್ಯಾ॥ ಡಾ.ಮ. ರಾಮಾಜೋಯಿಸ್, ಮನುಸ್ಮೃತಿಯಲ್ಲಿ ಶಾಶ್ವತ ಜೀವನ ಮೌಲ್ಯಗಳು, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೭, ಪುಟ-೬೧-೬೨.

೭೦. ಡಾ. ಪೋಲಂಕಿ ರಾಮಮೂರ್ತಿ, ಸೀತಾಯಣ, ವಿಚಾರಿ ಪ್ರಕಾಶನ, ಶಿವಮೊಗ್ಗ, ೧೯೮೪, ಪುಟ-೧೦೬.

೭೧. ಅದೇ, ಪುಟ-೧೦೮.

೭೨. ನ್ಯಾ॥ ಡಾ.ಮ. ರಾಮಾಜೋಯಿಸ್, ಮನುಸ್ಮೃತಿಯಲ್ಲಿ ಶಾಶ್ವತ ಜೀವನ ಮೌಲ್ಯಗಳು, ಪುಟ-೭೧.

೭೩. ವಿಮುಕ್ತ, ಅಭಿನವ ಚಾತುರ್ಮಾಸಿಕ, ಓಲ್ಗಾ ಕಥಾ ಜಗತ್ತಿನ ಜೊತೆಗೊಂದು ಮಾತುಕಥೆ, ಕನ್ನಡಕ್ಕೆ: ಜಿ. ವೀರಭದ್ರಗೌಡ, ಸ-೧೮, ಸಂ. ೨, ೩, ಪುಟ-೧೦.

೭೪. ಅದೇ, ಪುಟ-೧೧.

೭೫. ಅದೇ, ಪುಟ–೨೪.

೭೬. ಅದೇ, ಪುಟ–೫೪.

೭೭. ಅದೇ, ಪುಟ–೩೫.

೭೮. ಅದೇ, ಪುಟ–೬೭.

೭೯. ಡಾ. ಗಾಯತ್ರೀ ನಾವಡ, ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩, ಪುಟ–೪೩.

೮೦. ಡಾ. ಶೈಲಜಾ ಹಿರೇಮಠ, ಮಹಿಳಾ ಜನಪದ ಸಾಹಿತ್ಯ: ಸಂಗ್ರಹ ಮತ್ತು ಅಧ್ಯಯನಗಳ ಚರಿತ್ರೆ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ: ಡಾ. ಎಚ್.ಎಸ್. ಶ್ರೀಮತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪುಟ–೬೦೩.

೮೧. ಮಲೇಮಾದೇಶ್ವರ ಕಾವ್ಯ.

## ಅಧ್ಯಾಯ-೬

## ಉಪಸಂಹಾರ

ರಾಮಾಯಣದ ಪ್ರತಿಯೊಂದು ಪಾತ್ರ, ಸನ್ನಿವೇಶಗಳಲ್ಲಿ ಸಮಕಾಲೀನ ಸಮಾಜದ ಪ್ರಭಾವವಿದ್ದೇ ಇರುತ್ತದೆ. ರಾಮಾಯಣವೂ ಇದಕ್ಕೆ ಹೊರತಲ್ಲವೆಂಬುದು ಪ್ರತಿಯೊಂದು ಪಾತ್ರದಿಂದಲೂ ಸ್ಪಷ್ಟವಾಗುತ್ತದೆ. ಇಲ್ಲಿ ಬರುವ ಪ್ರತಿಯೊಂದು ಪಾತ್ರದ ಸ್ವಭಾವವು ಕಲಿಯುಗವನ್ನೇ ನೆನಪಿಸುತ್ತದೆ. ಪಾತ್ರಗಳ ಬಾಯಿಂದ ಬರುವ ಮಾತುಗಳು ಕೆಲವು ಸನ್ನಿವೇಶಗಳನ್ನು ಬಿಟ್ಟರೆ ಉಳಿದೆಲ್ಲ ಸಂದರ್ಭಗಳಲ್ಲಿಯೂ ಅತೀ ಸಾಮಾನ್ಯನ ಮಾತುಗಳಂತೆಯೇ ಕೇಳುತ್ತವೆ.

ರಾಮಾಯಣದ ಮೂಲ ಕಥೆಯನ್ನು ಮೂರು ಬಗೆಯಾಗಿ ಗುರುತಿಸುತ್ತಾರೆ. ರಾಮಾಯಣ ನೈಜಪಾಠ ಮತ್ತು ಪ್ರಕ್ಷಿಪ್ತ ಭಾಗಗಳ ಬಗೆಗೆ ವಿವೇಚಿಸುವ ಬದಲು ರಾಮಾಯಣದ ಮೂಲ ಪಾಠವು ದಾಕ್ಷಿಣಾತ್ಯ ಸಂಸ್ಕರಣಗಳಲ್ಲಿ ಸುರಕ್ಷಿತವಾಗಿದೆ ಎಂಬ ಮಾತಿದೆ. ನಮ್ಮ ಅಧ್ಯಯನದಲ್ಲಿ ಕನ್ನಡ ಮತ್ತು ಹಿಂದೀ ರಾಮಾಯಣದ ಕಥೆಗಳನ್ನು ನೋಡಿದಾಗ ಮತ್ತು ಮೂಲ ರಾಮಾಯಣವನ್ನು ನೋಡಿದಾಗ ಇದು ಸತ್ಯವೆಂಬುದು ವಿದಿತವಾಗುತ್ತದೆ.

ರಾಮಾಯಣವು ಈಗಾಗಲೇ ನಡೆದುಹೋದ ಘಟನೆ. ಇತಿಹಾಸ, ಮಹಾಕಾವ್ಯವೆಂದು ಅದನ್ನು ಗುರುತಿಸಲಾಗಿದೆ. ಹಿನ್ನೆಲೆಯಲ್ಲಿ ರಾಮಾಯಣದ ಪಾತ್ರಗಳ ಔಚಿತ್ಯಗಳ ಬಗೆಗೆ ನವನವೀನ ದೃಷ್ಟಿಕೋನದಿಂದ ಈ ಪಾತ್ರಗಳು ಹೀಗಿರಬೇಕಾಗಿತ್ತು ಎಂದು ಚರ್ಚೆಯಾಗಿರುವುದು. ರಾಮಾಯಣದ ಪಾತ್ರಗಳ ಸ್ವಭಾವಗಳ ಬಗೆಗೆ ವಿವಿಧ ರೀತಿಯ ಅಭಿಪ್ರಾಯಗಳನ್ನು ನೀಡುವ ಪ್ರತಿಕ್ರಿಯೆಯೂ ಸಾವಿರಾರು ವರ್ಷಗಳಿಂದ ಒಂದು ಪದ್ಧತಿಯೋ ಎಂಬ ರೀತಿಯಲ್ಲಿ ಬೆಳೆದು ಬಂದಿದೆ. ಇಂತಹ ಅಭಿಪ್ರಾಯಗಳನ್ನು ಹಲವಾರು ವ್ಯಕ್ತಿಗಳು ನೀಡಿದರೂ ಅದನ್ನು ಸಮರ್ಥವಾಗಿ ಅಭಿವ್ಯಕ್ತಗೊಳಿಸುವ ಕಲೆ ಕವಿಗೆ ಮಾತ್ರ ಕರಗತವಾಗಿರುತ್ತದೆ. ಹೀಗಾಗಿ ಕವಿಯು ಸಮಾಜದ ಧ್ವನಿಯಾಗಿ ಆಯಾ ಪಾತ್ರಗಳ ಬಾಯಿಂದ ತನ್ನ ಅಭಿಪ್ರಾಯಗಳನ್ನು ವ್ಯಕ್ತಗೊಳಿಸುತ್ತಾನೆ. ಒಂದೇ ಪಾತ್ರವು ವಿವಿಧ ಕಾಲಗಳಲ್ಲಿ ವಿಭಿನ್ನವಾಗಿ ಮೂಡಿಬಂದಿರುವುದು ಹೇಗೆ ಎಂದಷ್ಟೇ ಅಲ್ಲ ಸಮಕಾಲೀನ ಸಮಾಜದ ರೀತಿ-ನೀತಿಗಳು, ಸ್ತ್ರೀ-ಪುರುಷರ ಸ್ವಭಾವಗಳು ಈ ಪಾತ್ರಗಳ ಮೇಲೆ ದಟ್ಟವಾದ ಪ್ರಭಾವವನ್ನು ಬೀರುತ್ತದೆ. ಹೀಗಾಗಿಯೇ ಒಂದೊಂದು ರಾಮಾಯಣವೂ ಒಂದೊಂದು ರೀತಿಯಲ್ಲಿ ರಚಿತವಾಗಿವೆ. ಜೊತೆಗೆ ಕವಿಯು ತಾನು ಓದಿದ, ಕೇಳಿದ ರಾಮಾಯಣವನ್ನು ತನ್ನ ಜ್ಞಾನ ಹಾಗೂ ಅನುಭವದ ಮೂಸೆಯಲ್ಲಿ ತಿಕ್ಕಿ ಹದಗೊಳಿಸಿ ತನ್ನ ಕೃತಿಯ ಮೂಲಕ ಇನ್ನೊಂದು ರಾಮಾಯಣ ಕಥೆಯನ್ನು ಕಟ್ಟಿಕೊಡುತ್ತಾನೆ. ಹಾಗೆ ಕಟ್ಟಿಕೊಡುವಾಗ ತನ್ನ ಸಾಮರ್ಥ್ಯವನ್ನು ಅಭಿವ್ಯಕ್ತಗೊಳಿಸುವುದು. ತನ್ನ ಹೆಗ್ಗಳಿಕೆಯನ್ನು ಸಾರುವುದು ಒಂದು ಸಂಪ್ರದಾಯವೇ ಆಗಿದೆ. ಅದರಲ್ಲಿ ಸಮಕಾಲೀನ ಕವಿಗಳ, ಹಿಂದಿನ ಕವಿಗಳ ನೆನಪು ಇವುಗಳ ಸಂಪ್ರದಾಯವೆನ್ನುವ ರೀತಿಯಲ್ಲಿ ಪಾಲಿಸಿಕೊಂಡು ಬರುತ್ತಾನೆ. ತನ್ನ ಇಷ್ಟದೈವ,

ತನ್ನ ಆಶ್ರಯದಾತ ಮುಂತಾದವರ ಮೇಲೆ ರಾಮಾಯಣದಂತಹ ಐತಿಹಾಸಿಕ ಕಾವ್ಯದ ಪಾತ್ರಗಳನ್ನು ಆರೋಪಿಸುವ ಮೂಲಕ ತನ್ನ ಕ್ರಿಯಾಶೀಲತೆಯನ್ನು ತೋರಿಸಿಕೊಳ್ಳುತ್ತಾರೆ. ಇಲ್ಲಿ ಕವಿ ಧರ್ಮವೂ ಮಹತ್ತರ ಪಾತ್ರ ವಹಿಸುತ್ತದೆ ಎಂಬುದನ್ನು ಮರೆಯುವಂತಿಲ್ಲ. ಆದ್ದರಿಂದಲೇ ಜೈನ ರಾಮಾಯಣದ ರಾಮ ರಾವಣನನ್ನು ಸಂಹರಿಸುವುದಿಲ್ಲ. ಇಲ್ಲಿನ ರಾವಣ ದುಷ್ಟನಲ್ಲ ಉದಾತ್ತ ಪುರುಷನಾಗಿದ್ದಾನೆ ಹೀಗೆ ಅನೇಕ ಪಾತ್ರಗಳ ಬಗ್ಗೆ ವಿವರಣೆ ನೀಡಲು ಸಾಧ್ಯವಾಗಿದೆ.

ಮುಖ್ಯವಾದ ಪ್ರಶ್ನೆಯೆಂದರೆ ಭೂತಕಾಲದ ಘಟನೆ ವರ್ತಮಾನದ ದೃಷ್ಟಿಯಿಂದ ನೋಡಿ ಪಾತ್ರಗಳಿಗೆ ಅನ್ಯಾಯವಾಗಿದೆ, ನಿರ್ಲಕ್ಷಿಸಲಾಗಿದೆ ಎಂದು ಹೇಳಲು ಇರಬಹುದಾದ ಸಾಂಸ್ಕೃತಿಕ, ಸಾಮಾಜಿಕ ಒತ್ತಡಗಳೇನು. ಇದೇ ಹಿನ್ನೆಲೆಯಲ್ಲಿ ರಾಮಾಯಣದ ಸ್ತ್ರೀಪಾತ್ರಗಳನ್ನು ಅಧ್ಯಯನ ಮಾಡಿದಾಗ ಸಮಕಾಲೀನವಾಗಿ ಸ್ತ್ರೀಯರಿಗಿದ್ದ ಸ್ಥಾನಮಾನ, ಅವರ ಭಾವನೆಗಳು, ಸ್ತ್ರೀಸಹಜವಾದ ಗುಣಗಳು ಇವುಗಳ ಬಗೆಗೆ ಸೂಕ್ಷ್ಮವಾಗಿ ಗಮನಿಸಲು ಸಾಧ್ಯವಾಯಿತು. ಹಲವು ಸ್ತ್ರೀ ಸಹಜ ಗುಣಗಳಾದ ಸಹನೆ, ಅಸೂಯೆ, ನಿಷ್ಠುರತೆ, ವಿರೋಧ, ಹಠ ಇವುಗಳು ಯುಗ ಯುಗಗಳಲ್ಲೂ ಬದಲಾಗದೆ ಇರುವುದು ಸೋಜಿಗವೆನಿಸಿತು. ಚಾಡಿ ಮಾತುಗಳನ್ನು ಕೇಳವು ಸ್ತ್ರೀಯರು, ತಮ್ಮ ಕುಟಿಲ ಮಾತುಗಳಿಂದ ಸಂಸಾರವನ್ನು ಹಾಳುಗೆಡಹುವ ಸ್ತ್ರೀಯರು, ತನ್ನ ಹಠದಿಂದ ರಾಮನೊಂದಿಗೆ ಕಾಡಿಗೆ ಹೋದ ಸೀತೆ, ಎದಿರು ಮಾತನಾಡಲಾಗದೆ ಮೌನವಾಗಿ ಎಲ್ಲಿಯೋ ಕಳೆದುಹೋಗುವ ಊರ್ಮಿಳೆ ಮುಂತಾದವರನ್ನು ಸಾಲಿನಲ್ಲಿ ತನ್ನ ಹಠವನ್ನು ಸಾಧಿಸಹೊರಟು ವಿಪತ್ತನ್ನು ವೈಧವ್ಯವನ್ನು, ನಿರಾಶೆಯನ್ನು ಹೊಂದುವ ಕೈಕೇಯಿಯನ್ನು ಕಾಣುತ್ತೇವೆ. ನ್ಯಾಯಯುತವಾಗಿದ್ದರೂ ಮಗನನ್ನು ಕಾಡಿಗೆ ಕಳಿಸಬೇಕಾಗುವ ಮತ್ತು ವಿಧವೆಯಾಗಬೇಕಾದ ಕೌಸಲ್ಯೆಯ ಉದಾಹರಣೆಯಿದೆ. ತನ್ನ ಇಬ್ಬರು ಮಕ್ಕಳಲ್ಲಿ ಒಬ್ಬ ರಾಮನೊಂದಿಗೆ ಕಾಡಿನಲ್ಲಿ, ಇನ್ನೊಬ್ಬ ಭರತನೊಂದಿಗೆ ನಾಡಿನಲ್ಲಿ. ಇಬ್ಬರಿಗಾಗಿ ಇತ್ತ ದುಃಖಿಸದೆ ಅತ್ತ ಸಂತಸಪಡದೆ ಯಾವುದೇ ರೀತಿಯಲ್ಲಿಯೂ ತನ್ನ ಭಾವನೆಯನ್ನು ವ್ಯಕ್ತಪಡಿಸಲಾಗದ ಅಸಹಾಯ ಸ್ಥಿತಿಯಲ್ಲಿ ಸುಮಿತ್ರೆಯಿದ್ದಾಳೆ. ತನ್ನ ಮಕ್ಕಳು, ಸೊಸೆಯರ ಬಗ್ಗೆಯಾಗಲಿ, ಕೌಸಲ್ಯೆ, ಕೈಕೇಯಿಯ ಬಗ್ಗೆಯಾಗಲಿ, ದಶರಥನ ನಡವಳಿಕೆ ಇವು ಯಾವುದರ ಬಗ್ಗೆಯೂ ಧ್ವನಿಯೆತ್ತಲಾರದ ಸ್ಥಿತಿಯಲ್ಲಿರುವ ಸುಮಿತ್ರೆಯ ಸ್ಥಿತಿ ಕರುಣಾಜನಕವಾಗಿದೆ. ಇವೆಲ್ಲದರ ಜೊತೆಗೆ ವೈಧವ್ಯ ಪ್ರಾಪ್ತಿ.

ಪ್ರಸ್ತುತ ಸಂಶೋಧನೆಗೆ ಸೀತೆ, ಊರ್ಮಿಳೆ, ಸುಮಿತ್ರೆ, ಸುನಯನಾದೇವಿ, ಅಹಲ್ಯೆ, ಶಬರಿ, ಮಂಥರೆ, ತಾಟಕಿ, ಶೂರ್ಪನಖಿ, ಮಂಡೋದರಿ, ಅನಲೆ ಮತ್ತು ತಾರಾ ಈ ಹನ್ನೆರಡು ಜನರನ್ನು ಆಯ್ಕೆ ಮಾಡಿಕೊಳ್ಳಲಾಗುತ್ತು. ಶಬರಿ, ಸುನಯನಾದೇವಿ, ತಾಟಕಿ ಮತ್ತು ತಾರಾ ಈ ಐವರನ್ನು ಕೈ ಬಿಡಲಾಯಿತು. ಲಭ್ಯ ಮಾಹಿತಿಗಳು ಬಹಳ ಕಡಿಮೆಯಿದ್ದು, ಈ ಪಾತ್ರಗಳನ್ನು ನಾವು ಆಯ್ಕೆಮಾಡಿಕೊಂಡ ದೃಷ್ಟಿಯಿಂದ ಅಧ್ಯಯನ ಮಾಡಲು ಸಾಲದಾಗಿದ್ದವು.

ಪಾತ್ರಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಪ್ರತಿಯೊಂದು ಪಾತ್ರವೂ ಒಂದಲ್ಲ ಒಂದು ಕಾರಣಕ್ಕೆ ನಿರ್ಲಕ್ಷ್ಯಕ್ಕೊಳಗಾಗಿರುವುದು, ಶೋಷಣೆಗೊಳಗಾಗಿರುವುದು ಕಂಡುಬಂದಿತು. ಅಂದಿನ ಮೌಲ್ಯಗಳನ್ನು ಗಮನದಲ್ಲಿರಿಸಿಕೊಂಡು ರಾಮಾಯಣ ಕಾವ್ಯದ ರಚನೆಯಾಗಿದೆಯೆಂಬುದು ನಿರ್ವಿವಾದ. ಜಾನಪದವೇ ಆಗಲಿ, ಶಿಷ್ಟವೇ ಆಗಲಿ ಕವಿ ತಾನು ನೋಡಿದ, ಕೇಳಿದ, ಅನುಭವಿಸಿದ ವಿಚಾರಗಳನ್ನು ಕ್ರೋಢೀಕರಿಸಿ ಯಾವುದೇ ವಿಷಯದ ತೀರ್ಮಾನಕ್ಕೆ ಬರುತ್ತಾನಲ್ಲವೇ? ಇದು ರಾಮಾಯಣದ ಕವಿಗೆ ಮಾತ್ರವಲ್ಲ ಪ್ರತಿಯೊಬ್ಬರಿಗೂ ಅನ್ವಯಿಸುತ್ತದೆ. ಯಾವುದೇ ಒಂದು ಮಾದರಿಯಿಲ್ಲದೆ ಹೊಸದನ್ನು ನಿರ್ಮಿಸುವುದು ಸಾಧ್ಯವಿಲ್ಲ. ಸ್ವತಃ ರಾಮಾಯಣದ ಕವಿಯಲ್ಲಿ ಕಾವ್ಯ ಮಾಡುವ ಮೊದಲಿದ್ದ ಸ್ವಭಾವಕ್ಕೂ ಕ್ರೌಂಚ ಪಕ್ಷಿಗಳ ಘಟನೆಯಾದಾಗಿನ ನಂತರದ ಸ್ವಭಾವಕ್ಕೂ ಅಜಗಜಾಂತರ ವ್ಯತ್ಯಾಸವಿಲ್ಲವೇ? ಆದ್ದರಿಂದ ಕವಿಗೆ ತಾನು ತನ್ನ ಸುತ್ತಲಿನ ಸಮಾಜದಲ್ಲಿನ ಜನರ ಸ್ವಭಾವ, ಮಾತುಕತೆಗಳ ಪ್ರಭಾವ ಇದ್ದೇ ಇರುತ್ತದೆಯಲ್ಲವೇ? ರಾಮಾಯಣದ ಪಾತ್ರಗಳನ್ನು ನೋಡಿದಾಗ ಅದು ಸತ್ಯವೆನಿಸುತ್ತದೆ. ಅಷ್ಟೊಂದು ಪಾತ್ರಗಳಲ್ಲಿ ಒಂದೆರಡು ಪಾತ್ರಗಳಷ್ಟೇ ಭಿನ್ನವಾಗಿದ್ದಿದ್ದರೆ ನಮಗೆ ಈ ಅಭಿಪ್ರಾಯವೂ ಬರುತ್ತಿರಲಿಲ್ಲ. ಯಾವುದೇ ಪಾತ್ರವಾದರೂ ಸರಿಯೇ ತಾವೇನು ಮಾತನಾಡುತ್ತೇವೆಂಬ ಪರಿವೆಯೇ ಇಲ್ಲದೆ ಮಾತನಾಡುವುದು ಒಂದು ವಿಶೇಷವಾಗಿದೆ.

ಅನೇಕ ಬಗೆಯ ರಾಮಾಯಣಗಳು ನಮಗೆ ದೊರೆತಿವೆ. ಅವುಗಳಲ್ಲಿ ನಾವು ವೈದಿಕ ಮತ್ತು ಜೈನ ಪರಂಪರೆಯ ರಾಮಾಯಣಗಳನ್ನು ಅಧ್ಯಯನಕ್ಕಾಗಿ ಆರಿಸಿಕೊಂಡಿದ್ದೆವು. ವೈದಿಕ ರಾಮಾಯಣವೂ ಕೂಡ ಜಾನಪದ, ಯುಗಧರ್ಮ, ಸಮಕಾಲೀನ ಭಾಷಾ ಪ್ರಭಾವ, ಕವಿ ಸ್ವಾತಂತ್ರ್ಯಗಳೂ ಸೇರಿ ಮೂಲ ರಾಮಾಯಣವಾಗಿಯೇ ಉಳಿದಿಲ್ಲವೆಂಬುದು ಸರ್ವಮಾನ್ಯ. ನಾವು ಅಧ್ಯಯನವನ್ನು ಕೈಗೊಂಡಾಗ ಇವೆಲ್ಲವೂ ನಮಗೆ ಸವಾಲಿನದಾಗಿತ್ತು. ಅದರಲ್ಲೂ ಮೂಲ ವಾಲ್ಮೀಕಿ ರಾಮಾಯಣದೊಂದಿಗೆ ಕನ್ನಡ ಮತ್ತು ಹಿಂದಿಯ ರಾಮಾಯಣಗಳನ್ನು ಆಯ್ಕೆ ಮಾಡಿಕೊಂಡಿದ್ದು ಕೂಡ ಒಂದು ರೀತಿಯ ಗೊಂದಲವಾಯಿತು. ಅವುಗಳ ಪ್ರತಿನಿಧಿಗಳೋ ಎಂಬಂತೆ ಕವಿಗಳು ತಮ್ಮ ಮನಸ್ಸಿನ ಸಮಾಧಾನಕ್ಕಾಗಿ ಅನ್ಯಾಯವೆನಿಸಿದೆ ಎಂಬ ಪಾತ್ರಗಳನ್ನು ಆಯ್ದುಕೊಂಡು ಅವುಗಳಿಗೆ ನ್ಯಾಯ ಕೊಡುವ ಉದ್ದೇಶದಿಂದ ಕಾವ್ಯವನ್ನು ರಚಿಸಿದ್ದಾರೆ ಎನ್ನುವುದು 'ಸಾಕೇತ'ದಲ್ಲೂ, ರಾಮಾಯಣ ದರ್ಶನಂದಲ್ಲೂ ಅತ್ಯಂತ ಸ್ಪಷ್ಟವಾಗಿ ತಿಳಿಯುತ್ತದೆ. ಸತ್ಯವೇನಿದೆ ಎಂಬುದು ನಮ್ಮ ಊಹೆಗೂ ನಿಲುಕದ್ದು. ಊಹೆ ಮಾಡಿಕೊಳ್ಳುವುದಕ್ಕೆ ಮೂಲ ರಾಮಾಯಣದಲ್ಲಿ ನಮಗೆ ಯಾವ ಆಧಾರವೂ ದೊರೆಯುವುದಿಲ್ಲ. ಹೀಗಾಗಿ ಅಂದಿನ ಜನರ ಮನಸ್ಥಿತಿ, ಆಡುವ ಮಾತುಗಳ ಮೂಲಕ ಆಯಾ ಪಾತ್ರಗಳ ಗುಣಸ್ವಭಾವ, ಸಮಕಾಲೀನ ಸಮಾಜದ ಸ್ಥಿತಿಗತಿಗಳ ಬಗೆಗೂ ಗಮನ ಹರಿಸಿದ್ದೇವೆ.

ವಾಲ್ಮೀಕಿ ವಿರಚಿತ ಮೂಲ ಕಥೆಗೂ, ವಿವಿಧ ರಾಮಾಯಣಗಳಿಗೂ, ಜೈನ ರಾಮಾಯಣಗಳಿಗೂ ಸಾಕಷ್ಟು ವ್ಯತ್ಯಾಸವಿದೆ. ಆ ದೃಷ್ಟಿಯಿಂದ ಹೇಳುವುದಾದರೆ ಜೈನ ರಾಮಾಯಣದ ರಾಮ ಏಕಪತ್ನಿವ್ರತಸ್ಥನಲ್ಲ. ರಾವಣನನ್ನು ಸಂಹಾರ ಮಾಡುವುದು ಲಕ್ಷ್ಮಣನೇ ಹೊರತು ರಾಮನಲ್ಲ. ಜೈನ ರಾಮಾಯಣವನ್ನು

ಪ್ರತ್ಯೇಕವಾಗಿ ನಿಲ್ಲಿಸಲು ಇವೆರಡು ಅಂಶಗಳೇ ಸಾಕು. ಏಕೆಂದರೆ ಇಂದಿಗೂ ರಾಮನೆಂದರೆ ಏಕಪತ್ನಿವ್ರತಸ್ಥನೆಂಬ ಭಾವನೆ ಜನಮಾನಸದಲ್ಲಿ ಬೇರೂರಿದೆ. ರಾವಣನನ್ನು ಸಂಹರಿಸುವುದಕ್ಕಾಗಿಯೇ ರಾಮನ ಅವತಾರವಾಗುತ್ತದೆ. ಜೈನ ರಾಮಾಯಣದಲ್ಲಿ ರಾಮನು ರಾವಣನ ಸಂಹಾರ ಮಾಡಿದರೆ ಹಿಂಸೆ ಮಾಡಿದಂತಾಗುವುದಿಲ್ಲವೇ? ನಾಯಕನಾದವನೇ ಹಿಂಸೆ ಮಾಡಿಬಿಟ್ಟರೆ ಜೈನ ಧರ್ಮಕ್ಕೆ ಅಪಮಾನ ಮಾಡಿದಂತಾಗುತ್ತದೆಂಬ ಕಾರಣಕ್ಕೆ ಮಾಡಿಕೊಂಡಿರುವ ಬದಲಾವಣೆಯಿಂದಾಗಿ ಜೈನ ರಾಮಾಯಣವು ಬೇರೆಯಾಗಿಯೇ ನಿಲ್ಲುತ್ತದೆ.

ರಾಮಾಯಣ ಕಾವ್ಯವನ್ನು ಅಧ್ಯಯನ ಮಾಡುವ ಸಂಶೋಧಕರಿಗೆ ಹಲವಾರು ಆಯಾಮಗಳು ದೊರಕುತ್ತವೆ. ರಾಮಾಯಣ ಕಾಲದಲ್ಲಿದ್ದ ಸಮಾಜದ ಅಧ್ಯಯನ ಮಾಡುವುದು ಅವುಗಳಲ್ಲಿ ಪ್ರಮುಖವಾದ ವಿಷಯವಾಗಿದೆ. ಏಕೆಂದರೆ ರಾಮಾಯಣ ನಡೆಯುವ ಸಂದರ್ಭವು ಹೇಗಿದೆಯೆಂದರೆ ಮಾನವರು, ದಾನವರು, ವಾನರರು ಇವರೆಲ್ಲರೂ ಒಟ್ಟಿಗೆ ಮುಂದುವರಿಯುತ್ತಾ ಹೋಗುತ್ತಾರೆ. ಬಹಳಷ್ಟು ಸಂದರ್ಭಗಳಲ್ಲಿ ಇವರೆಲ್ಲರೂ ಮುಖಾಮುಖಿಯಾಗುತ್ತಾರೆ. ಮುಖಾಮುಖಿಯಾಗುವುದಷ್ಟೇ ಅಲ್ಲ ಪರಸ್ಪರ ಜೀವಿಗಳ ಧರ್ಮದ ಬಗೆಗೆ ಆಡುವ ಮಾತುಗಳನ್ನು ಗಮನಿಸಬಹುದು. ಇವು ಕೇವಲ ಮಾನವ ಧರ್ಮವಲ್ಲ, ದಾನವ ಧರ್ಮವಲ್ಲ, ಪ್ರಾಣಿ ಧರ್ಮವೂ ಅಲ್ಲ. ಇದು ಸಮಾಜ ಧರ್ಮವೇ? ಹಾಗಾದರೆ ಸಮಾಜ ಧರ್ಮವೆಂದರೇನು? ನಾವು ಮನುಷ್ಯರು, ರಾಕ್ಷಸರು, ಪ್ರಾಣಿಗಳು ಮತ್ತು ದೇವರನ್ನು ಪ್ರತ್ಯೇಕವಾಗಿ ನೋಡುತ್ತೇವೆ. ಇವು ಅವರವರ ವರ್ಗದ ಮೇಲೆ ಅವಲಂಬಿಸಿರುವ ರೀತಿ ನೀತಿಗಳು ಮತ್ತು ಗುಣ ಸ್ವಭಾವಗಳು. ರಾಮಾಯಣದ ಸಂದರ್ಭದಲ್ಲಿ ಅವುಗಳನ್ನು ಒಟ್ಟಿಗೆ ನೋಡುತ್ತೇವೆ. ಎಂಬುದೇ ವಿಶೇಷ.

ರಾಮಾಯಣದ ಪರಂಪರೆಗೆ ಆಧುನಿಕತೆ ಎಂಬುದು ವೈಚಾರಿಕ ಪ್ರಜ್ಞೆಯನ್ನು ನೀಡಿತು. ಅಂದರೆ ವಾಸ್ತವತೆಗೆ ಸಮೀಪದ ನೆಲೆಯಲ್ಲಿ ನಿಂತು ಚಾರಿತ್ರಿಕ ಅಥವಾ ಪೌರಾಣಿಕ ಘಟನೆಗಳನ್ನು ಮಾನವೀಯ ಸಾಂದರ್ಭಿಕ ನೆಲೆಯಲ್ಲಿ ವಿವೇಚಿಸುವುದು ಎಂದರ್ಥ. ರಾಮಾಯಣವು ಇತಿಹಾಸವೊಂದನ್ನು ತನ್ನ ಗರ್ಭದಲ್ಲಿಟ್ಟುಕೊಂಡಿರುವ ಕಾವ್ಯ. ಇಲ್ಲಿ ಅನೇಕ ಜನಾಂಗಗಳು-ಪ್ರದೇಶಗಳ ಮೌಲ್ಯಗಳು, ವಿಚಾರಗಳು, ಚಿಂತನೆಗಳು, ಬದುಕಿನ ಕ್ರಮಗಳು ಅಡಗಿವೆ. ಸಾಮಾಜಿಕ ವ್ಯವಸ್ಥೆ, ಬದುಕನ್ನು ವಿಶ್ಲೇಷಿಸುವ ರೀತಿ, ಕೌಟುಂಬಿಕ ಸಾಮರಸ್ಯ, ಗಂಡು ಹೆಣ್ಣಿನ ಸಂಬಂಧಗಳನ್ನು ಕುರಿತಂತೆ ಪ್ರತಿ ರಾಮಾಯಣ ನಿರ್ದಿಷ್ಟ ಕಾಲಘಟ್ಟದ ಪ್ರಭಾವದಿಂದ ಹೊಸರೂಪವನ್ನು ಪಡೆಯುತ್ತಲೆ ಸಾಗಿದೆ. 'ವಸ್ತು' ಒಂದೇ ಆದರೂ ಯುಗಪಲ್ಲಟದಿಂದಾಗಿ ಕಾವ್ಯದಲ್ಲಿನ ವ್ಯಕ್ತಿ, ಸಂದರ್ಭಗಳು ಕವಿವಾಣಿಯಲ್ಲಿ ಭಿನ್ನರೂಪವನ್ನೇ ಪಡೆಯುತ್ತವೆ. ಹಾಗೂ ಆ ಕಾಲದ ತುರ್ತಾದ ವಿಚಾರಗಳೇ ಅಭಿವ್ಯಕ್ತಿಸಲ್ಪಡುತ್ತವೆ. ಕಾಲದಿಂದ ಕಾಲಕ್ಕೆ ಬದಲಾದ ರಾಮಾಯಣ ಸಾಮಾನ್ಯ ಮಾನವನ ಬದುಕಿನ ಜಾಡನ್ನು ಹಿಡಿಯುತ್ತ ಕುವೆಂಪು ಬರಹದ ಹೊತ್ತಿಗೆ ವಿಶ್ವಮಾನವತ್ವದ ಸಂದೇಶದಡಿಯಲ್ಲಿ ಸಾಮರಸ್ಯವೇ ಬದುಕಿನ ಪರಿಪೂರ್ಣತೆ, ಮಾನವರಲ್ಲಿ ಗಂಡು-

ಹೆಣ್ಣುಗಳೆಂಬ ಬೇಧವಿಲ್ಲ. ಮೌಲ್ಯಗಳು ಬದುಕಿನ ಪರಂಪರೆಯ ಭಾಗವಲ್ಲ. ಒಪ್ಪಿಕೊಂಡ ಬದುಕಿನಲ್ಲಿ ಮೌಲ್ಯಗಳು ಮರುರೂಪಗೊಂಡು ಅದಕ್ಕಾಗಿ ಬದ್ಧವಾಗಿ ನಡೆಯುವಂಥದ್ದೆ ಆಗಿದೆ, ಹಾಗೂ ನೇತ್ಯಾತ್ಮಕ ಎಂಬ ಘಟನೆಗಳು ಬದುಕಿನಲ್ಲಿ ಬರುವುದಿಲ್ಲ. ಪ್ರತಿ ಘಟನೆಗಳು ಇತ್ಯಾತ್ಮಕ ಹಾಗೂ ಸಕಾರಾತ್ಮಕಗಳೇ ಆಗಿರುತ್ತವೆ. ಹಾಗಾಗಿ ಮನುಷ್ಯ ಒಳ್ಳೆಯದನ್ನು ಹಾಗೂ ತನಗೆ ಪ್ರಿಯವಾದುದ್ದನ್ನು ಮಾತ್ರ ದೇವರ ಅನುಗ್ರಹ ಉಳಿದದ್ದು ಶಾಪ ಎಂದು ಭಾವಿಸುವುದು ತಪ್ಪು. ಪ್ರತಿ ಕ್ರಿಯೆಗೂ ನಿರ್ದಿಷ್ಟವಾದ ಕಾರಣವಿರುತ್ತದೆ. ಅದನ್ನು ಭಗವಂತನ ಲೀಲೆ ಎಂದು ಕುವೆಂಪು ಗುರುತಿಸುತ್ತಾರೆ ಹಾಗೂ ಬದುಕಿನ ಸ್ವರೂಪವೇ ಹಾಗೆ ಎನ್ನುತ್ತಾರೆ. ಪಂಪನಿಗೆ ಅರ್ಜುನ, ರನ್ನನಿಗೆ ಭೀಮ, ಕುಮಾರವ್ಯಾಸನಿಗೆ ಕೃಷ್ಣ ಪ್ರಧಾನರಾದಂತೆ ಸಾಕೇತ ರಾಮಾಯಣದ ಊರ್ಮಿಳೆ, ತುಳಸಿ ರಾಮಾಯಣದ ರಾಮ, ಕಂಭರಾಮಾಯಣದ ಲಕ್ಷ್ಮಣ, ಹೀಗೆ ಒಂದೊಂದು ರಾಮಾಯಣದಲ್ಲಿ ಒಬ್ಬೊಬ್ಬರು ಉದಾತ್ತ ಬೆಳವಣಿಗೆಯನ್ನು ಕಾಣುತ್ತಾರೆ. ಆದರೆ ಕುವೆಂಪು ರಾಮಾಯಣದಲ್ಲಿ ಎಲ್ಲಾ ಪಾತ್ರಗಳು 'ಉದಾತ್ತ ಊರ್ಧ್ವಗಾಮಿ'ಗಳಾಗಿ "ಚಲಿಸುವ ಚೇತನಗಳೆ" ಆಗಿಬಿಡುತ್ತವೆ. ಪಾತ್ರಗಳಾಗಿ ತಾವು ಬೆಳೆಯುವುದಲ್ಲದೆ ನಮ್ಮನ್ನು ಬೆಳೆಸುತ್ತಾ ಮನಸ್ಸು- ಬುದ್ಧಿ ಅರಳುವಂತೆ ಮಾಡುತ್ತವೆ. ಕುವೆಂಪುರವರಿಗೆ ದುಷ್ಟ ಮಂಥರೆಯು ಮಾತೃಸ್ವರೂಪಿಣಿ ಅತಿಶಕ್ತಿಯೇ ಆಗುತ್ತಾಳೆ. ರಾವಣನ ಪಾತ್ರ ಯುದ್ಧದಲ್ಲಿ ತಾನು ಗೆದ್ದರೆ ಮಗಳು-ಅಳಿಯನ್ನು ಕರೆ ತಂದು ಬೀಳ್ಕೊಡುವಂತೆ ಕಳಿಸಿ ಕೊಡುವೆ ಎನ್ನುವಷ್ಟರ ಮಟ್ಟಿಗೆ ಬದಲಾಗುತ್ತದೆ. ಅಗ್ನಿದಿವ್ಯ ಒಬ್ಬಳಿಗಲ್ಲ ಅದು ನಿಷ್ಠೆಗೆ, ಶೀಲಕ್ಕೆ ಸಂಬಂಧಿಸಿದ್ದು, ಹಾಗಾಗಿ ಅದು ನಮ್ಮಿಬ್ಬರಿಗೂ ಇರಲಿ ನಡಿ ಎಂದು ಕೈ ಹಿಡಿದು ರಾಮಸೀತೆಯರು ಅಗ್ನಿದಿವ್ಯಕ್ಕೆ ಹೊರಡುತ್ತಾರೆ. ಗೆದ್ದು ಮರಳುತ್ತಾರೆ. ಸಂವೇದನೆಗಳಿಗೆ ಹೆಣ್ಣು-ಗಂಡುಗಳೆಂಬ ಬೇಧವಿಲ್ಲ ಎಂಬುದನ್ನು ಸ್ಪಷ್ಟೀಕರಿಸುತ್ತಾರೆ. ಋಷಿ ಸದೃಶ ಕವಿ ಎಂದರೆ ಮಾತ್ತ್ಯಾವುದು ಅಲ್ಲ. ಬದುಕನ್ನು ಮಾನವೀಯತೆ ನೆಲೆಯಲ್ಲಿ ವಿಶ್ಲೇಷಿಸುವುದು ಎಂದರ್ಥ ಎಂಬುದನ್ನು ಸಾಬೀತು ಮಾಡುತ್ತಾರೆ. 'ರಾಮಾಯಣ ದರ್ಶನಂ' ಕಾವ್ಯದ ಓದು ನಮ್ಮೆಲ್ಲರ ಬದುಕನ್ನು ಮತ್ತೊಮ್ಮೆ 'Re Tune' ಮಾಡಿ ನೋಡಿ ಅರ್ಥೈಸಿಕೊಳ್ಳುವಂಥದ್ದು ಎಂಬುವಷ್ಟರ ಮಟ್ಟಿಗೆ ಬದಲಾಯಿಸುವ ಶಕ್ತಿ ಹೊಂದಿರುವ ಕಾವ್ಯ.

ಕವಿಯ ದೃಷ್ಟಿ ಯಾವ ಪಾತ್ರಗಳನ್ನು ನೋಡುತ್ತದೋ ಆ ಪಾತ್ರಗಳು ಮಾಂತ್ರಿಕ ಸ್ಪರ್ಷಕ್ಕೆ ಒಳಗಾದ ಸಿಂಡ್ರೆಲಾಳಂತೆ ಅರಳತೊಡಗುತ್ತವೆ. ದುಷ್ಟತನವೂ ಬೃಹತ್ ಕಾರ್ಯವೊಂದರ ನಿರ್ಮಾಣಕ್ಕೆ ಅಡಿಗಲ್ಲಾಗಿ ನಿಂತಿರುವಂತೆ ಕಂಡುಬರುತ್ತದೆ. ಪ್ರತಿ ಸೃಷ್ಟಿಯಲ್ಲೂ ಪ್ರತಿ ಕಣದಲ್ಲೂ ಭಗವಂತನಿದ್ದಾನೆ ಎಂಬ ಆಸ್ತಿಕರ ಜೀವನ ಪ್ರೀತಿಯಂತೆ ಪ್ರತಿ ಪಾತ್ರಗಳ ದುಷ್ಟ ಚಿಂತನೆಯೂ ಕೂಡ ಬೃಹತ್ ಕಾರ್ಯಸಿದ್ಧಿಗೆ ಒಂದು 'ಕಾರ್ಯಕಾರಣವಾಗಿ' ಮಾತ್ರ ನಿಂತಿರುವಂಥದ್ದು ಎಂಬ ಅಭಿಪ್ರಾಯ ಮೂಡಿಸಲು ಪೂರಕವಾಗಿರುವುದು ಗೋಚರವಾಗುತ್ತದೆ.

ಸಂಸ್ಕೃತಿ, ನಾಗರೀಕತೆಯ ಸಂಪೂರ್ಣ ಹಾಗೂ ಸದೃಢವಾದ ಅಭಿವ್ಯಕ್ತಿ ಎಂದರೆ ಕಾವ್ಯಗಳು. ಮನುಷ್ಯ ಮನುಷ್ಯನನ್ನೆ ಶೋಷಿಸುವ ಕಾವ್ಯ ರಾಮಾಯಣ ಎಂದರೆ ತಪ್ಪಿಲ್ಲ. ಲಿಂಗ ಒಂದೇ ಇಲ್ಲಿ ಪ್ರಧಾನವಾಗಿ ಎಲ್ಲ ಶೋಷಣೆಗೂ ಮೂಲವಾಗುತ್ತದೆ. ಲಿಂಗ ಎಂಬುದು ಹೇಗೆ ಸಂಸ್ಕೃತಿಯೊಂದರಲ್ಲಿ ಪ್ರಧಾನ-ಗೌಣ ಸ್ಥಾನವನ್ನು ನಿರ್ಮಿಸುತ್ತದೆ. ಉಚ್ಚ-ಕನಿಷ್ಠ ಸ್ಥಾನವನ್ನು ನಿರ್ದೇಶಿಸುತ್ತದೆ. ಆದರ್ಶದ ಹೆಸರಲ್ಲಿ ಶೋಷಣೆಯುಂಟುಮಾಡುತ್ತದೆ ಎಂಬುದನ್ನು ಅದ್ಭುತವಾಗಿ ಕಟ್ಟಿಕೊಡುತ್ತದೆ. ಬಹುಶಃ ಜಗತ್ತಿನಾದ್ಯಂತ ಲಿಂಗ ಆಧಾರಿತ ಕಲ್ಪನೆ ಮಾನವ ಸಮಾಜವನ್ನು ನಿಯಂತ್ರಿಸುತ್ತಿರುವುದು ಕಂಡುಬರುತ್ತದೆ. ಸೃಷ್ಟಿಯ ಕಲ್ಪನೆಯಲ್ಲಿ ಗಂಡು-ಹೆಣ್ಣಿನ ಸೃಷ್ಟಿ ಎಂಬುದು ಎಲ್ಲ ಧರ್ಮಗಳಲ್ಲೂ ಶ್ರೇಷ್ಠ ಕನಿಷ್ಟ ಕಲ್ಪನೆಯನ್ನೇ ಕೊಡುತ್ತದೆ. ಮನುಷ್ಯನ ದೇಹದಲ್ಲಿ ದೇಹ ಎಂಬುದು ಹೆಣ್ಣಿನ ಕಲ್ಪನೆಯಾದರೆ ಬುದ್ಧಿ ಎಂಬುದು ಗಂಡಿನ ಸಂಕೇತ. ಈ ಧರ್ಮದ ನೋಟದಲ್ಲೂ ಗಂಡು, ಹೆಣ್ಣು ಚಿತ್ರಣ, ಮನುಷ್ಯ, ಮನುಷ್ಯರಲ್ಲಿ ಒಂದು ಹೆಚ್ಚು ಮತ್ತೊಂದು ಕಡಿಮೆ. "ಹಿರಿಮೆ" ಎಂಬುದೇ ಅಹಂಮಿನ ಪ್ರತೀಕವಾಗುತ್ತದೆ. "ಕೀಳರಿಮೆ" ಎಂಬುದೇ ಎಲ್ಲಡೆಯು ದಮನಿತರ (ಶೋಷಿತರ) ಪ್ರತೀಕವಾಗಿ ಬರುತ್ತದೆ.

ದಮನಿತರು, ನಿರ್ಲಕ್ಷಕ್ಕೆ, ತುಳಿತಕ್ಕೆ, ತಿರಸ್ಕಾರಕ್ಕೆ, ಕಷ್ಟಕ್ಕೆ ಸಿಲುಕಿದವರೆಂದು ಅಭಿಪ್ರಾಯ ಮೂಡುತ್ತದೆ. ರಾಮಾಯಣ ಮನುಷ್ಯ ಮನುಷ್ಯನನ್ನು ಶೋಷಿಸಿದ ಕಾವ್ಯವಾಗಿ ಹೊರಟರು ಸ್ತ್ರೀವಾದಿ ಓದಿನಲ್ಲಿ ಹೊಸದಿಕ್ಕನ್ನು ದರ್ಶಿಸುತ್ತದೆ. ಸೀತೆ, ಶೂರ್ಪನಖಿ, ಮಂಡೋದರಿ, ತಾರೆ, ಊರ್ಮಿಳೆ ಇಲ್ಲಿ ನಿರ್ಲಕ್ಷಿತರು, ಶೋಷಣೆಗೆ ಒಳಗಾದವರೆ. ರಾಮ ರಾವಣರು ಯಾರಾದರೂ ಸರಿ ತನ್ನ ನಿಲುವುಗಳಿಗೆ ವಿರೋಧ ಎನಿಸಿದರೆ ಅವಳ ಅಪಮಾನ- ಧಮನ ಶತಸಿದ್ಧ. ತಾರೆ, ಸೂರ್ಪನಖಿ, ಸೀತೆ, ಮಂಡೋದರಿ ಇವರೆಲ್ಲರೂ ಇದಕ್ಕೆ ಉದಾಹರಣೆ.

ಒಂದು ಅಭಿಪ್ರಾಯವನ್ನು ಕೇಳದೆ ದಿವ್ಯ ನಿರ್ಲಕ್ಷ್ಯ- ಊರ್ಮಿಳಾಳೊಂದಿಗಿನ ವರ್ತನೆ ತೋರುವ ಲಕ್ಷ್ಮಣ ಎಂಬ ಗಂಡು ಪಾತ್ರ, ತನ್ನ ಅಹಂಕಾರದ ಹೆಚ್ಚುಗಾರಿಕೆಗೆ ವಾಲಿಯಿಂದ ಆಳಲ್ಪಡುವ ಸುಗ್ರೀವನ ಹೆಂಡತಿ ತಾರೆ. ವಂಶ ಮರ್ಯಾದೆಯೋ, ಪುರುಷ ದೇಹದ ಅಹಂಕಾರವೊ, ಸೋದರಿ ಭಾವ ಎಚ್ಚೆತ್ತ ಸೋದರ ಭಾವವೋ, ಪ್ರಾಯ್ಡ್ ಹೇಳುವ ಹಾಗೆ ಪ್ರತಿ ೪ ನಿಮಿಷಕ್ಕೊಮ್ಮೆ ಸೆಕ್ಸ್ ಬಗ್ಗೆ ಯೋಚಿಸುವ ಗಂಡಿನ ಸಹಜ ಪ್ರಕೃತಿಗುಣವೋ ಸೀತೆಯ ಅಭಿಪ್ರಾಯ, ಮಂಡೋದರಿಯ ಅಭಿಪ್ರಾಯ ಬೆಲೆಕೊಡದ ಹೆಂಡತಿ, ಪರಸ್ತ್ರೀ ಎಂದಾಕ್ಷಣ ಹೆಣ್ಣು ಎಂಬ ಲಿಂಗಾಧಾರಿತ ಮನುಷ್ಯನ ಅಸ್ತಿತ್ವದ ನಿರಾಕರಣೆಯನ್ನು ನೋಡಬಹುದು. ಸೀತೆಗೆ ರಾಮ ಹೇಗೆ ಕಂಡ ಎಂಬುದೇ ಪ್ರಧಾನ ಪ್ರಶ್ನೆಯಾಗಿ ಮಾಡಿಕೊಳ್ಳತ್ತಲೇ ನಿರ್ಲಕ್ಷಿತ ಸ್ತ್ರೀ ಪಾತ್ರಗಳ ಕುರಿತು ಚರ್ಚಿಸಲು ಇದು ದಾರಿಯಾಗುತ್ತದೆ. ಇಲ್ಲೊಂದು ಸ್ತ್ರೀವಾದಿ ರೂಪವೊಂದನ್ನು ಕಟ್ಟಲು ಸಾಧ್ಯವೇ ಎಂಬ ಯೋಚನೆ ಮೂಡುತ್ತದೆ. ಸೀತೆ ಹೆಣ್ಣು ಲಿಂಗ ಎಂಬುದೇ ಸಮಾಜ, ಸಂಸ್ಕೃತಿ, ನಾಗರೀಕತೆಯಲ್ಲಿ

ಅನಾಥೆ ದಿಕ್ಕುದೆಸೆ ಇಲ್ಲದೆ ಸ್ಥಾನಮಾನ ಇಲ್ಲದೇ ನಿರಂತರ ಎಲ್ಲರ ಗಮನ ಸೆಳೆಯುವ ಆಕರ್ಷಕವಾದ ಸಂಗತಿಯಾಗುತ್ತದೆ.

ಸುಂದರಿ, ಅಪಮಾನಕ್ಕೆ ಒಳಗಾದ ಹೆಣ್ಣಿನ ಸಮಾಧಾನಕ್ಕೆ ಹೆಣ್ಣನ್ನು ನೋಯಿಸುವ ಪರಂಪರೆ ಹಾಸುಹೊಕ್ಕಾಗಿರುವ ಸಮಾಜ ಸಂಸ್ಕೃತಿ ಮಾನವರದು ಎಂಬುದನ್ನು ರಾಮ, ರಾವಣರ ಯುದ್ಧ ಸಾಬೀತು ಪಡಿಸುತ್ತದೆ.

ಮೌನವಾದ ಸೀತೆ ಹೆಣ್ಣು ನಾಗರೀಕತೆಗೆ, ಸಂಸ್ಕೃತಿಗೆ, ಸಮಾಜಕ್ಕೆ ಅವಳು ಸವಾಲೇ, ಆದರೂ ಶೋಷಣೆಗಳನ್ನು ಒಪ್ಪುವುದು ಅಸಹಾಯಕತೆ ನಿಜ, ಆದರೆ ಗಂಡು ಮಾನವ ಸಮಾಜಕ್ಕೆ ಎದಿರೇಟು ಎಂದೆನಿಸುತ್ತದೆ.

ರಾಮಾಯಣದ ಕಥೆಗೆ ಊರ್ಮಿಳೆಯೊಂದು ಬಲಿಹಾರ ಅವಶ್ಯವಿಲ್ಲದಿದ್ದರು ಸೃಷ್ಟಿಯಾದ ಪಾತ್ರ. ಸೃಷ್ಟಿಯಾದರು ಶೂನ್ಯ ಅನುಭವಗಳ ಒಡತಿ. ನೋವೋ–ನಲಿವೋ, ಪ್ರಿಯನೋ ದುರಳನೋ, ಸಂಗಾತಿಯೋ ಬಾಳಿನುದ್ದಕ್ಕೂ ಗಂಡೆಂಬ ವ್ಯಕ್ತಿಯೊಂದಿಗೆ ಸೀತೆ ಇದ್ದಳು. ಆದರೆ ಇವಳ ಬಾಳೋ ಅರ್ಥವಿಹೀನ. ಪಾತ್ರಕ್ಕೆ, ವ್ಯಕ್ತಿತ್ವಕ್ಕೆ ಬೆಲೆಯೇ ಇಲ್ಲ.[೧]

ಊರ್ಮಿಳಾ ದೇವಿಯ ಕತೆಯು ಮನದಲ್ಲಿ ಅನಾವರಣಗೊಳ್ಳುವುದು ಗಂಡಸರ ಪ್ರತಿಷ್ಠೆ, ಮಾನ, ಮನೆತನದ ಮರ್ಯಾದೆ ಕಾಯುವ, ಬಾಯಿಬೀಗ ಹಾಕಿಕೊಂಡ ಗೋರಿಯಂತೆ ಕಾಣುತ್ತಾಳೆ. ಅಂತರಂಗದ ವಿಚಾರಗಳ ಅನಾವರಣಕ್ಕೆ ಅವಕಾಶವೇ ಇಲ್ಲದ ಪಾತ್ರದಂತೆ ಕಂಡುಬರುತ್ತಾಳೆ. ದಾಂಪತ್ಯ ಎಂಬುದು ಇವಳಿಗಿಲ್ಲಿ ಏಕಮುಖಿ. ಅವನಿಲ್ಲದೆಯು ಅವನದೆಲ್ಲವನ್ನು ಆವಾಹಿಸಿಕೊಂಡು ಬದುಕುವುದು ಹಾಗೂ ಅದಕ್ಕಾಗಿ ಹೋರಾಡುವುದು. ಭ್ರಮಾತ್ಮಕವಾದ ವಾಸ್ತವದ ಆವರಣ ಅವಳೊಂದಿಗೆ. ಬೇಡವಾದರೂ ಅವಳೇ ಒಪ್ಪಿಕೊಂಡ ಕನ್ಯಾವ್ರತ. ತನ್ನ ದೇಹ ಮನಸ್ಸಿನ ಒಡೆಯ ಲಕ್ಷ್ಮಣನೆ ಎಂದು ೧೪ ವರ್ಷಗಳ ಭ್ರಮೆಯಲ್ಲಿ ಕೂರುವುದು. ಅಬ್ಬಾ ಗಂಡೇ ಎಷ್ಟು ಕ್ರೂರತ್ವ, ಜೀವಾವಧಿ ಕೈದಿಗೂ ಇಂಥದ್ದೊಂದು ಸ್ಥಿತಿ ಇರುತ್ತದೋ ಇಲ್ಲವೋ? ಹೆಣ್ಣು ಖಾಸಗಿ ಆಸ್ತಿ ಎಂಬುದಕ್ಕೆ ಈ ಪಾತ್ರ ನಿರ್ಮಾಣ ಸಾಲದೆ? ಆದರೂ ಅದೇ ಅವಳ ಅಸ್ತಿತ್ವ, ಗಟ್ಟಿಗಿತ್ತಿಯೇ ಈ ಪಾತ್ರ, ಯಾಕೆಂದರೆ ಗಂಡ, ತಂದೆ, ಮಗನ ಹೆಸರು, ಪ್ರತಿಷ್ಠೆಗಳಲ್ಲಿ ಗುರುತಿಸಿಕೊಳ್ಳುವ ಹೆಣ್ಣು ಪಾತ್ರಗಳಲ್ಲಿ ತನ್ನ ಅಸ್ತಿತ್ವದ, ತನ್ನ ಸಂದರ್ಭದ ಹಿನ್ನಲೆಯ ಮೂಲಕವೇ ಸಮಾಜಕ್ಕೆ ಪರಿಚಿತಳಾಗುತ್ತಾಳೆ. ಅವಳ ದೌರ್ಬಲ್ಯ ಎಂದರೆ ಕಾಯುವಿಕೆಯ ದುರಂತವೇ ಅವಳ ಅಸ್ತಿತ್ವವಾಗಿ ಊರ್ಮಿಳೆ ಎಂದರೆ ಜೀವಮಾನವಿಡಿ ಕಾದವಳು. ಇವಳ ಗಂಡ ಲಕ್ಷ್ಮಣ ರಾಮನ ತಮ್ಮ ಎಂದು ಅವಳಿಂದ ಗುರುತಿಸಲ್ಪಡುತ್ತಾರೆ. ಕುಟುಂಬದಲ್ಲಿ ಹೆಂಡತಿ ಒಂಟಿಯಾಗಿ ಸಿಗುವುದು ಎಂದರೆ ಕಾನೂನಿನ ಪ್ರಕಾರ ಕೌಟುಂಬಿಕ ಹಿಂಸೆಯಾಗುತ್ತದೆ. ಅದಕ್ಕೆ ಶಿಕ್ಷೆಗಳನ್ನು ವಿಧಿಸಲಾಗುತ್ತದೆ. ಕಾಯುವಿಕೆ, ಭ್ರಮೆ, ಇಲ್ಲಿನ ಪ್ರೀತಿ, ತಪಸ್ಸು, ತಾಳ್ಮೆ, ಸತಿತನ ಇವೆಲ್ಲವೂ ಒಂದು ಸೀತೆಗಿಂತಲೂ ಅಧಿಕ ಎಂದು ನಂಬಿಸಲಾಗುತ್ತದೆ.

ಇತಿಹಾಸವನ್ನು ಬದಲಿಸಲಾಗುವುದಿಲ್ಲ ಆದರೆ ಅದು ಬದಲಾಗದೆ ನಮ್ಮ ವರ್ತಮಾನ ಭವಿಷ್ಯಗಳು ಬದಲಾಗುವುದಿಲ್ಲ ಎಂಬ ಸವಾಲನ್ನು ಇತರ ದಮನಿತರ ವರ್ಗಗಳಿಗಿಂತ ಹೆಚ್ಚಿನ ತೀವ್ರತೆ ಸಂಕೀರ್ಣತೆ ಮತ್ತು ಅಮೂಲ್ಯತೆಯಲ್ಲಿ ಎದುರಿಸುತ್ತಿರುವುದು ಹೆಣ್ಣಿನ ಹೋರಾಟ. ಅಥವಾ ಇತಿಹಾಸದ ಖಾಲಿ ಜಾಗ ತುಂಬುವ ಪ್ರಯತ್ನದಲ್ಲಿಯೂ ನಂಬಿಕೆ ಇಡುವುದು ಸಾಧ್ಯವಿಲ್ಲ. ಏಕೆಂದರೆ ಆ ಪ್ರಯತ್ನವು ಅಂತಿಮವಾಗಿ ನಿರ್ಲಕ್ಷಿತ ನೆಲೆಯನ್ನೇ ಬಲಪಡಿಸುತ್ತದೆ. ಹೀಗಾಗಿ ಇತಿಹಾಸದ ಮರು ನಿರೂಪಣೆ ಹೆಣ್ಣಿನ ಎದುರಿಗಿರುವ ಅತ್ಯಂತ ಪ್ರಬಲವಾದ ಆವರಣ. ಈ ಮರು ನಿರೂಪಣೆಯು ಸ್ಥಾಪಿತ ಅಧಿಕಾರ ಕೇಂದ್ರಗಳ ಅನೈತಿಕತೆಯನ್ನು ಎತ್ತಿ ಹಿಡಿಯುವ ಮೂಲಕ ಹೆಣ್ಣಿನ ಹೋರಾಟದ ನೈತಿಕ ಬಲ ಹೆಚ್ಚಿಸುತ್ತದೆ ಎಂಬ ಗಾಢವಾದ ನಂಬಿಕೆಯಲ್ಲಿ ಸ್ತ್ರೀವಾದಿ ಅಧ್ಯಯನವಿದೆ. ಹೆಣ್ಣಿನ ಕಣ್ಣಿನ ಮೂಲಕ ನೋಡುವ ಈ ನೋಟಗಳು ಅಪೂರ್ಣವಾದದನ್ನು ಪೂರ್ಣಗೊಳಿಸುವ ಮತ್ತು ಇತಿಹಾಸದಲ್ಲಿ ಮುಚ್ಚಿಡಲಾದ ಪಾರ್ಶ್ವವನ್ನು ಬೆಳಕಿಗೆ ತರುವ ಐತಿಹಾಸಿಕ ಪ್ರಯತ್ನಗಳು ಹೌದು.

ಹೆಣ್ಣಿನ ಮಹತ್ವಕ್ಕೆ ಕವಡೆಕಾಸಿನ ಕಿಮ್ಮತ್ತನ್ನು ಕೊಡದೆ ಅವಳ ತನು, ಮನ, ಧನಗಳನ್ನು ತನ್ನ ಸಲುವಾಗೆ ಇರುವ ಹಾಗೆ ಬಳಸಿ ಬಿಸಾಕುವುದರ ಬಗ್ಗೆ ಯಾವ ಕಾಲದ ಹೆಣ್ಣಿಗೂ ಇರುವ ತಿರಸ್ಕಾರ ಪ್ರತಿರೋಧ ಕೆಲವೊಮ್ಮೆ ಕಾವ್ಯಗಳಲ್ಲಿ ಕಂಡುಬರುತ್ತವೆ.

ಶ್ರೀರಾಮನ ಚಿತ್ರ ಭಗ್ನಗೊಂಡರೆ ಗಂಡಿನ ನಿಜರೂಪ ದರ್ಶನವಾಗುತ್ತದೆ. ಸತ್ಯದ ನವದರ್ಶನ. ಇದು ಗಂಡು ತನಗೆ ತಾನೇ ಕೊಟ್ಟುಕೊಂಡಿರುವ ಶ್ರೇಷ್ಠತೆಯ ಅಧಿಕಾರದ ಕವಚಗಳು ಹೆಣ್ಣಿಗೆ.

ತೊಡಿಸಲಾಗಿರುವ ಕೀಳರಿಮೆಯ ಸೋಗು ಕಳಚಬೇಕು. ಅಮೂರ್ತ ಸಂಗತಿಗಳಲ್ಲಿ ಗಂಡಿಗೆ ಇರುವ ಅಧಿಕಾರದತ್ತ ಸವಲತ್ತುಗಳು ಹೆಣ್ಣಿಗೆ ಯಾಕೆ ನಿರಾಕರಿಸಲ್ಪಪಟ್ಟಿವೆ ಕಲೆಯೋ, ಪುರುಷ ಪಕ್ಷಪಾತಿಯೋ ಎನ್ನುವ ವ್ಯಗ್ರತೆಯಲ್ಲಿ ಕಾಣಬಹುದು.[೨]

ಮಕ್ಕಳನ್ನು ಹೆತ್ತು, ಪೋಷಿಸಿ ಗಂಡನ ಅಹಂಕಾರವನ್ನು ಹಾಡಾಗಿಸಿ ಹಾಡಿಸಿ ಗಂಡು ಸಮಾಜಕ್ಕೆ ಮೂಡಿ ತಿವಿದಿದ್ದೆನೋ ಎಂದೆನಿಸುತ್ತದೆ. ನಾ ಇನ್ನು ಬರುವುದಿಲ್ಲ ಎನ್ನುವುದರ ಮೂಲಕ ಗಂಡು ಅಹಂವಿನ ನೆರಳಲ್ಲಿ ಸೃಷ್ಟಿಯಾಗಿರುವ ಸಂಸ್ಕೃತಿಯ ಭಾಗವಾಗಿರುವ ಮನೆ, ಕುಟುಂಬದ ಕಲ್ಪನೆ ಒಡೆಯುವಿಕೆ ಹಾಗೂ ಪ್ರತಿ ಜೀವವು ವಿಭಿನ್ನ, ಶ್ರೇಷ್ಠ, ಸ್ವತಂತ್ರ ಎಂಬುದರ ಎಳೆಯಾಗಿ ಸೀತೆ ಬರುತ್ತಾಳೆ. ಭೂಮಿ ಹೊಕ್ಕಾಳೊ, ಆತ್ಮಹತ್ಯೆ ಮಾಡಿಕೊಂಡಳೋ, ಗಂಡಿನ ನಿಯಮಗಳನ್ನು ಧಿಕ್ಕರಿಸಿ ಹೋದದ್ದಂತು ನೋಡಬಹುದು. ಮಾನವ ಹೆಣ್ಣಾಗಲಿ, ಗಂಡಾಗಲಿ ಶೋಷಣೆಯ ನಿರಂತರತೆಗೆ ಒಳಗಾದಾಗ ಸ್ವಾತಂತ್ರ್ಯದ ಕಡೆ ಮುಖಮಾಡಿ ಮನುಷ್ಯನೇ ಸೃಷ್ಟಿಸಿರುವ ಕುಟುಂಬ ಕಲ್ಪನೆ ವಿಭಜನೆಗೆ ಒಳಗಾಗುತ್ತದೆ. ಇದೊಂದು ಪರಿಪೂರ್ಣ ಸ್ತ್ರೀವಾದಿ ಕಾರ್ಯವೇ ಎಂದೆನ್ನಬಹುದು. ಸಮಾಜದ ನಿರ್ಲಕ್ಷವೇ ಅವಳ ಆಯುಧವಾಗಿ ಮಾನವನಾಗುವ ಕಡೆಗಿನ ಚಲನೆಗೆ ಕಾರಣವಾಯಿತೇನೋ? ಎಂದೆನಿಸುತ್ತದೆ. ಸ್ತ್ರೀವಾದಿ ದೃಷ್ಟಿಕೋನ ಹೆಣ್ಣಾಗುವುದೊಂದೇ ಅಲ್ಲ ಅದರೊಂದಿಗೆ ಮಾನವನಾಗುವ ಕಡೆಗಿನ ಚಲನೆ ಎಂದೆನಿಸುತ್ತದೆ.

**ಟಿಪ್ಪಣಿಗಳು**

೧. ಊರ್ಮಿಳಾ– ಕವಿತಾ ರೈ ಅವರ ಕವಿತೆ.

೨. ಪ್ರಜಾವಾಣಿ, ಮುಕ್ತಛಂದ, ಪುಟ–೪, ಲೇಖಕಿ: ಡಾ. ಎಂ. ಉಷಾ, ಅವಳು ಇವಳು, ದಿನಾಂಕ: ೨೨.೧೧.೨೦೧೫.

# ಗ್ರಂಥ ಋಣ


೧. ಊರ್ಮಿಳಾ, ಹಿಂದಿ ಮತ್ತು ಕನ್ನಡ ಕಾವ್ಯಗಳ ತೌಲನಿಕ ಅಧ್ಯಯನ, ಡಾ. ಪ್ರಧಾನ್ ಗುರುದತ್ತ, ಡಾ. ಮೇ. ರಾಜೇಶ್ವರಯ್ಯ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೧೯೬೪, ನವೆಂಬರ್–೨೦೧೧.

೨. ಶ್ರೀ ರಾಮಚಂದ್ರ ಪ್ರಭು, ವಿವರಣೆ: ಜೆ.ಪಿ. ರಾಜರತ್ನಂ, ಶ್ರೀಮಾನ್ ಡಿ.ವಿ.ಜಿ. ಅವರು ಚಿತ್ರಿಸಿರುವ, ಶ್ರೀಮಾನ್ ಯು. ನರಸಿಂಹ ಮಲ್ಯ ಸ್ಮಾರಕ ಪುಸ್ತಕ ಮಾಲೆ–೧, ೧೯೫೮, ೧೦.೧೦.೧೯೭೭.

೩. ನಾಗಚಂದ್ರನ ಪಂಪರಾಮಾಯಣ ಸಂಗ್ರಹ (ಹೊಸಗನ್ನಡ ಗದ್ಯಾನುವಾದ), ಡಾ. ಕೆ.ವೈ. ಶಿವಕುಮಾರ್, ಚೇತನ ಬುಕ್ ಹೌಸ್, ಮೈಸೂರು, ೨೦೦೦.

೪. ರಾಮಾಯಣದ ಅಪರೂಪದ ಪಾತ್ರಗಳು, ಡಾ. ಸಿ.ಎಸ್. ಊರ್ಮಿಳಾ, ಸುಂದರ ಸಾಹಿತ್ಯ, ಬೆಂಗಳೂರು, ೧೯೯೫, ೨೦೦೨.

೫. ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ, ಡಾ. ಮಂದಾಕಿನಿ ಭೀಮಸೇನರಾವ್ ತವಗ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫, ೨೦೦೨.

೬. ವಾಲ್ಮೀಕಿ ರಾಮಾಯಣ ಅಂತರಂಗ ಶೋಧ, ಪ್ರೊ. ವಿಷ್ಣು ಜೋಶಿ ಕುಮಟಾ, ಎಂ.ಎ. ಸುಬ್ರಹ್ಮಣ್ಯ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೧೨.

೭. ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಪೌರಾಣಿಕತೆ, ಡಾ. ವಿಠಲರಾವ್ ಟಿ. ಗಾಯಕ್ವಾಡ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೮. ಒಂದಿಷ್ಟು ರಾಮಾಯಣ ಒಂದಿಷ್ಟು ಮಹಾಭಾರತ, ಪ್ರೊ. ಜಿ. ವೆಂಕಟಸುಬ್ಬಯ್ಯ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೧.

೯. ತುಳಸೀದಾಸರ ರಾಮಚರಿತಮಾನಸ (ದ್ವತೀಯ ಪರಿಷ್ಕೃತ ಸಂಸ್ಕರಣ), ಅನುವಾದ: ಮ.ಸು. ಕೃಷ್ಣಮೂರ್ತಿ, ಗೀತಾ ಬುಕ್ ಹೌಸ್, ಮೈಸೂರು, ೧೯೯೨, ೨೦೦೨.

೧೦. ಶ್ರೀರಾಮಾಯಣದ ಮಹಾಪ್ರಸಂಗಗಳು, ಪ್ರೊ. ಕೆ.ಎಸ್. ನಾರಾಯಣಚಾರ್ಯ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ–೫೮೦ ೦೨೦, ೨೦೦೪, ೨೦೦೬, ೨೦೦೯.

೧೧. ತೊರವೆ ರಾಮಾಯಣ, ಕುಮಾರ ವಾಲ್ಮೀಕಿ ಪ್ರಶಸ್ತಿ, ಪ್ರಧಾನ ಸಂಪಾದಕರು, ಪ್ರೊ. ಎನ್. ಬಸವರಾಧ್ಯ, ಸಂಪಾದಕರು: ಪ್ರೊ. ಕೆ.ಎಂ. ಸೀತಾರಾಮಯ್ಯ, ಭಾರತಿ ಸಂಸ್ಕೃತಿ ಪ್ರತಿಷ್ಠಾನ ಬೆಂಗಳೂರು, ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ–ಬೆಂಗಳೂರು, ೨೦೦೭.

೧೨. ಸಾಕೇತ, ಅನುವಾದ: ಕೆ. ಜನಗನ್ನಾಥ ಶಾಸ್ತ್ರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೯.

೧೩. ಶ್ರೀರಾಮಾಯಣ ದರ್ಶನಂ ಒಂದು ವಿಮರ್ಶಾತ್ಮಕ ಅಧ್ಯಯನ, ಡಾ. ಎಚ್.ಜೆ. ಲಕ್ಕಪ್ಪಗೌಡ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೧.

೧೪. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ: ಡಾ. ಎಚ್.ಎಸ್. ಶ್ರೀಮತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೧೫. ಮಹಿಳಾ ಸಂಕಥನ, ಡಾ. ಗಾಯತ್ರೀನಾವಡ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೩.

೧೬. ಮನಸ್ಮೃತಿಯಲ್ಲಿ ಶಾಶ್ವತ ಜೀವನಮೌಲ್ಯಗಳು, ನ್ಯಾ.ಡಾ.ಮ. ರಾಮಾಜೋಯಿಸ್, ಸ್ವಪ್ನ ಬುಕ್ ಹೌಸ್, ಬೆಂಗಳೂರು-೨೦೦೭.

೧೭. ಅಹಲ್ಯೆ, ಪು.ತಿ. ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೮. ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ: ಡಾ. ವಿಜಯಶ್ರೀ ಸಬರದ, ಸಾಹಿತ್ಯ ವಿಮರ್ಶೆ, ಸಂ. ೬, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ.

೧೯. ವಿಮುಕ್ತ, ಅಭಿನವ ಚಾತುರ್ಮಾಸಿಕ, ಓಲ್ಗಾ ಕಥಾ ಜಗತ್ತಿನ ಜೊತೆಗೊಂದು ಮಾತುಕಥೆ, ಕನ್ನಡಕ್ಕೆ: ಜಿ. ವೀರಭದ್ರಗೌಡ, ಸಂ-೧೮, ಸಂಚಿಕೆ: ೨, ೩.

೨೦. ಸೀತಾಯಣ, ಡಾ. ಪೋಲಂಕಿ ರಾಮಮೂರ್ತಿ, ವಿಚಾರಿ ಪ್ರಕಾಶನ ಶಿವಮೊಗ್ಗ, ೧೯೮೪.

೨೧. ಶ್ರೀರಾಮಾಯಣ ಪಾತ್ರ ಪ್ರಪಂಚ, ಡಾ. ಕೆ.ಎಸ್. ನಾರಾಯಣಾಚಾರ್ ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ-೨೦೧೦.

೨೨. ಇತಿಹಾಸದ ಕಣ್ಣಲ್ಲಿ ರಾಮಾಯಣ, ಹೆಚ್.ಡಿ. ಸಂಕಾಲಿಯಾ, ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು-೧೯೯೦.

೨೩. ರಾಮಾಯಣದಲ್ಲಿನ ಪಾತ್ರಗಳು, ಪೆರಿಯಾರರ ಬರಹಗಳು, ಕನ್ನಡಿಸಿದವರು ಪ್ರೊ. ಎಂ.ಡಿ. ನಂಜುಂಡಸ್ವಾಮಿ, ಅಭಿರುಚಿ ಪ್ರಕಾಶನ, ಮೈಸೂರು.

೨೪. ಮಹಿಳಾ ಅಧ್ಯಯನಗಳು, ಶ್ರೀ ಒಡೆಯರ್ ಡಿ. ಹೆಗಡೆ, ಎನ್. ಅನ್ನಪೂರ್ಣೇಶ್ವರಿ, ಮುತ್ತು ಎಂಟರ್ ಪ್ರೈಸಸ್, ಮೈಸೂರು-೨೦೧೦.

೨೫. Social Development and Empowerment of Marginalized Groups, Sage Publishing House, New Delhi-2001.

೨೬. ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ, ಡಾ. ಬರಗೂರು ರಾಮಚಂದ್ರಪ್ಪ, ಅಂಕಿತ ಪುಸ್ತಕ, ಬೆಂಗಳೂರು–೨೦೦೧.

೨೭. ರಾಮಾಯಣ ವಿಷವೃಕ್ಷ: ಅನು: ಬಂಜಗೆರೆ ಜಯಪ್ರಕಾಶ್, ಲಂಕೇಶ್ ಪ್ರಕಾಶನ, ಬೆಂಗಳೂರು ರಂಗನಾಯಕಮ್ಮನವರ ರಾಮಾಯಣ ವಿಷವೃಕ್ಷಮ್, ಆಧಾರಿತ) ೨೦೧೦.

೨೮. ದ್ರೌಪದೀ ಸಮೀಕ್ಷೆ, ಡಾ. ಮಣಿಮಾಲಿನಿ. ವಿ.ಕೆ. ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ೧೯೯೯.

೨೯. ಸ್ತ್ರೀವಾದಿ ಸಂಶೋಧನೆ– ವಿಧಿವಿಧಾನಗಳು, ಡಾ. ಎಚ್.ಎಸ್. ಶ್ರೀಮತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು–೨೦೧೨.

೩೦. ಜನಪ್ರಿಯ ವಾಲ್ಮೀಕಿ ರಾಮಾಯಣ– ಕುವೆಂಪು, ಉದಯರವಿ ಪ್ರಕಾಶನ, ಮೈಸೂರು, ೨೦೧೫.

೩೧. ವಿಮರ್ಶೆಯ ಪರಿಭಾಷೆ, ಓ.ಎಲ್. ನಾಗಭೂಷಣ ಸ್ವಾಮಿ, ಅಭಿನವ, ಬೆಂಗಳೂರು–೨೦೧೨.

೩೨. ಸಾಹಿತ್ಯ ವಿಮರ್ಶೆ ಮಾದರಿಗಳು, ಡಾ. ಸಿ.ಆರ್. ಯರವಿನತೆಲಿ ಮಠ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೩೩. ಮುದ್ದಣ ಕವಿಯ ಶ್ರೀ ರಾಮಾಶ್ವಮೇಧ ಸಂಗ್ರಹಂ, ಸಂಗ್ರಹಕಾರರು, ಎನ್. ಅನಂತರಂಗಾಚಾರ್, ಚೇತನ ಮುದ್ರಣಾಲಯ, ಮೈಸೂರು, ೧೯೫೮.

೩೪. ದೀಕ್ಷಾ ಮಂಥರೆ, ಪ್ರೊ. ಸುಲೋಚನ ಹೆಚ್.ಆರ್. (ಸುಕೃತ), ಸಹ್ಯಾದ್ರಿ ಪ್ರಕಾಶನ, ಮೈಸೂರು, ೨೦೦೪.

೩೫. ಮಹಾಭಾರತದಲ್ಲಿ ಮಹಿಳಾ ಪಾತ್ರಗಳು, ಸಂ– ನಿರುಪಮಾ, ಮಿಥಿಕ್ ಸೊಸೈಟಿ, ಬೆಂಗಳೂರು, ೧೯೭೯.

೩೬. ರೂಪ ಸ್ವರೂಪ, ಡಾ. ವಿಠಲರಾವ್ ಗಾಯಕ್ವಾಡ್, ಶಾಲಿನಿ ಪ್ರಕಾಶನ, ಹೊಸಪೇಟೆ, ೧೯೯೭.

೩೭. ಸ್ತ್ರೀವಾದ: ತಾತ್ತ್ವಿಕತೆ, ಶ್ರೀಮತಿ ಎಚ್.ಎಸ್. ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨.

೩೮. ಅಲಕ್ಷಿತರ ಸಮಾಜಶಾಸ್ತ್ರ, ಸಂ: ಡಾ. ಕೆ.ಎಂ. ಮೇತ್ರಿ, ಡಾ. ಎಂ. ಗುರುಲಿಂಗಯ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೩೯. ಕರ್ನಾಟಕ ಸಂಶೋಧನಾ ಜಾನಪದ, ಸಂ. ಪ್ರೊ. ಎ.ವಿ. ನಾವಡ, ವಿಸ್ತರಣೆ ಹಾಗೂ ಸಲಹಾ ಕೇಂದ್ರ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ೨೦೧೪.

೪೦. ಶ್ರೀ ರಾಮಾಯಣ ಮಹಾನ್ವೇಷಣಂ– ಒಂದು ಸಮೀಕ್ಷೆ, ವಿಮರ್ಶಕರು, ಡಾ. ಬಿ.ಎಸ್. ಸ್ವಾಮಿ, ದಿವ್ಯಚಂದ್ರ ಪ್ರಕಾಶನ, ೨೦೦೯.

೪೧. ವಾಲ್ಮೀಕಿ ಚಿಂತನ ಮಂಥನ, ಪ್ರೊ. ವಿಷ್ಣುಜೋಶಿ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೧೨.

೪೨. ರಾಮಾಯಣ ಮರುದರ್ಶನ, ಸಂ: ಡಾ. ಮಂಜುನಾಥ ಬೇವಿನಕಟ್ಟಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೪೩. ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಪೌರಾಣಿಕತೆ, ಡಾ. ವಿಠಲರಾವ್ ಟಿ. ಗಾಯಕ್ವಾಡ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೪೪. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ– ಒಂದು ಪ್ರವೇಶಿಕೆ, ಡಾ. ಡಿ. ಮಂಗಳಾ ಪ್ರಿಯದರ್ಶಿನಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೪೫. ತುಳಸೀದಾಸರ ರಾಮಚರಿತಮಾನಸ, ಅನು: ಮ.ಸು. ಕೃಷ್ಣಮೂರ್ತಿ, ಗೀತಾ ಬುಕ್ ಹೌಸ್, ಮೈಸೂರು, ೨೦೦೨.

೪೬. ವಚನ ರಾಮಾಯಣ, ತ.ಸು. ಶಾಮರಾಯ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೨.

೪೭. ಜನಪದ ರಾಮಾಯಣ, ರಾಗೌ, ಪಿ.ಕೆ. ರಾಜಶೇಖರ, ಎಸ್. ಬಸವಯ್ಯ, ಶ್ವೇತಾದ್ರಿ ಪ್ರಿಂಟರ್ಸ್, ಮೈಸೂರು, ೧೯೭೩.

೪೮. ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ– ಸಂಪುಟ–೧, ಕಾವ್ಯ, ಸಂ: ಡಾ. ಎಸ್.ವಿ. ಪ್ರಭಾವತಿ, ಪ್ರಸಾರಾಂಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಾಪುರ, ೨೦೧೩.

೪೯. ಹೆಣ್ಣು–ಹೆಂಗಸು, ಎಚ್.ಎಸ್. ಶ್ರೀಮತಿ, ಬ್ಯಾಲದಕೆರೆ ಪ್ರಕಾಶನ, ಮಂಡ್ಯ, ೨೦೦೪.

೫೦. ಗತಿಪ್ರಜ್ಞೆ, ಪ್ರೊ. ಜಿ. ವೆಂಕಟಸುಬ್ಬಯ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೫೧. ನಾ ಕಂಡ ರಾಮಾಯಣ, ಸದಾಶಿವಯೋಗಿ, ಶ್ರೀ ಗುರುಕುಲ ಪ್ರಕಾಶನ, ತಿಪಟೂರು, ೨೦೧೩.

೫೨. ಕುವೆಂಪು: ಮಹಿಳಾ ಮಂಥನ, ಸಂ: ಡಾ. ಹಿ.ಚಿ. ಬೋರಲಿಂಗಯ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೫೩. ರಕ್ತಿ–ರೂಪಣೆ, ಡಾ. ಸಿ.ಎನ್. ರಾಮಚಂದ್ರನ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೫೪. ಸಿಮೊನ್ ದ ಬೋವಾ– ದ ಸೆಕೆಂಡ್ ಸೆಕ್ಸ್, ಡಾ. ಎಚ್.ಎಸ್. ಶ್ರೀಮತಿ, ಅಧ್ಯಯನ ಮಂಡಲ, ಕಾವ್ಯ ಮಂಡಲ, ಬೆಂಗಳೂರು, ೨೦೦೭.

೫೫. ಶ್ರೀ ರಾಮಾಯಣ ಸಾಹಸ್ರಿ, ಡಾ. ಕೆ.ಎಸ್. ನಾರಾಯಣಾಚಾರ್ಯ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೯.

೫೬. ಶ್ರೀ ರಾಮಕಥಾಸಾರ, ಕನ್ನಡ ರೂಪಾಂತರ ಮತ್ತೂರು ಕೃಷ್ಣಮೂರ್ತಿ, ೨೦೦೫.

೫೭. रामकथा विश्राम, पं. रमापति पांड़ेय, आशीष प्रकाशन, कानपुर, २०११.

58. .

೫೯. राम रचि राखा, डाँ. आदर्श मदान, यतीन्द्र साहित्य सदन, भीलवाडा, १९९८.

೬೦. रामायण के महिला पात्र, डाँ. पांडुरंग राव, भारतीय ज्नानपीठ प्रकाशन, नयी दिल्ली–१९९३.

೬೧. ईक्श परामर्शदाता, आचार्य विश्वनाथ सिंह, सं. डाँ. परशुराम सिंह, श्रीक्रुश्ण प्रकाशन, आरा, २०११.

೬೨. साकेत तथा रामायणदर्शनम महाकाव्यों मे प्रमुख स्त्री पात्रः एक तुलनात्मक अध्ययन, आनुसंधाता, महमद अली, उच्च शिक्शा और शोध सन्स्थान, धारवाड, एम.फिल, शोध प्रबंध, २००६.

೬೩. किस के राम कैसे राम– शैलेश मटियानी, लहर प्रकशन, इलाहाबाद, १९९६.

